# ನಪುಂಸಕ

ಕೌಟುಂಬಿಕ ಕಾದಂಬರಿ

ಶ್ರೀಕೃಷ್ಣ ಪಾಟೀಲ

ಸುದರ್ಶನ ಪ್ರಕಾಶನ

ತಾರಾನಿವಾಸ : : ತಿಪಟೂರು

ಮೊದಲನೆಯ ಮುದ್ರಣ : ಏಪ್ರಿಲ್ ೧೯೫೫
ಸುದರ್ಶನ ಕಾದಂಬರಿ. ೬.



ಮುಖ ಚಿತ್ರ :
ಜಿ. ಕೆ. ಮೂರ್ತಿ, ಧಾರವಾಡ

ಬೆಲೆ : ರೂ ೧—೪—

ಮುದ್ರಣ :
ಇಂಡಿಯಾ ಪ್ರೆಸ್, ಮೈಸೂರು.

# ಎರಡು ಮಾತು

ಸುಮಾರು ೧೫-೨೦ ವರುಷಗಳ ಹಿಂದೆ ನನ್ನ ಗೆ|| ಪು. ಗೋ. ಕುಲಕರ್ಣಿಯವರು ಹರಟೆಯ ಸಮಯದಲ್ಲಿ '**ನಪುಂಸಕ**' ಕಾದಂಬರಿಯ ಅಸ್ಥಿಪಂಜರದಂತಹ ಒಂದು ಸಂಗತಿಯನ್ನು ಹೇಳಿದರು. ನಾನು ಆಗ ಕೇವಲ ಕುತೂಹಲದಿಂದ ಕೇಳಿದೆನು. ಕಾದಂಬರಿಯ ವಸ್ತುವಾಗಬಹುದೆಂದು ತಿಳಿದಿರಲಿಲ್ಲ. ನನ್ನ ಸಾಹಿತ್ಯ ಸೇವೆಯು ಆರಂಭವಾಗುವ ವರೆಗೂ ಅದು ಸುಪ್ತಪ್ರಜ್ಞೆಯಲ್ಲಿ ಹುದುಗಿದ್ದಿತು. ನೆನಪಿಗೆ ಬಂದ ಸಮಯಕ್ಕೊಮ್ಮೆ ಆ ಕನ್ನೆಯ ( ಇಲ್ಲಿ ಕಲ್ಯಾಣಿ ) ಬಾಳು ತಾಪದಾಯಕವೆನಿಸುತ್ತಿದ್ದಿತು ! ಸಂಕಟಪ್ರದೆನಿಸುತ್ತಿದ್ದಿತು ! ಅದು ನನ್ನ ಅಂತಃಕರಣವನ್ನು ಸದಾ ಕೊರೆಯುತ್ತಿದ್ದಿತು !

ಈಗ ನಾಲ್ಕೈದು ತಿಂಗಳುಗಳ ಹಿಂದೆ ಇಂಥದೇ ಬೇರೊಂದನ್ನು ನನ್ನ ಗೆ|| ಜಿ. ಜಿ. ಕುಲಕರ್ಣಿ, ಬೆಳಗಾವಿ ಖಾದಿ ಭಂಡಾರದ ಮ್ಯಾನೇಜರರು ಹೇಳಿದರು. ಮೊದಲಿನ ಸಂಗತಿಗೂ, ಈ ಸಂಗತಿಗೂ ವಿಶೇಷ ಅಂತರವಿರಲಿಲ್ಲ. ಎರಡರಲ್ಲಿಯೂ ಒಂದೇ ವಂಚನೆ, ಒಂದೇ ಸ್ವಾರ್ಥ, ಒಂದೇ ವಿಚಾರ, ಒಂದೇ ಗುರಿ ! ಈ ಎರಡರ ಸಂಗಮದಿಂದ ಈ ಕಾದಂಬರಿಯು ಈಗ ರೂಪುಗೊಂಡಿರುವುದು.

ತನ್ನ ಪ್ರವೃತ್ತಿಯ ರುಚ್ಯರ್ಥವಾಗಿ ಗಂಡಸು ಹೆಣ್ಣಿನ ಕೊಲೆಯನ್ನು ತ್ರಿಕಾಲದಲ್ಲಿಯೂ ಮಾಡುತ್ತ ಬಂದಿರುವನು. ಮುಂದೂ ಮಾಡುವನು. ಅವಳಿಗೆ ಸಲ್ಲಿಸುವ ಗೌರವವು ಅವನ ಅಂತಃಕರಣದ ಒಂದು ಅಂಶ ಮಾತ್ರ ! ಅಂತಃಕರಣವು ದುಃಖದ ಸಂಗತಿಗಳನ್ನು ನೋಡಿದ, ಕೇಳಿದ ಮೇಲೆ ಹುಟ್ಟುವ ಭಾವನೆ. ಕಲ್ಯಾಣಿಯಂಥವಳಿಗೆ ಇಂಥ ಅಂತಃಕರಣ ಸಾಲದು. ಅವರು ತಮ್ಮ ವ್ಯಕ್ತಿತ್ವವನ್ನು ತಾವೇ ರಕ್ಷಿಸಿಕೊಳ್ಳಬೇಕು. ಪ್ರತಿಭಟಿಸಬೇಕು.

ಪ್ರಸ್ತಾಪಿಸಬೇಕು. ಇದು ಸಹಜ. ಕಾದಂಬರಿಯಲ್ಲಿ ಚರ್ಚಿಸಿದ ವಿಷಯ ಇಷ್ಟು! ಓದುಗರು ಅದನ್ನು ಎಷ್ಟರಮಟ್ಟಿಗೆ ನಂಬುವರೋ!

ಗೆಳೆಯ ತಾ. ರಾ. ನಾಗರಾಜರವರು ತಮ್ಮ ಪ್ರಕಾಶನದಲ್ಲಿ ನನ್ನ ಕಾದಂಬರಿಗೆ ಅನುಕೂಲತೆ ಕೊಟ್ಟು, ನಿಮ್ಮ ಕೈಸೇರುವಂತೆ ಬೆಳಕಿಗೆ ತಂದುದಕ್ಕೆ ಉಪಕೃತನಾಗಿದ್ದೇನೆ.

**ಕೋನವಾಳಗಲ್ಲಿ.**
೧೧೮೮
೩೧-೮-೧೯೫೪.

**ಶ್ರೀಕೃಷ್ಣ ಪಾಟೀಲ**
**ಬೆಳಗಾವಿ**



ಹದಿನಾರು–ಹದಿನೇಳು ವರುಷಗಳವರೆಗೆ ಸುಖದ ಹಂದರದಲ್ಲಿ ಬೆಳೆದು ನಿಂತ ಕಲ್ಯಾಣಿಗೆ ಇಂಥದೊಂದು ಗಂಭೀರ ವಿಷಯದ ಚಿಂತನೆಯ ದಿನವು ಬರಬಹುದೆಂದು ಕನಸು–ಮನಸಿನಲ್ಲಿಯೂ ನೆನೆಸಿರಲಿಲ್ಲ. ಬರುವುದಾದರೂ ಹೇಗೆ? ತಂದೆಯ ಮನೆಯಲ್ಲಿ ಚಿಂತೆಗೆ ಕಾರಣವಾದರೂ ಏನಿರುವುದು? ಅವರು ದುಡಿದು ತಂದು ಹಾಕುವರು. ತಾಯಿಯು ತಂದುದನ್ನು ಓರಣದಿಂದ ಕುದಿಸಿ ಹಾಕುವಳು. ಮಕ್ಕಳು ತಿಂದು–ಉಂಡು ಬೆಳೆಯುವರು. ಈ ಬೆಳವಣಿಗೆಯ ಜತೆಗೆ ವಿದ್ಯೆಯನ್ನು ಕಲಿಯಬೇಕಾಗುವುದು, ಗೃಹಕೃತ್ಯದ ಕೆಲವೊಂದು ವಿಷಯಗಳನ್ನು ಅರಿತುಕೊಳ್ಳಬೇಕಾಗುವುದು; ಅಲ್ಲದೆ ಮನೆತನದ ಮರ್ಯಾದೆ, ನೀತಿಯ ನೆಲೆ, ಆಚಾರದ ಉಪಚಾರ, ಧರ್ಮದ ಕರ್ಮ, ದಯೆಯ ದಾಕ್ಷಿಣ್ಯ, ಸ್ನೇಹದ ಸಹಕಾರ, ಪ್ರೀತಿಯ ಕೀರ್ತಿ ಇತ್ಯಾದಿ ಕೆಲವು ಮಾನವೀಯ ಲಕ್ಷಣಗಳನ್ನೂ ತಿಳಿಯಬೇಕಾಗುವುದು. ಇವುಗಳ ಉಪಶಾಖೆಗಳಾಗಿ ಸ್ವಚ್ಛತೆ, ಆರೋಗ್ಯ, ಸಾಮಾಜಿಕ ಋಣ, ಸೌಂದರ್ಯಸಾಧನಗಳೂ ಗೊತ್ತಾಗುವುವು. ಕಲ್ಯಾಣಿ ಶಾಲೆಯಲ್ಲಿ, ನೆರೆಹೊರೆಯವರಲ್ಲಿ, ಗೆಳತಿಯರಲ್ಲಿ, ಮನೆಯಲ್ಲಿ, ಮನದಲ್ಲಿ ಸಾಧ್ಯವಾದಷ್ಟನ್ನು ಅರಿತು ಎಲ್ಲರಿಂದ ಹೌದೆನ್ನಿಸಿಕೊಂಡಿದ್ದಳು. ಸ್ವಭಾವವು ಸರಳವಾಗಿದ್ದಿತು. ಸೌಂದರ್ಯವು ನೋಡುವಂತಹದಿದ್ದಿತು. ಮಾತು ರುಚಿಯಾಗಿದ್ದಿತು. ಸುಕುಮಾರ ದೇಹವು ತಾರುಣ್ಯದ ಹೊಸತಿಲ ಮೇಲೆ ಏರಿನಿಂತು ಮಂಗಲಮಯ ಕಾಂತಿಯನ್ನು ಹೊರಸೂಸುತ್ತ ಲಗ್ನದ ಬಂಧನಕ್ಕೆ ಆಹ್ವಾನಿಸುವಂತಿದ್ದಿತು.

ಹೆಣ್ಣಿಗೆ ಲಗ್ನವು ಅನಿವಾರ್ಯವೆಂದೇ ಕಲ್ಯಾಣಿಯ ಭಾವನೆ. ಈ ಹೊಣೆಯನ್ನು ತಂದೆ–ತಾಯಂದಿರೇ ಹೊತ್ತಿರುವರೆಂದು ಅವಳ ತಿಳಿವಳಿಕೆ. ಹಾಯಸ್ಕೂಲು ಇಲ್ಲವೆ ಕಾಲೇಜಿನ ಮೆಟ್ಟಲುಗಳನ್ನು ಏರಿರಲಿಲ್ಲವೆಂದೇ ಅವಳು ಹಾಗೆ ತಿಳಿದಿರಬೇಕು. ತನ್ನ ಲಗ್ನವನ್ನು ತಾನೇ ಮಾಡಿಕೊಳ್ಳಬೇಕೆ, ತಂದೆ–ತಾಯಂದಿರ ಕೈಯಲ್ಲಿ ಕೊಡಬೇಕೆ? ಎಂಬ ಜಟಿಲ ಪ್ರಶ್ನದ ನಿಷ್ಕರ್ಷೆಯಾಗುವವರೆಗೆ ಅವಳ ತಿಳಿವಳಿಕೆಯೇ ಸತ್ಯವಾಗಿದ್ದಿತು. ಅವಳು

ಅವರನ್ನೇ ನಂಬಿದ್ದಳು. ಬೀದಿಯ ಮೇಲಿನ, ಗುಡಿಯೊಳಗಿನ, ಸಿನಿಮಾ ಮಂದಿರದ ಮುಂದಿನ, ನಾಟಕದಲ್ಲಿಯ ಒಬ್ಬ ಮೀಸೆಯಿಲ್ಲದ ಗಂಡಸನ್ನು ನೋಡಿ ಹೃದಯದಲ್ಲಿ ಕೊರೆದುಕೊಂಡು, ಕಲ್ಪನೆಯ ಕುಸುಮಗಳನ್ನು ಏರಿಸಿ, ಮಾನಸಿಕ ಮಾಲೆಯನ್ನು ತೊಡಿಸಿ, ಸಂಕಲ್ಪಿಸಿದ ಪ್ರಸಾದವನ್ನು ಅರ್ಪಿಸಿ ಪ್ರಿಯತಮನೆಂದು ಈ ವರೆಗೂ ಮಾಡಿರಲಿಲ್ಲ. ಅಂಥ ವಿಕೃತ ಕೃತಿಗೆ ಎಡೆ ಗೊಟ್ಟಿರಲಿಲ್ಲ. ದೇವರ ಮೇಲೆ ಭಾರಹಾಕಿ, ತಂದೆ-ತಾಯಂದಿರ ಕೈಯಲ್ಲಿ ಭವಿಷ್ಯವನ್ನು ಬರೆಯಲು ಶ್ವೇತಪತ್ರವನ್ನು ಕೊಟ್ಟಿದ್ದಳು.

ಈಗ ನಾಲ್ಕಾರು ದಿನಗಳ ಹಿಂದೆ ಸುದತ್ತಗುರುಗಳು ಮಗನನ್ನು ಕೂಡಿ ಕೊಂಡು ಬಂದು ಕಲ್ಯಾಣಿಯನ್ನು ನೋಡಿದ್ದರು. ಒಪ್ಪಿಗೆಯ ಅಭಿಪ್ರಾಯ ವನ್ನೂ ಕೊಟ್ಟಿದ್ದರು.

ಆದರೆ ಅಂದು ಕಲ್ಯಾಣಿಯು ನೋಡಿದುದು ಇಬ್ಬರನ್ನು. ಒಬ್ಬನು ನಡುಹರೆಯದವನು. ಇನ್ನೊಬ್ಬನು ತರುಣನು. ಬಾಗಿಲನ್ನು ದಾಟ ಒಳಗೆ ಬರುವ ಮುಂದೆ ತಾಯಿಯು—ಗೋಡೆಗೆ ಕುಳಿತವರು, ಕರಿಯ ಟೋಪಿ ಯನ್ನು ಹಾಕಿಕೊಂಡವರು, ಸಾದುಗಪ್ಪಿನವರು ಎಂದು ಸಂತೋಷವಾಗಿ ವರನ ಲಕ್ಷಣಗಳನ್ನು ಹೇಳಿದ್ದಳು.

ಕಲ್ಯಾಣಿ ಮೊದಲೇ ಕೋಮಲ ಪ್ರಕೃತಿಯವಳು. ಮೇಲೆ ವಧೂ ಪರೀಕ್ಷೆಗೆ ನಿಂತವಳು. ನಡುಮನೆಯಲ್ಲಿ ನಾಲ್ಕೈದು ಜನ ಹಿರಿಯರು. ಅವರ ನಡುವೆ ತಾನು ಹೋಗಿ ಕುಳಿತುಕೊಳ್ಳಬೇಕು; ಅವರು ಕೇಳಿದ ಪ್ರಶ್ನೆಗಳಿಗೆ ಉತ್ತರಗಳನ್ನು ಹೇಳಬೇಕು; ಓದಬೇಕು; ಹಾಡಬೇಕು; ತನ್ನ ಮನದಲ್ಲಿ ಹುಟ್ಟಬಹುದಾದ ಬೆದರಿಕೆ, ಆಶ್ಚರ್ಯ, ಬುದ್ಧಿಶೂನ್ಯತೆಯಿಂದ ಮುಖಲಕ್ಷಣ ವನ್ನು ಕಳೆದುಕೊಳ್ಳಬಾರದು; ಧೈರ್ಯವನ್ನು ನಂಬಬೇಕು; ಎಂಬ ಕೃತಕ ಭಾವನೆಯ ಬಿಗಿವು. ಇದರ ಸಂಗಡವೇ ತಾನು ವರನ ಮೂಗು, ಕಣ್ಣು, ಹಲ್ಲು, ಕೈಕಾಲು, ದೇಹದ ರಚನೆ, ಅವನ ಮಾತು, ಮಾತಿನ ರೀತಿ ಇತ್ಯಾದಿ ಗಳನ್ನು ಪರೀಕ್ಷಿಸಬೇಕು. ಈ ಉಭಯಸಂಕಟವನ್ನು ಏಕಕಾಲದಲ್ಲಿ ಎದುರಿಸ ಬೇಕು. ಈ ಮಿಶ್ರಿತ ಸ್ವಭಾವ ಪರಿಪಾಕದಿಂದ ಕಲ್ಯಾಣಿಯು ಹೇಗೋ ಪಾರಾಗಿ ಬಂದಳು. ಬಂದವರು ಕಲ್ಯಾಣಿಯನ್ನು ಒಪ್ಪಿದರು.

ಆದರೆ ಕಲ್ಯಾಣಿ ?...........

ಅವಳಿಗೆ ತಾಯಿಯು ಹೇಳಿದ ಒಂದು ಮಾತೇ ಆಧಾರವಾಯಿತು. ವರ ಪರೀಕ್ಷೆಯಲ್ಲಿ ತನಗೂ ಒಂದು ಪಾಲಿದೆ ಎಂದು ತಿಳಿದಳು. ತಾನೂ ನೋಡಬೇಕು, ಸಾಧ್ಯವಾದಷ್ಟನ್ನು ಅರಿಯಬೇಕು, ಪರೀಕ್ಷಿಸಬೇಕು ಎಂಬ ಹಾರಯಿಕೆಯಿಂದಲೇ ಕಣ್ಣಾಡಿಸಿದಳು. ಆದರೆ ನೋಡಿದ್ದು ಆ ತರುಣನನ್ನು. ಮೇಲಿಂದ ಮೇಲೆ ನೋಡಿದಳು. ಹುಡುಗನು ಲಕ್ಷಣವಂತನೆಂದೂ, ಸುದೃಢನೆಂದೂ, ಸಾತ್ವಿಕನೆಂದೂ, ದಯಾವಂತನೆಂದೂ, ಕೋಮಲನೆಂದೂ, ತನ್ನಂತೆ ದುಂಡು ಮೈಯವನೆಂದೂ, ದುಂಡು ಮೊಗದವನೆಂದೂ, ತನ್ನ ಮೈಬಣ್ಣದವನೆಂದೂ, ತನ್ನ ಎತ್ತರಕ್ಕೆ ಸಮಾನನೆಂದೂ, ಓರಗೆಯವನೆಂದೂ, ಯೋಗ್ಯನೆಂದೂ ಅರಿತಳು. ಮನಸ್ಸು ಪ್ರಸನ್ನವಾಯಿತು. ಹೃದಯವು ಹರುಷಗೊಂಡಿತು. ಜೀವವು ಆನಂದವನ್ನು ಹೊಂದಿತು. ದೇಹ ಪುಲಕಿತಗೊಂಡಿತು. ನಗೆಯ ಕೆನೆಯನ್ನು ಮುಖಕ್ಕೆ ಅೊಡೆದುಕೊಂಡು ನಮಸ್ಕರಿಸಿ ಒಳಗೆ ಬಂದಳು. ಬಂದವರು ಮನೆಗೆ ಹೋದರು.

ಗೆಳತಿಯರು ಕಲ್ಯಾಣಿಯ ಗಲ್ಲವನ್ನು ಹಿಂಡಿ ಹಿಂಡಿ ಕೆಂಪು ಮಾಡಿದರು. ಗುದ್ದಿ ಗುದ್ದಿ ಬೆನ್ನು ಹಣ್ಣು ಮಾಡಿದರು. ಚಿವುಟಿ ಚಿವುಟಿ ತೊಡೆಯನ್ನು ಮೆತ್ತಗೆ ಮಾಡಿದರು—ಇತ್ಯಾದಿ ಠಸಕೇಳಿಯ ನೂರಾರು ವಿಕೃತ ಚೇಷ್ಟೆಗಳಿಂದ ಕಲ್ಯಾಣಿಯು ಒಂದಿಷ್ಟು ರೇಗಿ—"ಬಿಡಿರೇ ಇದೇನು !" ಎಂದು ಗದರುತ್ತಿದ್ದಳು. ನಾಲ್ಕು ದಿನವಾದರೂ ಯಾವ ಗೆಳತಿಯ ಮುಂದೂ ತನ್ನ ಮನದ ಬಯಕೆಯನ್ನು ಬಿಚ್ಚಲಿಲ್ಲ. ಗೆಳತಿಯರ ಚೇಷ್ಟೆ ಅವ್ಯಾಹತವಾಗಿ ನಡೆಯಿತು.

ಐದನೆಯ ದಿನ ತಾಯಿಯು ಕಲ್ಯಾಣಿಯನ್ನು ಕರೆದು—"ಏನೆಂದೆ ಮಗು ?" ಎಂದು ಕೇಳಿದಳು.

"ಏನು ಹೇಳುವುದು ತಾಯೀ ?" ಎಂದು ನುಡಿದು ಸುಮ್ಮನಾದಳು.

"ನೋಡಿದೆಯಲ್ಲವೇ ?"

"ಹ."

"ಒಪ್ಪಿಗೆಯೇ ?"

"ನೀವು ಒಪ್ಪಿದರೆ ನಾನು ಒಪ್ಪಿದಂತೆ ತಾಯೀ."

"ಅಲ್ಲ. ಇದು ಒಂದು ದಿನದ ಸಂಬಂಧವಲ್ಲ. ಜೀವಾವಧಿ ಸಂಬಂಧ.

ನೀನು ಏನೆಂದೆ ? "

ಕಲ್ಯಾಣಿಯು ಮಾತಾಡಲಿಲ್ಲ.

" ಅವರು ಕೇಳೆಂದು ಹೇಳಿರುವರು."

" ತಂದೆಯವರೇ ? "

" ಹ."

" ಅವರ ಅಭಿಪ್ರಾಯವೇನು ? "

" ಅವರು ಒಪ್ಪಿದಂತೆ ಮಾಡಿರುವರು."

" ಹ ! " ಉಸಿರುಗರೆದಳು.

" ಏಕೆ ? "

" ಏನಿಲ್ಲ. ನೀನು ? "

" ಅವರು ಮನೆಯ ಯಜಮಾನರು. ಇಂದಿಗೆ ೧೮-೨೦ ವರುಷಗಳ ಹಿಂದೆ ಲಗ್ನಶಾಸ್ತ್ರದಿಂದ ನನ್ನನ್ನು ಮನೆಗೆ ಕರೆದು ತಂದರು. ಅಂಜುತ್ತ ಇವರ ಮನೆಯನ್ನು ಸೇರಿದ ನನಗೆ ಅಭಯದಾನವನ್ನು ಕೊಟ್ಟರು. ಪ್ರೇಮದಿಂದ ಕಂಡರು. ಸ್ನೇಹದಿಂದ ನಡಸಿ ತಂದರು. ದುಃಖವೆಂಬುದನ್ನು ಅರಿಯೆ. ಕಷ್ಟವೆಂಬುದನ್ನು ತಿಳಿಯೆ. ಸುಖದಲ್ಲಿ ಸಾಕಿರುವರು. ನೆಮ್ಮದಿಯಲ್ಲಿ ಕರೆತಂದಿರುವರು. ಅವರು ನಿನ್ನ ಹಿತವನ್ನು ಬಯಸುವರೆಂದು ನನ್ನ ನಂಬಿಗೆ. ನೀನು ಅವರ ಮಗಳೇ ಸರಿ. ಮಗಳ ಸುಖವು ತಂದೆಯ ಕರ್ತವ್ಯವು. ಇದು ಅವರಿಗೆ ಚೆನ್ನಾಗಿ ಗೊತ್ತು. ಅವರು ಒಪ್ಪಿದ ಮೇಲೆ ದೋಷವೆಲ್ಲಿ ಬರುವುದು ಮಗು ? ದೋಷವನ್ನು ಕಂಡರೆ ಅವರ ಜೀವನವನ್ನೇ ಹಳಿದಂತೆ ಅಲ್ಲವೇ ? ಅವರ ಒಪ್ಪಿಗೆಯೆಂದರೆ ಮನೆಯ ಎಲ್ಲರ ಒಪ್ಪಿಗೆಯೆಂದು ನನ್ನ ಭಾವನೆ. ಆದರೂ ಒಂದು ಮಾತು ನಿನ್ನನ್ನು ಕೇಳುವೆ. ಏನೆಂದೆ ಕಲ್ಯಾಣಿ ?" ತಾಯಿಯು ಕಕ್ಕುಲತೆಯಿಂದ ನುಡಿದಳು.

" ಇಷ್ಟು ಮಾತು ಆದ ಮೇಲೆ ಒಂದು ಮಾತಿನಿಂದೇನಾಗಬೇಕು. ನಾನೂ ಒಪ್ಪಿರುವೆನೆಂದು ತಿಳಿ." ಉದಾಸೀನತೆಯಿಂದ ನುಡಿದಳು.

ಮಗಳ ಮಾತಿನ ಧೋರಣೆಯು ತಾಯಿಗೆ ತಿಳಿಯಲು, ತಡವಾಗಲಿಲ್ಲ! ಏನೋ ವಿಪರೀತವಾಗಿದೆ ಎಂದೇ ಅರ್ಥ ಮಾಡಿದಳು. ಒಂದಿಷ್ಟು ತಡೆದು—

" ನಿನ್ನ ಮನದಲ್ಲಿ ಇದ್ದುದನ್ನು ಹೇಳು. ಲಗ್ನವನ್ನು ಎರಡು ದಿನ ತಡೆಯ

ಬಹುದು."

" ಎರಡುದಿನ ತಡೆದು ಲಗ್ನವಾಗುವುದೂ, ಇಂದೇ ಆಗುವುದೂ ಎರಡೂ ಒಂದೇ ತಾಯೀ ! ಒಪ್ಪಿರುವೆನೆಂದು ಹೇಳು."

" ಹಾಗಲ್ಲ........" ತಾಯಿಯು ವಿಭ್ರಾಂತಳಾದಳು. ಏನು ಮಾತಾಡಬೇಕೆಂಬುದು ತಿಳಿಯಲಿಲ್ಲ. ಲಗ್ನದ ಮಾತುಕತೆ ತೀರ ಮುಂದೆ ಹೋಗಿಬಿಟ್ಟಿದ್ದಿತು. ಲಗ್ನದ ದಿನವೂ ನಿಶ್ಚಯವಾಗಿದ್ದಿತು. ಮಗಳ ಒಂದು ಮಾತು ಔಪಚಾರಿಕವಿದ್ದಿತು.—ಮಗಳು ಒಪ್ಪುವಳು. ಅವಳ ಬಾಯಿಂದ " ಹೂ " ಎನ್ನಿಸಿಬಿಟ್ಟು ಮನೆಯ ಮುಂದೆ ಮಂಗಳ ವಾದ್ಯಗಳ ಸಪ್ಪಳವನ್ನು ಎಬ್ಬಿಸಿದರಾಯಿತು.—ಎಂದು ಕೇಳಿದ್ದಳು. ಆದರೆ ಏನೋ ವಿಪರೀತ ! ತಾಯಿಯು ಧೈರ್ಯಗೆಡಲಿಲ್ಲ. ಅವಳ ಮನದ ಇಂಗಿತವನ್ನು ತಿಳಿದುಕೊಂಡು, ತನ್ನ ಅನುಭವ ಪೂರ್ಣ ಉತ್ತರದಿಂದ ಸಮುದಾಯಿಸಬೇಕೆಂದು— " ಮನದಲ್ಲಿ ಇದ್ದುದನ್ನು ಹೇಳು ಕಲ್ಯಾಣಿ. ನಾನು ವಿಚಾರಿಸುವೆ." ಎಂದಳು.

ಕಲ್ಯಾಣಿಯು ಬಾಯಿಯನ್ನು ಬಿಡಲಿಲ್ಲ.

ತಾಯಿಯು ಮಗಳ ಬೆನ್ನ ಮೇಲೆ ಕೈಯೊಳಿದು, ಮುಂಗುರುಳು ತೀಡಿ " ಹೇಳು, ಏನು ಹೇಳು ?" ಎಂದು ಗಲ್ಲವನ್ನು ಹಿಡಿದಳು.

" ಮತ್ತೇನಿಲ್ಲ. ಅಂದು ನನಗೆ ಯಾರನ್ನು ನೋಡೆಂದು ಹೇಳಿದೆ ?"

" ನಿನ್ನನ್ನು ಮದುವೆಯಾಗ ಬಂದವರನ್ನು ! "

" ಅದೇ........?"

" ಮತ್ತು........! "

" ಮದುವೆಯಾಗ ಬಂದವರು ಯಾರು ?"

" ಯಾರೆಂದರೆ ? ನಿನ್ನ ಎದುರು ಕುಳಿತವರು."

" ನನ್ನ ಎದುರು ಐದಾರು ಜನರಿದ್ದರು."

" ನಿನ್ನ ತಂದೆಯವರು ನೋಡ ಬಂದಿರಲಿಲ್ಲ."

" ಇದೆಂತಹ ಮಾತು ತಾಯೀ ! "

" ಹಾಗಲ್ಲ. ಕ್ರಮವಾಗಿ ಹೇಳುವೆ. ಅವರ ಹತ್ತಿರವೇ ಗೌರಿಶಂಕರ ರಾಯರಿದ್ದರು."

" ನಾನು ಬಲ್ಲೆ."

" ಇನ್ನೊಬ್ಬರು ಸರ್ಪಭೂಷಣರು."

" ಹ."

" ಉಳಿದ ಇಬ್ಬರು ಅಪರಿಚಿತರು."

" ಅವರ ಹತ್ತಿರ ದಂಡೆಯಲ್ಲಿ ಕುಳಿತವರು ಆಚಾರ್ಯರು. ಅವರನ್ನು ನೀನು ಬಲ್ಲೆ."

" ಬಲ್ಲೆನು."

" ಆ ಅಪರಿಚಿತ ಇಬ್ಬರಲ್ಲಿ ಒಬ್ಬನು ತರುಣನು."

" ಹ. . . ಹ. . . " ಕಣ್ಣರಳಿಸಿ ತಾಯಿಯನ್ನು ನೋಡಿದಳು.

" ಅವನು ನೋಡ ಬಂದವರ ಮಗ."

" ಮಗನೇ! ಸುಂದರನಾಗಿದ್ದನು. ನಾನು ಅವನನ್ನೇ ನೋಡಿದೆ. ಎಂಟು–ಹತ್ತು ಸಾರೆ ನೋಡಿದೆ."

" ಅವನಲ್ಲ."

" ಅಲ್ಲವೇ!"

" ಜೊತೆಗೆ ಬಂದಿದ್ದನು. ಆಚಾರ್ಯರು ಕರೆದು ತಂದಿದ್ದರು."

" ಅವನ ಮದುವೆಯಾಗಿದೆಯೇ?"

" ಮದುವೆ ಆದಂತಿಲ್ಲ."

" ಆಗಿಲ್ಲವೇ!"

" ಹ....ಇನ್ನೊಬ್ಬರೇ ಸುದತ್ತರಾಯರು. ಅವರೇ ನೋಡ ಬಂದಿದ್ದರು. ನಾವು ಕೊಡ ಮಾಡಿದುದು ಅವರಿಗೇ."

ಕಲ್ಯಾಣಿಯ ಮುಖವು ಒಮ್ಮೆಲೆ ಸಪ್ಪೆಯಾಯಿತು. ತಲೆಯನ್ನು ಹಿಡಿದುಕೊಂಡು ಕುಳಿತಳು.

ತಾಯಿಗೆ ತಿಳಿಯಿತು. ಮಗಳು ಸುದತ್ತರಾಯರ ಮಗ ಕರುಣನನ್ನು ನೋಡಿರುವಳು. ಅವನೇ ತನ್ನನ್ನು ಮದುವೆಯಾಗ ಬಂದಿರುವನು. ಆದರೆ ತಾವು ಅವನ ತಂದೆಗೆ ತೋರಿಸಿರುವರು. ಮಗಳ ಮನೋವ್ಯಥೆಯ ಕಾರಣವು ಸ್ಪಷ್ಟವಾಯಿತು. ಕರುಣನು ಚಿಕ್ಕವನೆಂದೇ ತಾಯಿಯ ಭಾವನೆ. ಮದುವೆಯನ್ನು ಇನ್ನೂ ನಾಲ್ಕಾರು ವರುಷಬಿಟ್ಟರೂ ನಡೆಯಬಹುದೆಂಬ ನಂಬಿಕೆ. ಆದರೆ ತಾವು ಕೊಡಮಾಡಿದ ವರನು ಯೋಗ್ಯನೆಂದು ಪ್ರತಿಪಾದಿಸುವಂತೆ—

" ಕಲ್ಯಾಣಿ, ಸುದತ್ತರಾಯರಿಗೆ ವಯಸ್ಸು ಬಹಳವಾಗಿಲ್ಲ."

" ಮಗನು ದೊಡ್ಡವನಿರುವನಲ್ಲ ತಾಯೀ ? "

" ಅಹುದು. ಅವರ ಹದಿನೆಂಟನೆಯ ವರುಷ ಮದುವೆಯಾಯಿತು. ಮದುವೆಯಾದ ವರುಷದಲ್ಲಿಯೇ ತಂದೆಯಾದರಂತೆ. ಮುಂದೆ ಮಕ್ಕಳಾಗ ಲಿಲ್ಲ. ಹೆಂಡತಿಯು ತೀರಿಕೊಂಡಳು. ಬಹಳವಾದರೆ ೩೦-೩೫ ವರುಷದವರಿರಬೇಕು. ಕೈ-ಬಾಯಿಯ ಕಷ್ಟದಿಂದ ಒಂದಿಷ್ಟು ವಯಸ್ಸಾದವರಂತೆ ಕಾಣಬಹುದು. ಕೈ ತುಂಬ ಸಂಬಳವಿದೆ. ತಾಲೂಕಿನಲ್ಲಿ ಶಿಕ್ಷಕರು. ಸಜ್ಜನರು ಹತ್ತು ಜನರಿಗೆ ಬೇಕಾದವರು. ಮನೆಯಲ್ಲಿ ನೀನು ಹಿರಿಯಳು. ಅತ್ತೆ ಮಾವಂದಿರ ಕಾಟವಿಲ್ಲ. ನಾವು ಮಾತು ಕೊಟ್ಟಿರುವೆವು. ಒಪ್ಪು ಮಗು...."

ಕಲ್ಯಾಣಿಯು ಮಾತಾಡಲಿಲ್ಲ.

" ನೀನು ಸುಖದಿಂದ ಇರಬೇಕೆಂದೇ ನಮಗೂ ಇಚ್ಛೆ. ಆದರೆ ಬಡತನ. ಅವರು ಕಾಲಿಲ್ಲದ ಪಂಗು. ಶ್ರೀಮಂತ ವರನಿಗೆ ಹೇಗೆ ಕೊಡುವುದು ! ಒಳ್ಳೇದು. ಒಮ್ಮೆ ವರದಕ್ಷಿಣೆಯೆಂದು ಹಣಕೊಟ್ಟರೆ ಮುಗಿಯಿತೇ ? ಮುಂದೆ ಬಸಿರೋ, ಬಾಣಂತಿಯೋ ಇತ್ಯಾದಿಗಳು ಇರುವವಲ್ಲ. ಅವಕ್ಕೂ ಹೊಂದಿಕೆಯಾಗುವಂತೆ ಅವರನ್ನು ಗೌರವಿಸಬೇಕಷ್ಟೇ! ಇಲ್ಲದಿದ್ದರೆ ಸಿಟ್ಟು, ಕೋಪ, ಭಯ. ನಿನ್ನನ್ನು ತವರು ಮನೆಗೆ ಅಟ್ಟಿ ಹಾಕಿದರೆ ಹೇಗೆ ಮಗು? ಅದಕ್ಕೆ ನಮಗೆ ಹೊಂದಿಕೆಯಾಗುವ ವರನ ಸಂಗಡ ಲಗ್ನವಾಗುವುದು ಒಳ್ಳೆಯದು. ಸುದತ್ತರ ಜೊತೆಗೆ ಲಗ್ನವಾದರೆ ನೀನು ಯೋಗ್ಯವಾದ ಮನೆಯನ್ನು ಸೇರಿದಂತೆ. ನಮಗೂ ಸಾಲ-ಮೂಲವಾಗುವುದಿಲ್ಲ. ಮುಪ್ಪಿನ ಕಾಲಕ್ಕೆ ಇವರಿಗೆ ಸಾಲವನ್ನು ಮಾಡಿ ನೀನು ಶ್ರೀಮಂತರ ಮನೆಯನ್ನು ಸೇರುವುದು ಒಳ್ಳೆಯದಾದೀತೇ? ಆ ಕಷ್ಟದ ಕುಲುಮೆಯಲ್ಲಿ ನಮ್ಮನ್ನು ನೂಕಬೇಕೆಂದು ನಿನಗೆ ಇಚ್ಛೆಯೂ ಇರಲಿಕ್ಕಿಲ್ಲ. ಇಷ್ಟೆಲ್ಲವನ್ನು ವಿಚಾರಿಸಿಯೇ ನಿನ್ನನ್ನು ಅವರಿಗೆ ಕೊಡಬೇಕೆಂದು ಮಾಡಿರುವೆವು."

ತಾಯಿಯ ಮಾತು ವ್ಯಾವಹಾರಿಕ ದೃಷ್ಟಿಯಿಂದ ನಿಜವಿದ್ದಿತು. ಕಲ್ಯಾಣಿಯು ಇಷ್ಟೆಲ್ಲವನ್ನು ಕೇಳಿ ಅಸಮ್ಮತಿಯನ್ನು ಸೂಚಿಸುವುದು ಸರಿಯೆಂದು ಕಾಣಲಿಲ್ಲ. ಈ ಮದುವೆಯು ತನ್ನ ಮನದ ವಿರುದ್ಧ, ರುಚಿಯ ವಿರುದ್ಧ, ಸೌಲಭ್ಯದ ವಿರುದ್ಧವೆಂದು ತಿಳಿದರೂ ತಾಯಿ-ತಂದೆಯವರಿಗೆ ಕಷ್ಟ

ವನ್ನು ಕೊಡಬಾರದೆಂದು ಮಾಡಿದಳು. ಒಪ್ಪುವುದು ಒಳ್ಳೆಯದೆನಿಸಿತು. ಆದರೂ ಸಮಾಧಾನ. ತನಗೆ ಈಗಾಗಲೇ ತನ್ನ ಮನಕ್ಕೆ ಹೊಂದಿಕೆಯಾದ, ಕಣ್ಣಿಗೆ ಕೇದಗೆಯಾದ ಒಬ್ಬ ಮಗನಿರುವನಲ್ಲ! ಅವನನ್ನು ನೋಡಿ, ಜೋಪಾನ ಮಾಡಿ ನೆಮ್ಮದಿಯಿಂದ ಇದ್ದರಾಯಿತು! ದೇವರ ಇಚ್ಛೆ! ಎಂದು ತಾಯಿಯ ಕಡೆಗೆ ಮುಖವನ್ನು ತಿರುಗಿಸಿದಳು

"ಒಪ್ಪಿಗೆಯೇ ಕಲ್ಯಾಣಿ?" ತಾಯಿಯು ಆತುರದಿಂದ ಕೇಳಿದಳು.

ಕಲ್ಯಾಣಿಯು ಬಿಸಿಯುಸಿರುಗರೆದಳು.

"ಏಕೆ ಏನೆಂದೆ?" ತಾಯಿಯು ದೈನ್ಯದಿಂದ ಕೇಳಿದಳು.

ಬಹಳ ಹೊತ್ತಿನ ಮೇಲೆ—"ನಿಮ್ಮ ಮಾತಿಗೆ ಎದುರಿಲ್ಲ ತಾಯಿ." ಎಂದು ನುಡಿಯುತ್ತಾ ಕಿಟಕಿಯ ಬಳಿಗೆ ಹೋಗಿ ಶೂನ್ಯದಿಗಂತವನ್ನು ನೋಡ ಹತ್ತಿದಳು. ತಾಯಿಯು ಮಗಳ ಬೆನ್ನ ಮೇಲೆ ಕೈಯೆಳೆದು ನಗುತ್ತ ಹೊರಗೆ ಹೋದಳು.

ಕಲ್ಯಾಣಿಯ ತಲೆಯಲ್ಲಿ—'ಇದೇನಾಯಿತು? ಇದೇನು ಮಾಡಿದೆ? ಯಾರನ್ನು ನೋಡಿ ಜೀವನವನ್ನು ಸಾಗಿಸಬೇಕು! ಒಪ್ಪಿದಂತೆ ನಡೆಯಬೇಕೇ? ಮುರಿದುಕೊಳ್ಳಬೇಕೇ?' ಎಂಬ ಗಂಭೀರವಾದ ವಿಚಾರಗಳ ಭೈರವ ನೃತ್ಯ ಒಂದೇ ಸಮನೆ ನಡೆಯ ಹತ್ತಿತು. ಕಳೆದ ಕೆಲವಾರು ದಿನಗಳಿಂದ ತಲೆಯನ್ನು ಬಿಸಿಬಿಸಿಯಾಗಿ ಮಾಡಿಕೊಂಡಳು. ಆದರೆ ಯಾವುದೂ ನಿರ್ಣಯವಾಗಲಿಲ್ಲ. ಪ್ರಶ್ನವು ನೆಲ ಮುಗಿಲನ್ನು ಹಬ್ಬಿ ನಿಂತು ಕಣ್ಣಿಗೆ, ಬುದ್ಧಿಗೆ ಮಂಜುಕವಿಸ ಹತ್ತಿತು.

೨

ದತ್ತಗುರುಗಳ ಮಗನಾದ ಕರುಣನು ಹೆಣ್ಣು ನೋಡಿ ಬಂದನೆಂದು ಅವನ ಗೆಳೆಯರಲ್ಲಿ ಸುದ್ದಿಯು ಹಬ್ಬಿತು. ಆದರೆ ನಿಜವಾಗಿ ಅವನು ಹೆಣ್ಣು ನೋಡಲು ಹೋದವನಲ್ಲ. ತಂದೆಯೂ ಹಾಗೆ ತಿಳಿಸಿರಲಿಲ್ಲ. ಅದರ ಸುಳಿವೂ ಗೊತ್ತಿರಲಿಲ್ಲ. ಗೊತ್ತಾಗಿದ್ದರೆ ಹೋಗುತ್ತಿದ್ದನೋ ಇಲ್ಲವೋ ಸಂಶಯದ ವಿಷಯವಾಗಿದ್ದಿತು. ತಂದೆಯವರು—'ನನ್ನ ಜೊತೆಗೆ ಬಾ. ಒಂದಿಷ್ಟು ಕೆಲಸವಿದೆ' ಎಂದು ಕರೆದಿದ್ದರು. ಅವರ ಸಂಗಡ ನಡೆದಿದ್ದನು. ಮನೆಯಲ್ಲಿ ಇಲ್ಲವೆ ದಾರಿಗುಂಟ ಸಾಗಿದಾಗ "ಎಲ್ಲಿಗೆ?" ಎಂದು ಕೇಳುವ ಧೈರ್ಯ ಮಾಡಿರಲಿಲ್ಲ. ಕೇಳುವ ಪ್ರಸಂಗವೂ ಇರಲಿಲ್ಲ. ನಿತ್ಯ ತಂದೆಯವರ ಜೊತೆಗೆ ಪೇಟೆಗೆ ಹೋಗುತ್ತಿದ್ದನು. ಶಾಲೆಯ ಮಕ್ಕಳ ಹೊಲಗಳಿಗೆ ಬೆಳಸಿಯನ್ನು ತಿನ್ನಲು ತಂದೆಯ ಕೂಡ ಹೋಗುತ್ತಿದ್ದನು. ಯಾರ ಮನೆಗಾದರೂ ತಿಂಡಿ–ತಿನಸಿಗಾಗಿಯೂ ಕೂಡಿಯೇ ಹೋಗುತ್ತಿದ್ದನು. ತಿರುಗಾಡಲು ಕೂಡಿಯೇ ಸರಿ. ಇವುಗಳಲ್ಲಿ ಯಾವುದಾದರೂ ಇರಬೇಕು ಎಂದು ತಿಳಿದುಕೊಂಡಿದ್ದನು. ಅದನ್ನು ನಂಬಿಯೇ ಅವರ ಬೆನ್ನು ಹತ್ತಿದ್ದನು. ದಾರಿಯಲ್ಲಿ ರಾಮಾಚಾರ್ಯರು ಕೂಡಿದರು.

"ಬಂದಿರಾ? ಸರಿಯಾಯಿತು." ಎಂದು ಹಲ್ಲುದುರಿದ ಬಾಯಿಂದ ತಂಬುಲ ರಸವನ್ನು ಉಗುಳುತ್ತ ನುಡಿದರು.

"ಬಾರದುಂಟೇ!" ಗುರುಗಳು ನುಡಿದರು.

"ಕರುಣನನ್ನು ಜೊತೆಗೆ ತಂದಿರಿ. ಇದು ಇನ್ನೂ ಒಳ್ಳೆಯದಾಯಿತು." ಎಂದು ತುಟಿಗಳನ್ನು ಅಂಗೈಯಿಂದ ಒರಸಿದರು.

"ನೀವು ಹೇಳಿರಲಿಲ್ಲವೇ!"

"ಒಂದಿಷ್ಟು ಮಾತು ಮುಂದೆ ಹೋಗಿದ್ದಿತು. ತಂದಿರಿ. ಈಗ ಸರಿಯಾಯಿತು. ನಡೆಯಿರಿ." ಎಂದರು.

ದಾರಿಯು ಸಾಗ ಹತ್ತಿತು. ಪೇಟೆಯನ್ನು ದಾಟಿದರು. ಅಂಗಡಿಗಳು ಹಿಂದಾದುವು. ಮೋಟಾರು ಬಂದಿತು. ಹತ್ತಿದರು. ಅರ್ಧ ತಾಸಿನಲ್ಲಿ

ಕಲ್ಯಾಣಿಯ ಮನೆಗೆ ಬಂದರು. ಆಚಾರ್ಯರೇ ಮುಂದಾಗಿ—'ರಾಯರಿರುವರೇ!' ಎಂದು ಕೂಗಿ ಬಲಗಾಲು ಇಟ್ಟು ಮನೆಯನ್ನು ಸೇರಿದರು.

ಗೌರಿಶಂಕರರಾಯರು ಕಂಕುಳ ಕಟ್ಟಿಗೆಯನ್ನು ಊರಿ, ಕುಂಟುತ್ತ ಬಂದು ನಮಸ್ಕರಿಸಿದರು. ಆದರದಿಂದ ಬರಮಾಡಿಕೊಂಡರು. ಎಲ್ಲರೂ ಕುಳಿತರು. ಅಲ್ಪ-ಸ್ವಲ್ಪ ಮಾತುಗಳಾದುವು. ಕಲ್ಯಾಣಿಯು ಸಾಲಂಕೃತಳಾಗಿ ಬಂದು ಕುಳಿತಳು. ಪ್ರಶ್ನಗಳಾದುವು. ಕಲ್ಯಾಣಿಯು ಉತ್ತರಿಸಿದಳು. ಕನ್ಯಾಪರೀಕ್ಷೆಯಾಯಿತು. ಅವಳು ನಮಸ್ಕರಿಸಿ ಒಳಗೆ ಹೋದಳು. ಇವರು ಒಂದಿಷ್ಟು ಮಾತಾಡಿ ಹೊರಗೆ ಬಂದರು.

ಕರುಣನು ಕಲ್ಯಾಣಿಯನ್ನು ನೋಡಿದುದು ಆಕಸ್ಮಿಕವಾದ ಪ್ರಸಂಗ ಅನಿರೀಕ್ಷಿತ ಘಟನೆ. ಎಲ್ಲರಂತೆ ತಾನೂ ನೋಡಿದನು. ಕುತೂಹಲದಿಂದ ನೋಡಿದನು. ಆಗಂತುಕಳಂತೆ ನೋಡಿದನು. ತರುಣಿಯೆಂದು ನೋಡಿದನು. ನೋಡುವ ಮುಂದೆ ಅವಳೂ ಒಂದೆರಡು ಸಾರೆ ಇವನನ್ನು ನೋಡಿದಳು. ಅವಳ ಕಣ್ಣಿನ ಕಾಂತಿ ಇವನ ಕಣ್ಣಿನ ಹೊಳಪನ್ನು ಸ್ಪರ್ಶಿಸಿತು. ಅವಳ ರೂಪಸಂಪತ್ತು ಇವನ ಯೌವನಸಂಪತ್ತನ್ನು ತಗುಲಿದ್ದಿತು. ಆದರೆ ಕಲ್ಯಾಣಿಯನ್ನು ಯಾವ ವರನಿಗೆ ತೋರಿಸಿದರೆಂಬುದು ತಿಳಿಯದು.

ಕರುಣನು ಹೆಣ್ಣನ್ನು ನೋಡಿ ಬಂದನು. ಊರಲ್ಲಿ ಸುದ್ದಿಯು ಮಾತ್ರ ಹಬ್ಬಿತು. ವರಗಳ ಯಾದಿಯಲ್ಲಿ ಅವನ ಹೆಸರು ಸ್ವಾಭಾವಿಕವಾಗಿ ಸೇರ್ಪಡೆಯಾಯಿತು. ಕರುಣನು ಯೋಗ್ಯ ವರನೆಂದು ಎಲ್ಲರೂ ಒಪ್ಪಿದರು.

ಮರುದಿನ ಅವನ ಗೆಳೆಯರು ಹಿಂಡುಗಟ್ಟಿಕೊಂಡು ಬಂದರು. ಕರುಣನು ಮನೆಯಲ್ಲಿಯೇ ಇದ್ದನು. ತಂದೆಯವರು ಊಟ ಮಾಡಿ ಸಾಲೆಗೆ ಹೋಗಿದ್ದರು. ತನ್ನ ಊಟವನ್ನು ತೀರಿಸಿ ಗೋಮಯ್ಯವನ್ನು ಮಾಡಿ ಪಡಸಾಲೆಯಲ್ಲಿ ಸುಮ್ಮನೆ ಕುಳಿತಿದ್ದನು. ಕಣ್ಣ ಮುಂದೆ ಕಲ್ಯಾಣಿಯ ಚಿತ್ರ ಸುಳಿಸುಳಿದು ಮರೆಯಾಗುತ್ತಿದ್ದಿತು.

"ಓ ಕರುಣ!" ಶಿವಶಂಕರನು ಕೂಗಿ ಒಳಗೆ ಬಂದನು. ಅರುಣ, ಮಹಾಬಲ, ಚಿದಂಬರರು ನಗುತ್ತ ಬೆನ್ನ ಹಿಂದಿನಿಂದ ಬಂದರು.

ಕಲ್ಪನೆಯ ದೃಷ್ಟಿಯಿಂದ, ಕಲ್ಯಾಣಿಯ ಭಾವಚಿತ್ರವನ್ನು ಮನಸ್ಸಿನಿಂದ ಒರಸಿ ತೆಗೆದು ಕರುಣನು ಭೂಮಿಗೆ ಬಂದು ಗೆಳೆಯರನ್ನು ಬರಮಾಡಿ

ಕೊಂಡನು.

"ಕರುಣ, ನಮಗೆ ತಿಳಿಸದೆ ಹೆಂಡತಿಯನ್ನು ಮನೆಗೆ ಕರೆದು ತರಬೇಕೆಂದಿರುವೆಯಾ?" ಶಿವಶಂಕರನು ಕೇಳಿದನು.

"ಅಲ್ಲಪ್ಪ. ನೀನು ಹೊಸಕಾಲದ ಹುಡುಗ. ಹೆಂಡತಿಯನ್ನು ನೋಡ ಹೋಗುವುದು ನಮ್ಮಂಥವರ ಜೊತೆಗೆ. ನಮ್ಮ ಅಭಿಪ್ರಾಯವನ್ನು ಕೇಳಬೇಕು. ಅವುಗಳನ್ನು ನೀನು ನಿನ್ನ ಕಣ್ಣಿನಿಂದ ಪರೀಕ್ಷಿಸಬೇಕು. ಬುದ್ಧಿಯಲ್ಲಿ ಅರೆಯಬೇಕು. ನಾವು ಸರಿಯೆಂದು ಹೇಳಿದ ಮೇಲೆ ನಿನ್ನ ಮನದ ಇಂಗಿತವನ್ನು ಬೆರಸಿ ಒಪ್ಪಬೇಕು. ಇದನ್ನು ಬಿಟ್ಟು ನೀನೇ ಹೋಗಿ ನೋಡಿಕೊಂಡು ಬರುವುದು ಎಲ್ಲಿಯ ನ್ಯಾಯ! ಪುರಾಣ ಕಾಲದ ಮನುಷ್ಯನಂತೆ ಹೀಗೆ ಮಾಡಬಹುದೇ?" ಎಂದು ಅರುಣನು ನುಡಿದನು.

"ಕರುಣ, ನಾವು ಬಂದಿದ್ದರೆ ದೃಷ್ಟಿಯು ತಾಗುತ್ತಿರಲಿಲ್ಲ." ಮಹಾಬಲನು ದನಿಯೆತ್ತಿದನು.

"ನಮ್ಮೆಲ್ಲರಲ್ಲಿ ನೀನು ಚಿಕ್ಕವನೇನೋ ಸರಿ. ನಿನ್ನ ಮದುವೆಯಾಗುವುದು ನಮಗೆ ದುಃಖಸಂಗತಿಯಲ್ಲ. ಕರುಣ, ಮದುವೆಯನ್ನು ಮಾಡಿಕೋ. ನಮ್ಮನ್ನು ನಿನ್ನ ಜೊತೆಗೆ ಕರೆದುಕೊಂಡು ಹೋಗಿದ್ದರೆ ನಮಗೂ ಒಂದಿಷ್ಟು ಹಿತವಿದ್ದಿತು." ಚಿದಂಬರನು ವ್ಯಂಗ್ಯವಾಗಿ ನುಡಿದನು.

"ಅದೇನು?" ಅರುಣ ಕೇಳಿದನು

"ಕರುಣನು ವರನಾದನು. ವಧೂಪರೀಕ್ಷೆಗೆ ಅವನು ಕಾಲುಹಿಡಿದನು. ನಾನೂ ನಿನ್ನ ಜೊತೆಗೆ ಬಂದಿದ್ದರೆ ಕನ್ಯೆಯ ತಂದೆಯುವರ ಪರಿಚಯವಾಗುತ್ತಿದ್ದಿತು. ಪ್ರಸಂಗ ವಿಶೇಷದಲ್ಲಿ ಎಲ್ಲಿಯವರು, ಯಾರ ಮಕ್ಕಳು, ಎಷ್ಟು ಕಲಿತಿರುವಿರಿ ಎಂದು ಕೇಳಬಹುದಿದ್ದಿತು. ಇದರಿಂದ ನಾವೂ ಮದುವೆಯಾಗಲಿರುವ ವರಗಳೆಂದು ತಿಳಿಯುತ್ತಿದ್ದಿತು. ಒಂದೆರಡು ಕನ್ಯೆಯ ತಂದೆಯವರು ತಮ್ಮ ಮಕ್ಕಳನ್ನು ನಮಗೂ ತೋರಿಸಲು ಬರುತ್ತಿದ್ದರು. ಬ್ರಹ್ಮ ಸಂಕಲ್ಪವಿದ್ದಂತೆ ಮದುವೆಯಾಗಿ ಹೆಂಡಂದಿರ ಗಂಡರಾಗುತ್ತಿದ್ದೆವು. ಮಹಾರಾಯಾ ಈ ಮಹೋಪಕಾರಕ್ಕಾದರು ಕರೆದುಕೊಂಡು ಹೋಗಬಾರದಿದ್ದಿತೇ?" ಎಂದು ಗಂಭೀರವಾಗಿ ಚಿದಂಬರನು ನುಡಿದನು.

ಎಲ್ಲರೂ ಖೊಳ್ಳೆಂದು ನಕ್ಕರು.

" ಇಷ್ಟೇಕೆ ಹಸಿವೆ ಮದುವೆಗೆ ?" ಗೌರಿಶಂಕರನು ಕೇಳಿದನು.

" ಹಸಿವೆ ! ಇನ್ನು ನಾಲ್ಕಾರು ವರುಷ ಹೋದರೆ ನಿಮ್ಮನ್ನು ಯಾವ ಯಾದಿಯಲ್ಲಿ ಹಾಕುವರು ಗೊತ್ತೇ ?"

" ಯಾವ ಯಾದಿ ?"

" ಶಿಖಂಡಿ ನಂಬರು ೨."

ಮತ್ತೆ ನಗಹತ್ತಿದರು.

ಕೆಲಹೊತ್ತಿನ ಮೇಲೆ ಚೇಷ್ಟೆಯ ವಾತಾವರಣವು ತಿಳಿಯಾಯಿತು. ಎಲ್ಲರೂ ವಿಷಯಕ್ಕೆ ಬಂದುನಿಂತರು. ಮನೆಯ ಮುಂದಿನ ಕೋಣೆಯಲ್ಲಿ ಬಂದು ಕುಳಿತರು. ಕರುಣನು ಅವರ ನಡುವಿನ ವಿಷಯದ ಗಟ್ಟಿಯಾಗಿ ಕುಳಿತಿದ್ದನು. ಅವರು ಹೀಗೆ ಅನಿರೀಕ್ಷಿತವಾಗಿ ಬಂದುದು, ಭಾವೀ ಹೆಂಡತಿಯ ಸಂಬಂಧ ವಿಚಾರಿಸುವುದು, ತಾನು ಅವರ ನೂರು ಪ್ರಶ್ನೆಗಳಿಗೆ ಉತ್ತರಿಸುವುದು ಕರುಣನಿಗೆ ಸಂಕಟ ಮತ್ತು ಸಂಕೋಚದ ಸಂಗತಿಗಳಾಗಿದ್ದುವು. ಆದರೂ ಮನಸನ್ನು ಗಟ್ಟಿಮಾಡಿಕೊಂಡು, ಧೈರ್ಯವನ್ನು ಸಂಪಾದಿಸುತ್ತಿದ್ದನು. ಚಿದಂಬರನೇ ಮಾತು ಆರಂಭಿಸುವಂತೆ—

" ಕರುಣ, ನೀನು ಹೆಣ್ಣು ನೋಡಹೋದುದು ಸತ್ಯವಾದ ಸಂಗತಿಯೇ ?" ಎಂದು ಕೇಳಿದನು.

" ಅಹುದು." ಕರುಣನು ಗೋಣು ಅಲ್ಲಾಡಿಸಿದನು.

" ನಮ್ಮನ್ನು ಕರೆಯಬಾರದೇ ?"

" ನನಗೆ ಮೊದಲು ಗೊತ್ತಿರಲಿಲ್ಲ."

" ನಿಜವಾಗಿ ?" ಅರುಣನು ಪ್ರಶ್ನಿಸಿದನು.

" ನಿಜವಾಗಿ."

" ಯಾರು ಕರೆದುಕೊಂಡು ಹೋಗಿದ್ದರು ?"

" ತಂದೆಯವರು."

" ಹೆಣ್ಣು ನೋಡುವುದಿದೆ ಎಂದು ತಿಳಿಸಿರಲಿಲ್ಲವೇ ?" ಚಿದಂಬರನು ಪುನಃ ಕೇಳಿದನು.

" ನಿಜವಾಗಿ ನನಗೆ ಗೊತ್ತಿರಲಿಲ್ಲ. ಗೊತ್ತಿದ್ದರೆ ಎಲ್ಲರನ್ನು ಬಿಟ್ಟರೂ ನಿನ್ನನ್ನು ಮರೆಯುತ್ತಿರಲಿಲ್ಲ."

" ಅದೇಕೆ ?" ನಗುತ್ತ ಕೇಳಿದನು.

" ನೀನು ಹೆಣ್ಣಿನ ಪರೀಕ್ಷೆಯಲ್ಲಿ ಜಾಣನೆಂದು ತಿಳಿದಿರುವೆ ?"

" ಕರುಣ, ಇಂಥ ಮಾತು............!" ಚಿದಂಬರನು ಬಾಯಿತೆರೆದನು.

" ಇದೇ ನೀನು ನುಡಿದಿರುವೆ. ನಿನ್ನ ಪರೀಕ್ಷೆಯ ಫಲಿತಾಂಶಕ್ಕೆ ನಾನು ಸೈ ಅನ್ನುವುದು ಒಳ್ಳೆಯದೆಂದು..........."

ಮಾತು ಚಿದಂಬರನ ಮೇಲೆ ತಿರುಗಿತು.

" ಅಂತೂ ನೀನು ಇನ್ನೂ ಸೈ ಅಂದಿಲ್ಲ."

" ನಿಜವಾಗಿ ಇಲ್ಲ."

" ಸೈ ಅಂದಿಲ್ಲವೇಕೆ ?" ಶಂಕರನು ಕೇಳಿದನು.

" ಯಾರೂ ಅಭಿಪ್ರಾಯವನ್ನು ಹೇಳಿಲ್ಲ."

" ನೀನು ಹೇಳು."

ಈ ಹರಟೆ ಎಲ್ಲರಿಗೂ ಬೇಡಾಯಿತು. ಶಿವಶಂಕರನು ತಡೆದು—'ಅದೇನು ಗೊಡ್ಡು ಹರಟೆ ಬಿಟ್ಟುಬಿಡಿರಿ. ಬಂದದ್ದೇಕೆ ವಿಚಾರಿಸಬಾರದೇ ?' ಎಂದನು.

" ಕರುಣ, ಕನ್ಯೆಯು ಹೇಗಿದ್ದಾಳೆ ?" ಶಂಕರನು ಕೇಳಿದನು.

" ಇದಕ್ಕೆ ಏನೆಂದು ಉತ್ತರವನ್ನು ಕೊಡಬೇಕು ?" ಕರುಣನು ತಿಳಿಯದೆ ನುಡಿದನು.

" ನಿನ್ನ ಮನಸಿಗೆ ಬಂದಿರುವಳೋ ಇಲ್ಲವೋ ! ಅದನ್ನು ಹೇಳಬೇಕು " ಚಿದಂಬರನು ಕೇಳಿದನು.

ಕರುಣನು ಮಾತಾಡದೆ ಸುಮ್ಮನೆ ಕುಳಿತನು.

" ಏಕೆ ಸುಮ್ಮನೆ ಕುಳಿತೆ ?" ಅರುಣನೆಂದನು.

" ನನಗೆ ಉತ್ತರಿಸುವುದು ತಿಳಿಯಲೊಲ್ಲದು."

" ನೀನು ನೋಡಲಿಲ್ಲವೇ ?"

" ನೋಡಿರುವೆ."

" ಅಂದ ಮೇಲೆ ಹೇಳು?"

" ಎರಡು ಕಣ್ಣಿನಿಂದ ಐದು ನಿಮಿಷ ನೋಡಿದಾಕ್ಷಣ ನಿಮ್ಮ ನೂರು ಪ್ರಶ್ನೆಗಳಿಗೆ ಉತ್ತರಿಸುವಷ್ಟು ವಿಷಯ ಸಂಗ್ರಹವಾಗಬಹುದೇ ! ನನ್ನ ಅಜ್ಞಾನವನ್ನು ನಾನು ಒಪ್ಪುವೆ."

" ಭಲೆ ಭಲೆ !" ಚಿದಂಬರನು ನುಡಿದನು.

" ಹಾಗಲ್ಲ ಕರುಣ. ನಾವು ಸಾಮಾನ್ಯವಾಗಿ ಕೇಳುವೆವು. ನಿಮ್ಮ ತಂದೆಯವರು ಯಾರಿಗೂ ತಿಳಿಸದೆ, ಗೋಪ್ಯವಾಗಿ ನಿನ್ನನ್ನು ಕರೆದುಕೊಂಡು ಹೋಗಿ ಯಾವುದೋ ಒಂದು ಹೆಣ್ಣನ್ನು ತೋರಿಸಿ ಕೊರಳಿಗೆ ಕಟ್ಟಿದರೆ ನಮಗೆ ಒಪ್ಪಿಗೆಯಿಲ್ಲ. ನೀನು ನಮ್ಮ ಗೆಳೆಯ. ನಿನ್ನ ಹಿತದಲ್ಲಿ ನಮಗೂ ಆಶೆ. ನೀನು ನೋಡಿದ ಕನ್ಯೆಯು ಎಲ್ಲ ರೀತಿಯಿಂದ ಒಳ್ಳೆಯವಳಾಗಿರಬೇಕು. ಅದಕ್ಕೆ ಕೇಳಿದೆನು " ಅರುಣ ನುಡಿದನು.

" ಒಳ್ಳೆಯವಳೆಂದು ಹೇಗೆ ಹೇಳಲಿ ? ಅಪರಚಿತ ಹೆಣ್ಣನ್ನು ಒಂದೆರಡು ನಿಮಿಷ ನೋಡಿರುವೆ."

" ಅದನ್ನು ಬಿಡು. ಕುಂಟಿ ಏನು ?"

" ಅಲ್ಲ. ಕಾಲುಗಳು ಗಟ್ಟಿಯಾಗಿವೆ."

" ಕುರುಡಿ ಏನು ?"

" ಇಲ್ಲ. ಕಣ್ಣುಗಳು ಹೊಳೆಯುತ್ತವೆ."

" ಕಿವುಡಿಯೇ ?"

" ಮಾತು ಕೇಳಬರುವುವು."

" ಕರೆವ್ವಳೇನು ?"

" ಇಲ್ಲ. ನನ್ನ ಮೈ ಬಣ್ಣದವಳು."

" ನಂದಿಯ ಕೋಲೇನು ?"

" ಇಲ್ಲ. ನನ್ನಷ್ಟೇ ಎತ್ತರ.

" ಸ್ಥೂಲದೇಹಿ ಏನು ?"

" ಹಾಗೇನಿಲ್ಲ. ಮೈ ಎತ್ತರಕ್ಕೆ ಹಾಳತವಾಗಿದೆ."

" ಮುಖವು ಉಗ್ರವಾಗಿದೆ ಏನು ?"

" ಇಲ್ಲ. ಸೌಮ್ಯ ಕಳೆಯು ತುಂಬಿಕೊಂಡಿದೆ."

" ಕಂಚಿನ ಗಂಟೆಯನ್ನು ಬಾರಿಸಿದಂತೆ ದನಿ ಏನು ?"

" ಧ್ವನಿಯು ಕೋಮಲವಾಗಿದೆ. ಉಚ್ಚಾರವು ಸ್ಪಷ್ಟವಾಗಿದೆ."

" ಹಾಗಾದರೆ ನೀನು ಒಪ್ಪಿದಂತೆ ಸರಿ. ಇನ್ನು ನಾವು ನೋಡುವ ಆವಶ್ಯಕತೆಯೇನಿದೆ ?"

ಕರುಣನು ಮಾತಿನಲ್ಲಿ ಸಿಕ್ಕನು. ಇಂಥ ಉತ್ತರಗಳಿಂದ ಕಲ್ಯಾಣಿಯನ್ನು ಮೆಚ್ಚಿಕೊಂಡಿರುವನೆಂದು ಸ್ಪಷ್ಟವಾಯಿತು.

" ಕರುಣ, ಚತುರ್ಭುಜನು ಎಂದಾಗುವೆ ?" ಚಿದಂಬರನು ಕೇಳಿಯೇ ಬಿಟ್ಟನು.

" ನೀನು ಇಷ್ಟು ಮುಂದೆ ಓಡಬಹುದೆಂದು ತಿಳಿಯಲಾರೆ." ಕರುಣನು ನುಡಿದನು.

" ಓಡದುಂಟೇ ?" ನಾನು ಇದಕ್ಕೂ ಮುಂದೆ ನಿಂತು ಮಾತಾಡಬೇಕೆನ್ನುವೆ."

" ಅದೇನು ಮಹಾರಾಯ ?"

" ನಿನ್ನ ಚೊಚ್ಚಲ ಮಗನ ಹೆಸರನ್ನು ಹುಡುಕಿರುವೆಯಾ ? ನಾನು ಹುಡುಕಿ ಗಟ್ಟಿಮಾಡಿಕೊಂಡಿರುವೆ. ನಿನಗೆ ಗೊತ್ತೇ ? ಉಹು........ನಿನಗೆ ತಿಳಿಯುವ ಬಗೆಯಾವುದು !........ನೀನು ಹೆಣ್ಣನ್ನು ನೋಡಲಿಕ್ಕೆ ಹೋದ ಸುದ್ದಿಯು ಮೊದಲು ನನಗೆ ತಿಳಿಯಿತು. ಮನೆಯಲ್ಲಿಯ ಪುರಾಣನಾಮ ಚೂಡಾಮಣಿಯ ಪುಸ್ತಕವು ಅದೇ ಸಮಯಕ್ಕೆ ಕೈಗೆ ಸಿಕ್ಕಿತು. ಮುನ್ನೂರು —ನಾಲ್ಕುನೂರು ಪುಟಗಳನ್ನು ತಿರುವಿ ಹಾಕಿ ಒಂದು ಆರಿಸಿರುವೆ. ಅದನ್ನೇ ನಿನ್ನ ಮಗನಿಗೆ ಇಡುವುದು. ಇದು ನಿಶ್ಚಯವಾದ ಸಂಗತಿ."

" ಯಾವುದು ?" ಶಿವಶಂಕರನು ಮುಗುಳು ನಗೆಯಿಂದ ಕೇಳಿದನು.

" ಒಳ್ಳೆಯ ಹೆಸರು. ಮೆಚ್ಚಬೇಕು."

" ಏನು ?" ಬಲವಂತ ಕೇಳಿದನು.

" ರತ್ನದೀಪ ! ಕರುಣನ ಮನೆಯ..........."

ಕರುಣನು ನಮಸ್ಕಾರ ಮಾಡಿದನು.

ಉಳಿದವರು ಚಿದಂಬರನ ಈ ನಗೆಯ ಮಾತಿಗೆ ಹೊಟ್ಟೆ ಬಿರಿಯುವಂತೆ ನಗಹತ್ತಿದರು.

" ಹೆಸರು ಒಳ್ಳೆಯದಿಲ್ಲವೇ ?" ಚಿದಂಬರನು ಕೇಳಿದನು.

" ಆ ಕೂಸು ಈಗ ಬೆಳೆದು ದೊಡ್ಡದಾಗಿರಬೇಕು !" ಅರುಣನು ನುಡಿದನು.

" ಓ !"

" ಎಷ್ಟು ?" ಶಿವಶಂಕರನು ಕೇಳಿದನು.

" ಮಾಯನಸ್ (—) ಹತ್ತು ತಿಂಗಳು. ಎಂಥ ಸುಂದರವಾದ ಮುಖ ! ಏನು ಬಣ್ಣ ! ಏನು ಕಣ್ಣು !............"

ಚಿದಂಬರನ ಈ ಗೂಢಮಾತು ತಿಳಿಯಲಿಲ್ಲ. ಅದು ನಿಜವಾಗಿ ಒಂದು ತಮಾಷೆಯ ಮಾತಾಗಿದ್ದಿತು. ನಗೆಯ ಸಂಗತಿಯಾಗಿದ್ದಿತು. ತಿಳಿದಿದ್ದರೆ ಹೊಟ್ಟೆಯು ಹರಿಯುವಂತೆ ನಗೆಯ ಬುಗ್ಗೆಯು ಎಲ್ಲರಿಂದ ಚಿಮ್ಮುತ್ತಿದ್ದಿತು. ಆದರೆ ಸುಮ್ಮನೆ ಕುಳಿತರು. ಶಿವಶಂಕರನು ಚಿದಂಬರನ ಆವೇಶದ ಮಾತುಗಳನ್ನು ತಡೆದು–"ನಿನ್ನ ಮಾತು ತಿಳಿಯಲಿಲ್ಲ. ಮಾಯನಸ್ ಹತ್ತು ತಿಂಗಳೆಂದರೇನು ?" ಎಂದು ಕೇಳಿದನು.

ಕರುಣನಿಗೆ ಗೆಳೆಯರ ಈ ಹರಟೆ ಬೇಕಿರಲಿಲ್ಲ. ಅವನಿಗೆ ತುಂಬಾ ನಾಚಿಕೆಯಾಗಿದ್ದಿತು. ವಿಷಯಾಂತರದಿಂದ ಇನ್ನೊಂದು ಮಾತನ್ನು ಯಾರಾದರೂ ತೆಗೆಯಬಹುದೇ ಎಂಬ ಆತುರದಲ್ಲಿದ್ದನು. ಆದರೆ ಮೂಲ ಹರಟೆಯು ಇನ್ನೂ ಮುಗಿದಿರಲಿಲ್ಲ. ಚಿದಂಬರನ ಈ ಗೋಪ್ಯದ ಅರ್ಥಕ್ಕಾಗಿ ಎಲ್ಲರೂ ವಿಸ್ಮಯಪಟ್ಟಿದ್ದರು. ಮದುವೆ ಎಂದೋ, ಅದು ಆಗುವುದೋ ಇಲ್ಲವೋ, ಕಲ್ಯಾಣಿಯ ತಂದೆಯವರು ಕೊಡುವರೊ ಇಲ್ಲವೋ, ಕಲ್ಯಾಣಿಯು ಕರುಣನನ್ನು ಮೆಚ್ಚುವಳೋ ಇಲ್ಲವೋ ಇವು ದೂರದ ಮಾತುಗಳಾಗಿದ್ದುವು. ಆದರೆ ಗೆಳೆಯರು ಅವನ ಚೊಚ್ಚಲ ಮಗನ ಸಂಬಂಧ ಹರಟೆಹೊಡೆಯುತ್ತಿದ್ದರು. ಕರುಣನು ವಿಭ್ರಾಂತನಾಗಿ ಸುಮ್ಮನೆ ಕುಳಿತಿದ್ದನು. ಮೇಲೆ ಚಿದಂಬರನ ಮಾತಿನಲ್ಲಿ ಸ್ವಾರಸ್ಯವಿದ್ದಿತು. ನಗೆಯ ಉನ್ಮಾದವಿದ್ದಿತು. ಕೇಳುವ ತವಕದಿಂದ ತಾನೂ ಉತ್ತರದ ನಿರೀಕ್ಷೆಯಲ್ಲಿದ್ದನು.

ಶಿವಶಂಕರನು ಮತ್ತೆ ಕೇಳಿದನು.

" ಅಯ್ಯೋ ಮಂಕೇ, ಇಷ್ಟು ಅರ್ಥವಾಗದೆ ! ಮ್ಯಾಟ್ರಿಕ್‌ನಲ್ಲಿ ಮೂರು ವರುಷ ಗೋತ ಹಾಕಿದ್ದು ಸಾರ್ಥಕದ ಮಾತು."

" ಅಹುದಪ್ಪ ನಿನ್ನ ಮಾತು ನಿಜ. ತಲೆಯು ಮೊಂಡವೆಂದೇ ತಿಳಿಯಲೊಲ್ಲದು. ಈ ನಿನ್ನ ಗಣಿತದ ಉಪಶಕ್ತಿಯನ್ನು ಕೇಳಿದ ಮೇಲಾದರೂ ಒಂದೆರಡು ಬೇರುಗಳು ಹುಟ್ಟಿಕೊಂಡಾವು ! ಹೇಳು" ಎಂದು ಅಣಕವಾಡಿದನು.

" ಅರ್ಥ ಇಷ್ಟು. ಕರುಣನೆಲ್ಲಿ ?"

" ಇಲ್ಲೇ ಇರುವೆ. ಏನು ?" ಎಂದನು.

ನಿನ್ನ ವಂಶಾವಳಿಯ ಸ್ತುತಿಯನ್ನು ಇಷ್ಟು ಮಾಡ ಹತ್ತಿದಮೇಲೆ ಒಂದು ಕಪ್ಪು ತಣ್ಣೀರನ್ನಾದರೂ ತಂದುಕೊಡು, ಗಂಟಲು ಒಣಗಿದೆ."

" ಅದೇಕೆ ! ಮದುವೆಯ ದಿನ ಚಹ ಕುಡಿಯುಬಹುದು."

" ಈಗ ನೀರು ಕೊಡು. ಮದುವೆಯ ದಿನ ಎಲ್ಲರಿಗೂ ಏನು ಕುಡಿಸುವೆಯೋ ಅದನ್ನು ಕುಡಿದರಾಯಿತು."

ಕರುಣನು ನೀರು ತಂದುಕೊಟ್ಟನು. ಚಿದಂಬರನು ನೀರು ಕುಡಿದು ಗಂಟಲು ಹಸಿಮಾಡಿಕೊಂಡನು. ಸಾಲೆಯ ಗುರುಗಳಂತೆ ಆಢ್ಯತೆಯಿಂದ ಕುಳಿತು—ಏನು ಬೇಕು ? ಮಾಯನಸ್ ಹತ್ತು ತಿಂಗಳಲ್ಲವೇ ? ಎಂದು ಪ್ರಶ್ನಿಸಿದನು.

" ಹ............" ಶಿವಶಂಕರನು ನುಡಿದನು.

" ಕರುಣನು ಹೆಣ್ಣು ನೋಡಿರುವನು. ಅವನ ಮಾತಿನ ಧೋರಣೆಯಿಂದ ಹೆಣ್ಣನ್ನು ಮೆಚ್ಚಿಕೊಂಡಿರುವನು. ಹೆಣ್ಣಿನವರೂ ಕೊಡುವರು. ಕರುಣನು ಸುಂದರನು. ಸುದೃಢನು. ತಕ್ಕವನು. ಇಂದಿಲ್ಲ ನಾಳೆ ನಿಶ್ಚಯವಾಗುವುದು. ತಿಂಗಳಲ್ಲಿ ಮದುವೆಯಾಗುವುದು. ಮದುವೆಗೆ ಒಂದು ತಿಂಗಳೆಂದು ಇಟ್ಟುಕೊಳ್ಳುವ. ಹೆಂಡತಿಯು ಮನೆಗೆ ಬರುವಳು. ಕರುಣನು ಸಂಸಾರಿಯಾದನು. ಬಂದು ದಿನದ ಲೆಕ್ಕ ಹಿಡಿದರೆ ಒಂಬತ್ತು ತಿಂಗಳಲ್ಲಿ ತಂದೆಯಾಗುವನು. ಇದು ಇಂದಿನ ಎಲ್ಲ ತರುಣರ ಸಾಮಾನ್ಯ ನಿಯಮ. ಅಂದಮೇಲೆ ಇವನ ಮಗನ ವಯಸ್ಸು—೧೦ (ಮಾಯನಸ್ ಹತ್ತು) ತಿಂಗಳಾಗಲಿಲ್ಲವೇ ?" ಕಣ್ಣರಳಿಸಿ ಎಲ್ಲರನ್ನೂ ನೋಡಿದನು.

" ಭಲೆ ಭಲೆ !" ಎಂದು ಎಲ್ಲರೂ ಚಿದಂಬರನ ಬೆನ್ನು ಚಪ್ಪರಿಸುತ್ತ ನಗಹತ್ತಿದರು.

" ಇದು ಸೋಜಿಗವಲ್ಲ. ಮದುವೆಯಾದ ಮೂರು ತಿಂಗಳಲ್ಲಿ ತೊಟ್ಟಿಲ ತೂಗಿದ ತಂದೆ—ತಾಯಂದಿರುಂಟು, ಆದರೆ ನಮ್ಮ ಕರುಣನು ಆ ಮಾಲಿಕೆಯೊಳಗಿನವನಲ್ಲ." ಎಂದು ಮುಗಿಸಿದನು.

ಸಂಜೆಯ ಐದು ಗಂಟೆಯಾಯಿತು. ಇನ್ನು ಕರುಣನ ತಂದೆಯವರು ಸಾಲೆಯಿಂದ ಬರಬಹುದೆಂದು ಎಲ್ಲರೂ ಎದ್ದರು.

" ಕರುಣ ನಾವು ಇನ್ನು ಮನೆಗೆ ಹೋಗುವೆವು. ಆದರೆ ಒಂದು ಮಾತು."

" ಏನು ?" ಕರುಣನು ಕೇಳಿದನು.

" ಲಗ್ನಪೂರ್ವದಲ್ಲಿ ನಿನ್ನ ಭಾವೀ ಹೆಂಡತಿಯನ್ನು ನಾವಷ್ಟು ನೋಡಬೇಕೆಂದಿರುವೆವು. ಇದು ನಿನಗೆ ಒಳ್ಳೆಯದೇ ಎಂದು ತಿಳಿ. ಅದಕ್ಕೆ ಗುರುಗಳಿಗೆ ಒಂದಿಷ್ಟು ಹೇಳು." ಚಿದಂಬರನು ನುಡಿದನು.

" ನಾನು ಹೇಗೆ ಹೇಳಲಿ ?"

" ಹೇಳುವ ಪ್ರಸಂಗ ಬಂದರೆ ವ್ಯರ್ಥವಾಗಿ ಕಳೆದುಕೊಳ್ಳಬೇಡ."

" ನನಗೆ ತಿಳಿಯದು."

" ನಾವಾಗಿಯೇ ಗುರುಗಳನ್ನು ಕೇಳಬಾರದೇಕೆ ?" ಶಿವಶಂಕರನು ನುಡಿದನು.

" ಇದು ಕೊನೆಯ ಪ್ರಸಂಗ." ಚಿದಂಬರನೆಂದನು.

ಗೆಳೆಯರು ತಮ್ಮ ತಮ್ಮ ಮನೆಯ ಕಡೆಗೆ ನಡೆದರು.

## ೩

ಕರುಣನ ಲಗ್ನದ ವಿಷಯವು ಬೀದಿಮಾತಾಯಿತು. ಹಳ್ಳಿಯ ಎಲ್ಲ ಹಿರಿಯ–ಕಿರಿಯರು ಈ ಮಾತನ್ನು ಅರಿತರು. ಸಂತೋಷಪಟ್ಟರು.

ದತ್ತಗುರುಗಳು ತಮ್ಮ ಹೆಂಡತಿಯನ್ನು ಕಳೆದುಕೊಂಡು ೮–೧೦ ವರುಷಗಳಾಗಿದ್ದುವು. ಅಂದಿನಿಂದ ತಮ್ಮ ಎರಡನೆಯ ಮದುವೆಯ ವಿಷಯವಾಗಿ ನುಡಿದಿರಲಿಲ್ಲ. ಗೆಳೆಯರು ಅನೇಕ ಬಗೆಯಾಗಿ ಆಗ್ರಹಮಾಡಿದ್ದರು. ಆದರೆ ಆ ಮಾತನ್ನು ಅವರು ಕಿವಿಯ ಮೇಲೆ ಹಾಕಿಕೊಂಡಿರಲಿಲ್ಲ. ವಿಶೇಷ ಆಗ್ರಹ ಪಡಿಸುವವರಿಗೆ—

“ ಮನೆಯಲ್ಲಿ ಹನ್ನೆರಡು ವರುಷದ ಮಗನಿರುವನು. ಅವನ ಪಾಲನೆ–ಪೋಷಣೆಯಲ್ಲಿ ದಿನಗಳನ್ನು ಕಳೆದರೆ ಒಳ್ಳೆಯದೆನಿಸುವುದು. ನನಗೂ ಬೇರೊಂದು ಮದುವೆಯ ಆಶೆಯಿಲ್ಲ. ನಾನು ಒಲ್ಲೆ.” ಎಂದು ವಿರಕ್ತಿಯ ಮಾತನ್ನು ಎಳೆಯುತ್ತಿದ್ದರು.

ಆಗ್ರಹವಾದಿಗಳು—“ ಅಲ್ಲ. ನಿಮಗೆ ವಯಸ್ಸಿದೆ. ಮುದುಕರಲ್ಲ. ಗಂಡು ಹೆಣ್ಣಿನ ನೆಮ್ಮದಿಯಲ್ಲಿ ಬದುಕಬೇಕು. ಇದು ಪ್ರಕೃತಿ ನಿಯಮ. ನೀವು ಮೊದಲಿನ ಹೆಂಡತಿಯ ಮೇಲಿನ ಮಮತೆಯಿಂದ, ಕರುಣನ ಮೇಲಿನ ವಾತ್ಸಲ್ಯದಿಂದ ಹೀಗೆ ನುಡಿಯುತ್ತಿರುವಿರಿ. ಇದು ಒಳ್ಳೆಯ ಮಾತು. ಆದರೆ ಪ್ರಕೃತಿಯಲ್ಲಿಯ ಏರಿಳಿತಗಳನ್ನು ತಡೆಯಲಾದೀತೇ ? ನಮಗಂತೂ ನಿಮ್ಮ ವಯಸ್ಸನ್ನು ನೋಡಿ ಇನ್ನೂ ಆಗ್ರಹಪಡಿಸಬೇಕೆನಿಸವುದು.” ಎನ್ನುತ್ತಿದ್ದರು.

“ ನಾನು ನನ್ನ ಪ್ರಕೃತಿಯನ್ನು ನಂಬಲಾರೆನೇ ?”

“ ಹೇಗೆ ನಂಬುವಿರಿ ?”

“ ಸಂಕಲ್ಪಿಸಿದ್ದೇನೆ.”

“ ಸಂಕಲ್ಪ ? ವಿಶ್ವಾಮಿತ್ರನ ಸಂಕಲ್ಪವನ್ನು ಪುರಾಣದಲ್ಲಿ ಓದಿಕೊಂಡಿರುವೆವು !”

“ ಅವನ ಸಂಕಲ್ಪವನ್ನು ಹಾಳುಮಾಡಲು ದೇವಲೋಕದ ಅಪ್ಸರೆಯು

ಕಾರಣಳಾದಳು."

" ನಿಮ್ಮಂಥವರಿಗೆ ಬೀದಿಯ ಮೇಲಿನ ಒಬ್ಬ ಸಾಮಾನ್ಯ ಹೆಂಗಸು ಸಾಕು."

" ಎಲ್ಲರ ಮನಸು ಇಷ್ಟು ಕೀಳೆಂದು ಬಗೆಯುವಿರಾ ?"

" ಮನಸು ಕೀಳಲ್ಲ. ವಯಸ್ಸಿನ ಉನ್ಮಾದ ವಿಕೃತಿಗೊಂಡರೆ ಕೀಳಾಗುವುದು."

" ನಾನು ನಂಬಲಾರೆ."

" ನಾನೂ ನಂಬುವುದಿಲ್ಲ. ಆದರೆ ಈಗಲ್ಲ."

" ಏಕೆ ?"

" ನಿಮ್ಮ ತಲೆಯು ನಡುಗಲಿ. ಬೆನ್ನು ಬಗ್ಗಲಿ. ಕೈಗೆ ಕೋಲು ಬರಲಿ. ನಾನು ನಂಬುವೆನು."

ದತ್ತಗುರುಗಳು ನಗಹತ್ತಿದರು.

ಈ ವಿಷಯದ ಹರಟೆ ಮತ್ತು ನಗೆ ಅಂದಿಗೆ ಮುಗಿಯಲಿಲ್ಲ. ಕೂಡಿದಾಗ ಗೆಳೆಯರು ಅದೇ ವಿಷಯವನ್ನು ಎತ್ತಿ ಆಡುತ್ತಿದ್ದರು. ಮದುವೆಯಾಗಲು ಒತ್ತಾಯಪಡಿಸುತ್ತಿದ್ದರು. ತಮ್ಮ ಸುಖ ಜೀವನದ ಚಿತ್ರಗಳನ್ನು ಹೃದಯಂಗಮವಾಗಿ ವರ್ಣಿಸುತ್ತಿದ್ದರು.

" ನೋಡಿರಿ ದತ್ತಗುರುಗಳೇ " ಎಂದು ಆರಂಭಿಸುತ್ತ—

" ಮನೆಯಲ್ಲಿ ಹೆಂಡತಿಯೆಂಬುವುದೊಂದು ಪ್ರಾಣಿ ಇರಬೇಕು. ನಮ್ಮ ಹಿಂದೂ ಧರ್ಮ ಪದ್ಧತಿಗೆ, ನಮ್ಮ ಸಂಸ್ಕಾರಕ್ಕೆ ಅದು ಅವಶ್ಯವಾದ ಪ್ರಾಣಿಯು. ಮನೆಯ ಹೆಣ್ಣನ್ನು ಕೇವಲ ಪ್ರಪಂಚಕ್ಕೆ ಬಳಸುತ್ತೇವೆಂದು ಹೇಳಲಾಸಲ್ಲ. ಅದು ನಮ್ಮ ನೂರು ಬಯಕೆಯಲ್ಲಿಯ ಒಂದು ಪಾಲು. ಬೇನೆ ಬೀಳಲಿ, ಬೇಸರಿಕೆಯಾಗಲಿ, ಆಯಾಸವಾಗಲಿ, ಮನಸ್ಸಿಗೆ ಖೇದವಾಗಲಿ, ಸಂಕಟದ ಪ್ರಸಂಗ ಬರಲಿ ಮನೆಯಲ್ಲಿ ಹೆಂಡತಿಯಿದ್ದರೆ ಎಷ್ಟು ಸಹಾಯ ! ದೂರದ ಕೆಲಸದಿಂದ ಬಂದ ಗಂಡನಿಗೆ ಮನೆಯ ಮಡದಿಯ ಮುಖದರ್ಶನದಿಂದ ಆಯಾಸ ಪರಿಹಾರವಾಗುವುದು. ಅವಳ ನಗೆಯ ಸ್ವಾಗತದಿಂದ ಬೆವರು ಆರಿಬರುವುದು. ಕಾಲಿಗೆ ಒಂದು ಚೊಂಬು ನೀರು ಕೊಟ್ಟರೆ ತಲೆಯು ಶಾಂತವಾಗುವುದು. ಒರಿಸಲು ಅರಿವೆಯನ್ನು ಕೊಟ್ಟರೆ

ದಣಿದ ಸ್ನಾಯುಗಳು ಉತ್ತೇಜನಗೊಳ್ಳುವುವು. ಮಣೆ ಹಾಕಿದರೆ ಪಂಚೇಂದ್ರಿಯಗಳು ಸಮಾಧಿಯನ್ನು ಪಡೆದಂತೆ ಸುಮ್ಮನಾಗುವುವು. ತಿಂಡಿಯನ್ನಿಟ್ಟು ತೆಗೆದುಕೊಳ್ಳಿರಿ ಎಂದು ನುಡಿಯಲು ಜೀವಾತ್ಮವು ಆನಂದ ಪರವಶವಾಗುವುದು. ಒಂದಿಷ್ಟು ಗಾಳಿಯನ್ನು ಹಾಕಿದರೆ ಸಾಯುಜ್ಯ ಸುಖವನ್ನೇ ಪಡೆಯುವುದು. ಎಲೆ-ಅಡಿಕೆಯನ್ನು ಮಡಿಚಿಕೊಟ್ಟರೆ ಬೇರೊಂದು ಸತ್ಯಲೋಕವಿದೆ ಎಂಬ ಪ್ರಜ್ಞೆಯೇ ಅಳಿಯುವುದು. ಇಂಥ ಗೃಹಸೌಖ್ಯವನ್ನು ಕೊಡಲು ಹೆಂಡತಿಯು ಬೇಡವೇ ? ಮದುವೆಯನ್ನು ಮಾಡಿಕೊಳ್ಳಿರಿ." ಎಂದು ಒಬ್ಬರು ನುಡಿದರೆ ಇನ್ನೊಬ್ಬರು—

" ನೋಡಿರಿ ಗುರುಗಳೇ—

ಹೆಣ್ಣು ಬೇರೊಂದು ಮನೆಯ ತಾಯಿ-ತಂದೆಯುವರ ಹೊಟ್ಟೆಯಿಂದ ಹುಟ್ಟಿ ಬರುತ್ತದೆ. ಅಲ್ಲಿ ಹದಿನಾರು-ಹದಿನೆಂಟು ವರುಷಗಳ ವರೆಗೆ ಬೆಳೆಯುತ್ತದೆ. ಲಗ್ನದ ಶಾಸ್ತ್ರದಿಂದ ಆ ಮನೆಯ ನೂರು ರಿಣಗಳನ್ನು ಒಂದು ಕ್ಷಣದಲ್ಲಿ ಹರಿದುಕೊಂಡು ಗಂಡನ ಮನೆಗೆ ಬರುತ್ತದೆ. ಬೆಳೆದ ಮನೆಯ ಸಂಬಂಧವನ್ನು ಮರೆತು ಹೊಕ್ಕ ಮನೆಗಾಗಿ ಪ್ರಾಣಾರ್ಪಣಕ್ಕೆ ಸಿದ್ಧವಾಗುವುದು. ಇದು ಸಾಮಾನ್ಯವಾದ ಮಾತೇ ! ಇಂಥ ಅಸಾಮಾನ್ಯ ದೃಷ್ಟಾಂತಕ್ಕೆ ಹೆಣ್ಣಿನ ಬಾಳೇ ಕಾರಣ. ಅದಕ್ಕಾಗಿಯೇ ಯಜ್ಞ ಯಾಗಾದಿಗಳಲ್ಲಿಯು ಪಶು-ಪ್ರಾಣಿಗಳ ವಧೆಗೆ ಹೆಣ್ಣನ್ನು ಆರಿಸುವುದಿಲ್ಲ. ಅಲ್ಲಿ ಗಂಡೇ ಮುಖ್ಯ. ಏಕೆಂದರೆ ಹೆಣ್ಣು ಜೀವನದಲ್ಲಿ ನಿತ್ಯ ಬಲಿದಾನ ಮಾಡುವುದು ನೀವು ಬಲ್ಲಿರಿ. ಹೆಣ್ಣು ಬಾಳಿನ ಹಣ್ಣು ! ಇಂಥ ಸ್ತ್ರೀ ಸುಖವನ್ನು ನೀವು ಕೆಲದಿನ ಅನುಭವಿಸಿರುವಿರಿ. ಹೀಗಿದ್ದು ಮದುವೆಗೆ ನೀವು ಒಪ್ಪದಿರುವುದು ಒಂದು ಚೋದ್ಯವಲ್ಲವೇ !" ಎಂದು ನುಡಿದರೆ, ಇನ್ನೊಬ್ಬರು—

" ನೋಡಿರಿ ಗುರುವೇ,—

ನಾನು ಇವರಂತೆ ಧರ್ಮವಾದಿಯಲ್ಲ. ಪ್ರಾಕೃತವಾದಿ, ನಿಸರ್ಗವಾದಿ ಅಥವಾ ಜೀವವಾದಿ ಎಂದರೂ ನಡೆದೀತು. ಹೆಣ್ಣು ಗಂಡು ಸಂಲಗ್ನ ಪ್ರಾಣಿಗಳು. ಗಂಡಿಲ್ಲದೆ ಹೆಣ್ಣಿನ ಬಾಳು ಅಪೂರ್ಣ. ಹೆಣ್ಣಿಲ್ಲದೆ ಗಂಡಿನ ಬಾಳು ಅಪೂರ್ಣ. ಮನೆಯ ರುಚಿಗೆ ಹೆಣ್ಣು ಬೇಕೇ ಬೇಕು. ಜೀವನ ರುಚಿಗೆ ಗಂಡು ಬೇಕೇ ಬೇಕು. ಗಂಡಿಲ್ಲದೆ ಜೀವಿಸುವ ಹೆಣ್ಣಿಗೆ ಮರ್ಯಾದೆಯಿಲ್ಲ.

ಜನರ ನೂರು ಹೆಸರುಗಳಿಗೆ ಆಕೆ ಎರವಾಗಬೇಕು. ಹೆಣ್ಣಿಲ್ಲದೆ ಜೀವಿಸುವ ಗಂಡಿಗೆ ಅಷ್ಟೇ ಹೆಸರಿಡುವರು. ಈ ಮಾತು ನಮ್ಮ ಸಾಮಾನ್ಯ ವ್ಯವಹಾರ ದಲ್ಲಿ ಪ್ರಮಾಣವಾದುದು. ನೀವು ಇಂದು ಲಗ್ನ ಸಾಕು ಎಂದು ಹೇಳುವಿರಿ. ಅದಕ್ಕೆ ಅನೇಕ ಕಾರಣಗಳನ್ನು ಕೊಡುವಿರಿ. ಅವೆಲ್ಲ ಆದರ್ಶ ಸತ್ವಗಳು. ನಮ್ಮಂತಹ ಸಾಮಾನ್ಯ ಜೀವಿಗಳಿಗೆ ಆ ಆದರ್ಶಗಳು ನಿಲುಕದ ಹಣ್ಣುಗಳು. ನಾವು ತಾಸಿಗೊಮ್ಮೆ ಉಣ್ಣುವವರು, ಅರ್ಧ ತಾಸಿಗೊಮ್ಮೆ ಕುಡಿಯುವವರು. ಒಂದೇ ಹೊತ್ತು ಉಂಡೇನು ! ಎಂಬುವ ಮಾತು ಋಷಿಗಳದೆಂದು ತಿಳಿ ಯುವೆ. ನೀವು ನಮಗಿಂತ ಚಿಕ್ಕವರು. ದೈಹಿಕ ಕಾವು ನಮ್ಮಂತೆ ನಿಮ್ಮಲ್ಲಿ ಇನ್ನೂ ಇದೆ ಎಂದು ತಿಳಿಯುವೆ. ನನ್ನ ಕಿರಿಯ ಮಗ ಆರು ತಿಂಗಳದಿದೆ. ಇವರು ವರುಷದ ಗಂಜಿಯವರು. ಅವರು ಮನೆಯಲ್ಲಿ ಹೊರಸು ತಂದಿಟ್ಟಿ ರುವರು. ನೀವು ೧೦–೧೨ ವರುಷ ಬ್ರಹ್ಮಚಾರಿಯಾಗಿರುವೆನೆಂದು ಹೇಳು ವಿರಿ. ಇದು ನಮಗೆ ಅಶಕ್ಯವೆನಿಸುವುದು. ನೀವು ನಿಜವಾಗಿಯೇ ಇರ ಬೇಕು. ಅದು ದೇವರಿಗೆ ಗೊತ್ತು. ಆದರೆ ನಾವು ನಂಬಲಾರೆವು. ಇದಕ್ಕೆ ನಾವೇ ಸಾಕ್ಷಿ. ಹಾಗಿದ್ದರೆ ಅದೂ ಒಳ್ಳೆಯದೇ. ಆದರೆ ಗುರುಗಳೇ, ಅದು ಒಂದಿಲ್ಲೊಂದು ದಿನ ಬೈಲಿಗೆ ಬಂದರೆ ಹನ್ನೆರಡು ವರುಷದ ರಾಡಿಯೆಲ್ಲ ಹೊರ ಬಿದ್ದು ಅನಾಹುತವಾಗಬಹುದಲ್ಲವೇ ?" ಎಂದು ಸ್ಪಷ್ಟವಾಗಿ ನುಡಿದರು.

ದತ್ತಗುರುಗಳು ಒಂದಿಷ್ಟು ಸಿಟ್ಟಿನ ಭಾವವನ್ನು ತೋರಿಸುತ್ತ—"ಹೀಗೆ ನನ್ನ ಮೇಲೆ ಆರೋಪಿಸಬಹುದೇ ? " ಎಂದರು.

" ಇದಕ್ಕೆ ಉತ್ತರವು ನನ್ನ ಮಾತಿನಲ್ಲಿಯೇ ಇದೆ. ನೀವು ಪರಿಶುದ್ಧ ರಿರಬೇಕು. ನಮ್ಮ ಸಂಶಯವನ್ನು ನಿಮ್ಮ ಮುಂದೆ ನುಡಿದೆನು. ಊರ ಲ್ಲಿಯ ಕೆಲವು ಜನರು ಹೀಗೆಯೇ ನುಡಿಯುವರು. ನಾವು ಬಾಯಿಯನ್ನು ಹೊಲಿದುಕೊಳ್ಳುವೆವು. ಆದರೆ ಅವರಿಗೆ ಯಾರು ತಿಳಿಹೇಳಬೇಕು !"

" ಅದಕ್ಕೆ ನನ್ನ ಉಪಾಯವೇನು ? ನಾನಂತೂ ದೇವರನ್ನು ಸ್ಮರಿಸಿ ಪವಿತ್ರನಿರುವೆ." ಗುರುಗಳು ನುಡಿದರು.

" ಇದ್ದೀತು. ನಾವು ಇಲ್ಲೆನ್ನಲಾರೆವು. ಆದರೆ........... ...."

ದತ್ತಗುರುಗಳ ಸಂಬಂಧ ಅವರ ಗೆಳೆಯರು, ಊರ ಕೆಲ ಹಿರಿಯ —ಕಿರಿಯರು ಹೀಗೆ ತರ್ಕ ಹೂಡಿದರೆ ಯಾರು ತಡೆಯಬಲ್ಲರು ! ಮಾತು

ಗಳು ಮುಂದೆ ಸಾಗುತ್ತಿದ್ದವು.

ಒಂದು ದಿನ—

ದತ್ತಗುರುಗಳ ಮನೆಯ ಕೆಲಸದವಳಾದ ಗಂಗಮ್ಮನು ತನ್ನ ಸಂಗಡ ಮಗಳಾದ ಗುಣವಂತಿಯನ್ನು ಕರೆದುತಂದಳು. ಗಂಗಮ್ಮ ಮುದುಕೆಯಾಗಿದ್ದಳು. ಹೆಚ್ಚಿನ ಕೆಲಸವನ್ನು ಮಾಡಿದರೆ ಆಯಾಸವಾಗುತ್ತಿದ್ದಿತು. ಹೀಗಾಗಿ ಒಂದೊಂದು ದಿನ ಮಗಳ ಸಹಾಯವನ್ನು ತೆಗೆದುಕೊಳ್ಳುತ್ತಿದ್ದಳು. ಇಂದು ಗುರುಗಳ ಮನೆಗೆ ಕರೆದುತಂದಿದ್ದಳು. ಇಬ್ಬರೂ ಕೂಡಿ ಪಾತ್ರೆಗಳನ್ನು ತಿಕ್ಕಿದರು. ಬಿದ್ದ ಒಂದೆರಡು ಬಟ್ಟೆಗಳನ್ನು ಒಗೆದರು. ಈ ಕೆಲಸಗಳನ್ನು ಮಾಡುವ ಸಮಯದಲ್ಲಿ ತಾಯಿಯು ಗುರುಗಳ ಸ್ವಭಾವ, ಸಂಬಳ, ಸಜ್ಜನಿಕೆ ಮತ್ತು ಕರುಣನು ಕಲಿತುದು ಇತ್ಯಾದಿಗಳನ್ನು ಹೇಳಿ ಪರಿಚಯ ಮಾಡಿಕೊಟ್ಟಳು. ಮಗಳು ಹೂ! ಎಂದು ಎಲ್ಲವನ್ನು ಕೇಳಿದಳು. ಹಿತ್ತಲ ವರೆಗೆ ಬಂದು ಗುರುಗಳು ಗುಣವಂತಿಯನ್ನು ಒಂದೆರಡು ಸಾರೆ ನೋಡಿದರು.

ಅಂದು ಶನಿವಾರವಿದ್ದುದರಿಂದ ಮನೆಯನ್ನು ಸಾರಿಸಬೇಕಾಗಿದ್ದಿತು. ಗಂಗಮ್ಮನು ಮುನ್ನಾದಿನ ಸಗಣಿಯನ್ನು ತಂದಿದ್ದಳು. ಗುರುಗಳ ಕಿವಿಯ ಮೇಲೂ ಆ ಮಾತನ್ನು ಇಟ್ಟಿದ್ದಳು. ಹಿತ್ತಿಲಲ್ಲಿಯ ಕೆಲಸವನ್ನು ತೀರಿಸಿಕೊಂಡು ತಾಯಿ–ಮಗಳು ಒಳಮನೆಗೆ ಬಂದರು. ಗುರುಗಳು ಒಂದು ಹಾಸಿಗೆಯ ಸುರುಳಿಗೆ ನೆಂಬಿ ಕುಳಿತಿದ್ದರು. ಗಂಗಮ್ಮನು ಬಂದುದನ್ನು ನೋಡಿ—

" ಏಕೆ ಗಂಗಮ್ಮ ?" ಎಂದರು.

" ಇಂದು ಸಾರಿಸುವೆ."

" ಇಂದೇ ಸಾರಿಸುವೆಯಾ ? "

" ಆಹುದು ಗುರುಗಳೇ, ಸಗಣಿಯನ್ನು ತಂದಿರುವೆ, ನನ್ನ ಮಗಳು ಬಂದಿರುವಳು. ಅವಳನ್ನು ಅದಕ್ಕಾಗಿಯೇ ಕರೆತಂದಿರುವೆ."

" ನೀನು ಸಾರಿಸಿದ್ದರೆ ನಡೆಯುತ್ತಿದ್ದಿತು, ಗಂಗಮ್ಮ ? "

" ನನಗೆ ಮನೆಯು ದೊಡ್ಡದಾಗುವುದು. ಅಲ್ಲದೆ ನೀರಲ್ಲಿ ಬಹಳ ಹೊತ್ತಿನ ವರೆಗೆ ಕೈಯಿಟ್ಟರೆ ಬೆರಳುಗಳಿಗೆ ವ ರ ಟು ಬಂದಂತಾಗುವುದು. ಅದಕ್ಕೆ ಏಳಿರಿ."

“ ಪಾಪ ಆವಳಿಗೇಕೆ ?”

“ ಅವಳೇನು ಸಣ್ಣವಳಲ್ಲ. ನನ್ನ ಮನೆಗೆಳ ಒಂದೆರಡು ಕೆಲಸಗಳನ್ನು ಒಪ್ಪಿಸಿ ಒಂದಿಷ್ಟು ಹಗುರ ಮಾಡಿಕೊಳ್ಳಬೇಕೆಂದಿರುವೆ. ಏಳಿರಿ. ಸಾಮಾನುಗಳನ್ನು ತೆಗೆದಿಡಿರಿ. ನಾನೇ ತೆಗೆದಿಡುವೆ. ಏಳಿರಿ.” ಎಂದಳು.

“ ಹ !” ಎಂದು ಎದ್ದರು.

ನಡುಮನೆಗೆ ಬಂದು ಸಾಮಾನುಗಳನ್ನು ಒಂದೊಂದಾಗಿ ಎತ್ತಿಡ ಹತ್ತಿದರು. ಗಂಗಮ್ಮನೂ ನೆರವಾದಳು. ಒಂದು ಭಾರವಾದ ಪೆಟ್ಟಿಗೆಯನ್ನು ಎತ್ತಲು ಗಂಗಮ್ಮನ ಕೈಯಿಂದಾಗಲಿಲ್ಲ. ಗುಣವಂತಿಯು ಸಹಾಯಕ್ಕೆ ಬಂದಳು.

“ ಬಿಡು, ಬಿಡು. ನಾನು ಎತ್ತುವೆ.” ಎಂದು ಗುರುಗಳು ನುಡಿದರು. ಮೂವರು ಕೂಡಿ ಪೆಟ್ಟಿಗೆಯನ್ನು ಎತ್ತಿ ಬೇರೆ ಕಡೆಗೆ ಇಟ್ಟರು. ಗುರುಗಳು ಹೊರಗೆ ಬಂದು ಕುಳಿತರು.

ಗುಣವಂತಿಯು ಸೆಗಣಿಯಲ್ಲಿ ನೀರು ಕಲಸಿ ಆ ಕಡೆಯ ಭಾಗವನ್ನು ಸಾರಿಸಿದಳು. ಮೊದಲಿನಂತೆ ಮಣೆಯನ್ನು ಹಾಕಿ ಪೆಟ್ಟಿಗೆಯನ್ನು ಎತ್ತಿ ಇಟ್ಟಳು. ಉಳಿದ ಭಾಗವನ್ನು ಕ್ರಮವಾಗಿ ಸಾರಿಸ ಹತ್ತಿದಳು.

ಹೊರಗೆ ಬಂದು ಕುಳಿತ ಗುರುಗಳು ಅಡಕೆಯನ್ನು ಕತ್ತರಿಸಿ ಗಂಗಮ್ಮನಿಗೆ ಕೊಟ್ಟರು. ಎಲೆಯನ್ನು ಮುಂದಿಟ್ಟು ಸುಣ್ಣದ ಕಾಯಿಯನ್ನು ಸರಿಸಿದರು. ತಂಬಾಕು ತಿಕ್ಕಿ ಬಾಯಿಗೆ ಹಾಕಿಕೊಂಡು ಗಂಗಮ್ಮನಿಗೆ ಒಂದು ಚುಟಿಕೆ ತಂಬಾಕು ಕೊಟ್ಟು ಗಾದಿಗೆ ಹೊಂದಿಕೊಂಡು ಕುಳಿತರು. ಗುಣವಂತಿಯ ಸಾರಣೆಯು ನಡುಮನೆಯಲ್ಲಿ ಸಾಗಿದ್ದಿತು.

“ ಕರುಣಪ್ಪನೆಲ್ಲಿ ಗುರುಗಳೇ ?” ಗಂಗಮ್ಮ ಎಲೆಯಡಕೆಯ ರಸ ನುಂಗಿ ಕೇಳಿದಳು.

“ ಹೊರಗೆ ಹೋಗಿರಬೇಕು.”

“ ಅಕ್ಕನವರು ತೀರಿಕೊಂಡು ೧೦–೧೨ ವರುಷಗಳಾಗಲಿಲ್ಲವೇ ?”

“ ಅಹುದು.” ಈ ಪ್ರಶ್ನೆ ಗುರುಗಳಿಗೆ ಬೇಕಿರಲಿಲ್ಲ.

“ ದಿನಗಳು ಹೇಗೆ ಕಳೆದುವು ನೋಡಿದಿರಾ ?”

“ ಅವು ನಮಗಾಗಿ ನಿಲ್ಲುವುವೇ ಗಂಗಮ್ಮ !”

" ಯಾರಿಗಾಗಿ ಯಾವುದು ನಿಲ್ಲುವುದು, ನೀವೇ ಹೇಳಿರಿ ?"

ಗುರುಗಳು ಇಲ್ಲೆಂದು ತಲೆಯನ್ನು ಅಲ್ಲಾಡಿಸಿದರು.

" ಇದೇ ನೋಡಿರಿ. ನನ್ನ ಮಗಳು ಗುಣವಂತಿಯು ಗಂಡನ ಮನೆಗೆ ಹೋಗಿ ನಾಲ್ಕು ವರುಷಗಳಾಗಿರಲಿಲ್ಲ. ಗೌರಿಯಂತಹ ಹೆಂಡತಿಯನ್ನು ಇಟ್ಟುಕೊಂಡು ಬಾಳುವುದು ಆ ದೆವ್ವಗೇಡಿಯ ಹಣೆಯಲ್ಲಿರಲಿಲ್ಲ. ಓಡಿ ಹೋದ................" ಎಂದು ತನ್ನ ಮನೆಯ ಪುರಾಣವನ್ನು ಕಾರಣವಿಲ್ಲದೆ ತೆಗೆದಳು.

" ಏಕೆ ?" ಗುರುಗಳು ಕೇಳಿದರು.

" ಅಲ್ಲಿ—ಇಲ್ಲಿ ಕೂಲಿ—ಕುಂಬಳಿಯನ್ನು ಮಾಡಿ ಹೊಟ್ಟೆಯನ್ನು ಹೊರೆಯುತ್ತಿದ್ದನು. ಈಕೆಯೂ ಸುಗ್ಗಿಕಾಲದಲ್ಲಿ ಹೊಲಗಳಲ್ಲಿ ದುಡಿದು ಕಾಳುಗಳನ್ನು ತರುತ್ತಿದ್ದಳು. ೩-೪ ವರುಷ ಸುಖದಿಂದ ಬಾಳಿದರು. ನನಗೂ ಮಗಳ ಸಂಸಾರವನ್ನು ನೋಡಿ ಸಂತೋಷವಾಯಿತು. ಆದರೆ ನಡುವೆ ಕೆಲವು ದುಷ್ಟ ಗೆಳೆಯರು ಗಂಟುಬಿದ್ದರು. ಅವರ ಸಂಗತಿಯಿಂದ ತಾನೂ ಹಾಳಾದ. ಈಕೆಗೂ ಗೋಳು ಹುಯ್ದ." ಒಂದಿಷ್ಟು ಸಣ್ಣ ದನಿಯಿಂದ ನುಡಿದಳು.

" ಏನಾಯಿತು ?" ಕುತೂಹಲದಿಂದ ಕೇಳಿದರು.

" ಅದೇನೋ ಅನ್ನುವರಲ್ಲ !............ಭಟ್ಟೀ ಸೆರೆ. ಊರ ಪಶ್ಚಿಮಕ್ಕೆ ಒಂದು ಯಾಳವದೆ. ಅಲ್ಲಿ ಒಂದು ಬಿದರು ಮೆಳೆಯಿದೆ. ಅಲ್ಲಿ ಭಟ್ಟಿಯ ಸೆರೆಯನ್ನು ಇಳಿಸುತ್ತಿದ್ದರು. ಮಾರಿಬಂದ ಹಣದಿಂದ ತಮ್ಮ ದುರ್ವ್ಯಸನಗಳನ್ನು ಸಾಗಿಸುತ್ತಿದ್ದರು. ಆದರೆ ಹೋದ ವರುಷ ಪೋಲೀಸರಿಗೆ ಸಿಕ್ಕರು. ತುರಂಗವಾಯಿತು. ಪಾಪವು ಎಷ್ಟು ದಿನ ಮುಚ್ಚಬಹುದು ?"

" ತುರಂಗವಾಯಿತೇ ?"

" ಏಳು ವರುಷ ತುರಂಗ ! ಒಂದು ತಪ್ಪಿನಿಂದ ಹಿಂದಿನ ಹತ್ತು ತಪ್ಪುಗಳು ಹೊರಗೆ ಬಂದು ಏಳು ವರುಷ ಶಿಕ್ಷೆಯಾಯಿತು. ಏಳು ವರುಷದ ವರೆಗೆ ಯಾರು ಯಾರೋ !"

" ಪಾಪ."

" ಏನು ಮಾಡುವುದು ಗುರುಗಳೇ. ತನ್ನ ಪಾಪದ ಫಲಕ್ಕಾಗಿ ಅವನು ತುರಂಗದ ಕಷ್ಟವನ್ನು ಉಂಡರೆ, ಮಗಳೇಕೆ ದುಃಖಪಡಬೇಕು ? ನಾನು ಇದರ ಸಲುವಾಗಿ ಅನೇಕ ಸಾರೆ ವಿಚಾರಿಸಿದೆ. ಕೆಲವು ಹಿರಿಯರ ಮುಂದೂ ಹೇಳಿದೆ. ತಡೆದೆ. ಈಗ ಯಾವುದಾದರೊಂದು ದಾರಿಯಿಂದ ಮಗಳ ಹಿತವನ್ನು ಮಾಡಬೇಕೆಂದು ಗಟ್ಟಿಮಾಡಿಕೊಂಡಿರುವೆ." ಎಂದು ನುಡಿದು ಸುಮ್ಮನಾದಳು.

ನಡುಮನೆಯಲ್ಲಿ ಸಾರಿಸುತ್ತಿದ್ದ ಗುಣವಂತಿಯು ತಾಯಿಯ ಮಾತನ್ನು ಲಕ್ಷಪೂರ್ವಕವಾಗಿ ಕೇಳುತ್ತಿದ್ದಳು.

"—ಕೊನೆಗೆ ಇಷ್ಟಕ್ಕೆ ಬಂದಿರುವೆ " ಎಂದು ಮಾತು ಮುಂದುವರಿಸಿದಳು." ಊರಲ್ಲಿ ಕೆಲವು ಹಿರಿಯರನ್ನು ಕೇಳಿರುವೆ. ಅವರು ಒಪ್ಪಿರುವರು ಅವನಿಗೆ ಒಂದು " ಸೋಡಚೀಟಿ "ಯನ್ನು ಬರೆದುಬಿಡಬೇಕು. ತಿಂಗಳ ವರೆಗೆ ಹಾದಿಯನ್ನು ನೋಡಬೇಕು. ಪಂಚರಿಂದ ಸರಿ ಎನ್ನಿಸಿಕೊಳ್ಳಬೇಕು. ಅವನ ಸಂಬಂಧವನ್ನು ಹರಿದುಕೊಂಡುಬಿಟ್ಟು ಮುಂದಿನ ಮಾರ್ಗವನ್ನು ಹುಡುಕುವುದು."

" ತುರಂಗದಲ್ಲಿದ್ದ ಗಂಡನಿಗೆ ಆ ಚೀಟಿಯು ಹೇಗೆ ಮುಟ್ಟುವುದು ಗಂಗಮ್ಮ ?"

" ಮುಟ್ಟಲಿ, ಮುಟ್ಟದಿರಲಿ. ಮಗಳು ಗಂಡನ ಸಂಬಂಧವನ್ನು ಹರಿದುಕೊಂಡಳೆಂದು ಜಾಹೀರು ಆದರೆ ಮುಗಿಯಿತು. ನನಗೂ ಆ ಮುಟ್ಠಾಳನನ್ನು ಕಂಡು ಸಿಟ್ಟುಬಂದಿದೆ. ಮಗಳು ಒಪ್ಪಿದರೆ ಯಾರಿಗಾದರೂ ಉಡಿಯಕ್ಕಿ (ಪುನರ್ವಿವಾಹ) ತುಂಬಿಸುವುದು. ಇಲ್ಲದಿದ್ದರೆ ನಿಮ್ಮಂಥವರ ಮನೆಯ ಸೇವೆಗೆ ಸಿಲ್ಲಿಸಿ ಕಾಲವನ್ನು ಕಳೆಯ ಹಚ್ಚುವುದು." ಎಂದು ನುಡಿದು ಗುರುಗಳ ಮುಖವನ್ನು ನೋಡಿದಳು.

ಗುರುಗಳು ಬಾಗಿಲ ವರೆಗೆ ಸಾರಿಸುತ್ತ ಬಂದ ಒಂದಿಷ್ಟು ದೂರದಲ್ಲಿ ಕುಳಿತ ಗುಣವಂತಿಯನ್ನು ನೋಡಿದರು. ಕಣ್ಣು ಕಣ್ಣುಗಳು ಮಾತಾಡಿದವು. ಅದೊಂದು ಕ್ಷಣದಲ್ಲಿ ಗುರುಗಳು ಅವಳ ತುಂಬಿದ ಕೆನ್ನೆ, ಮಿಂಚುವ ಕಣ್ಣು, ಎದ್ದುನಿಂತ ಮೂಗು, ಸಾಲಿಟ್ಟ ಬಿಳಿಯ ಹಲ್ಲು, ದಪ್ಪವಾದ ಕೂದಲಿನ ಕೊಂಕು ಹುಬ್ಬು, ಸಾದುಗಪ್ಪಿನ ಮೈಮಾಟ ಕಣ್ಣಲ್ಲಿ ಅಚ್ಚೊತ್ತಿ

ಕೊಂಡರು. ಸಾರಿಸುವ ಮುಂದೆ ಸೆಗಣಿಯು ಹತ್ತಬಾರದೆಂದು ಸೀರೆಯನ್ನು ಏರಿಸಿ ಕಟ್ಟಿದ್ದಳು. ಮುಕ್ಕಾಲು ಭಾಗ ಬಾಳೆಯ ಕಂಬದಂತಹ ಕೂದಲಿಲ್ಲದ ತೊಡೆಗಳು ಕಂಡುವು. ಸಾರಿಸುವ ಕೈಯನ್ನು ಆಚೆ—ಈಚೆ ದೂರದವರೆಗೆ ನೆಲದ ಮೇಲೆ ಆಡಿಸುವ ಮುಂದೆ ಕುಪ್ಪಸದ ಅಂಚಿನಿಂದ ಹೊರಬಿದ್ದ ಗೆರೆಗಟ್ಟಿ ಬಿಗಿದ ಕಡುಬಿನಾಕಾರದ ಮಿಂಚುವ ಮೊಲೆಯ ಅಂಗಣದ ಭಾಗ ನಯನ ಮನೋಹರವಾಗಿ ಕಂಡು ಹೃದಯವು ಕವಕವಗೊಂಡಿತು. ತಾಯಿಯ ಮಾತಿನ ಧ್ವನಿ, ಗುರುಗಳ ಗಂಭೀರ ಮೂರ್ತಿಯು ಗುಣವಂತಿಯ ಹೃದಯದಲ್ಲಿ ಕುಣಿದಾಡುತ್ತಿದ್ದುವು. ಗುರುಗಳು ಅತ್ತ—ಇತ್ತ ನೋಡಿ ಮತ್ತೆ ಗುಣವಂತಿಯ ವೃತ್ತ ಸೌಂದರ್ಯದ ಕುಸುಮದ ಮೇಲೆ ನೇತ್ರಭ್ರಮರಗಳನ್ನು ಕುಳ್ಳಿರಿಸಿದರು. ಮಾನಸಿಕ ಲಜ್ಜೆಯ ರೆಕ್ಕೆಗಳನ್ನು ಬಿಚ್ಚಿ ಅತ್ತಿತ್ತ ಹಾರಾಡಿಸಿ ಮತ್ತೆ ಮತ್ತೆ ನೋಡಿದರು.

ಗಂಗಮ್ಮನು ತಂಬಾಕಿನ ಹುಳಿಯ ರಸವನ್ನು ಉಗುಳಿ ಬಂದು—

“ ಎಲ್ಲಿಗೆ ಬಂದಿತು ಗುಣಿ ? ಬೇಗ ಮುಗಿಸು. ವೇಳೆಯಾಗುವುದು.” ಎಂದು ಮಗಳನ್ನು ಎಚ್ಚರಿಸಿದಳು.

ಗುರುಗಳು ಸಾವರಿಸಿಕೊಂಡು ಕುಳಿತರು.

“ ನಮ್ಮ ಜನರಲ್ಲಿ ಇದು ಸಾಮಾನ್ಯ ಸಂಗತಿಯು ಗುರುಗಳೇ ? ಉಡಿಯಕ್ಕಿಗೆ ನೀವು ಹೆದರುವಿರಿ. ನಿಮ್ಮ ಜಾತಿಯಲ್ಲಿ ಅದು ಇನ್ನೂ ರೂಢಿಯಾಗಿಲ್ಲ. ನಮಗೆ ಸುಲಭ. ನನಗೆ ಮೊದಲನೆಯ ಗಂಡನಿಂದ ಒಬ್ಬ ಮಗನಿರುವನು. ಅವನು ಗೋಕಾವಿಯ ಗಿರಣಿಯಲ್ಲಿ ದುಡಿಯುವನು. ನಾನು ತಾಯಿಯೆನ್ನುವುದನ್ನೇ ಮರೆತಿರುವನು. ನನಗೂ ಅವನಿಗೂ ಭೆಟ್ಟಿಯಾಗದೆ ಹತ್ತು ವರುಷಗಳಾದುವು. ತಾಯಿಯು ಬದುಕಿರುವಳೋ, ಸತ್ತಿರುವಳೋ ತಿಳಿಯನು. ಈಕೆಯು ಎರಡನೆಯ ಗಂಡನಿಂದ ಹುಟ್ಟಿರುವಳು. ಮೂರನೆಯವನನ್ನು ಮದುವೆಯಾದೆ. ಆದರೆ ವರುಷದಲ್ಲಿ ಸತ್ತನು. ಇದ್ದ ಇಬ್ಬರು ಮಕ್ಕಳಲ್ಲಿ ಇವಳು ನನ್ನನ್ನು ನಂಬಿರುವಳು. ತಾಯಿ ! ಎನ್ನುವಳು. ನನಗೂ ಈಕೆಯನ್ನು ನೋಡಿ ಅಭಿಮಾನವೆನಿಸುವುದು.” ಎಂದು ನುಡಿದು ನಿಂತಳು.

ಗುರುಗಳು ಸುಮ್ಮನಿದ್ದರು.

ಕೊನೆಗೆ ಭರತವಾಕ್ಯದಂತೆ–"ಅಕ್ಕನವರು ತೀರಿ ೧೦–೧೨ ವರುಷಗಳಾದುವು. ನೀವು ಹೇಗೆ ಕೈ–ಬಾಯಿ ಸುಟ್ಟುಕೊಂಡು ಸುಮ್ಮನಿರುವಿರೋ ! ಎಂದು ಆಶ್ಚರ್ಯಪಡುವೆ." ಎಂದು ನುಡಿದಳು.

"ಏನು ಮಾಡುವುದು ಗಂಗಮ್ಮ. ಮಗನನ್ನು ನೋಡಿ ಬದುಕಿರುವೆ. ಅವನೇ ನನ್ನ ಸರ್ವಸ್ವ ಎಂದು ತಿಳಿದಿರುವೆ." ಎಂದು ನುಡಿದು ನಡುಮನೆಯ ಕಡೆಗೆ ನೋಡಿದರು.

ಗುಣವಂತಿಯು ಸಾರಿಸುವುದನ್ನು ಮುಗಿಸಿದ್ದಳು.

"ಆಯಿತೇ ?" ಗಂಗಮ್ಮನೆಂದಳು.

"ಹ." ಗುಣವಂತಿಯು ಉತ್ತರಿಸಿದಳು.

"ಆ ಪೆಟ್ಟಿಗೆಯನ್ನಿಷ್ಟು ಇಡುವ " ಎಂದು ಎದ್ದಳು.

ಗುರುಗಳೂ ಒಳಗೆ ಬಂದರು.

ಆದರೆ ಪೆಟ್ಟಿಗೆಯು ತನ್ನ ಮೊದಲಿನ ಸ್ಥಳವನ್ನಲಂಕರಿಸಿದ್ದಿತು.

"ನೀನು ಒಬ್ಬಳೇ ಇಟ್ಟೆಯಾ ?" ಗಂಗಮ್ಮ ಆಶ್ಚರ್ಯದಿಂದ ಕೇಳಿದಳು.

"ಇಟ್ಟೆ. ನನಗೆ ಹಗುರೆನಿಸಿತು."

ಗುರುಗಳು ಅವಳ ಕೈ, ಕಾಲು, ಎದೆ, ಮುಖಗಳನ್ನು ಮತ್ತು ಅವುಗಳ ತಳದಲ್ಲಿ ಹುದುಗಿಕೊಂಡ ಶಕ್ತಿಯನ್ನು ನೋಡುತ್ತ—ಕಲ್ಪಿಸುತ್ತ ಬೆಕ್ಕಸ ಬೆರಗಾಗಿ ನಿಂತರು. ಗುಣವಂತಿಯ ಮುಖದ ಮೇಲೆ ಗೆಲುವಿನ ಪರಿಹಾಸ ತುಳುಕಾಡುತ್ತಿತ್ತು. ಅದರ ಹಿನ್ನೆಲೆಯಿಂದ ಸೌಂದರ್ಯ ಕಿರಣಗಳು ಹೊರ ಹೊಮ್ಮಿ ಗುರುಗಳನ್ನು ಸ್ಪರ್ಶಿಸುತ್ತಿದ್ದುವು.

ಗಂಗಮ್ಮ " ನಡೆ " ಎಂದು ಮಗಳನ್ನು ಕರೆದುಕೊಂಡು ಮನೆಯ ಹಾದಿಯನ್ನು ಹಿಡಿದಳು.

೪

ಗುರುಗಳ ಮನೆಯಲ್ಲಿ ಗುಣವಂತಿಯ ಸುಳಿದಾಟ ಹೆಚ್ಚಾಯಿತು. ಗಂಗಮ್ಮ ಹೆಸರಿಗೆ ಕೆಲಸಕ್ಕೆ ಬರುತ್ತಿದ್ದಳು. ಗುರುಗಳು ಮನೆಯಲ್ಲಿದ್ದ ದಿವಸ ಅವರ ಸಂಗಡ ಹರಟೆಯಲ್ಲಿ ಕಾಲವನ್ನು ಕಳೆಯುತ್ತಿದ್ದಳು. ಆಗ ಗುಣವಂತಿಯು ತಾನೊಬ್ಬಳೇ ಪಾತ್ರೆಗಳನ್ನು ತೊಳೆಯುತ್ತಿದ್ದಳು. ಬಟ್ಟೆಗಳನ್ನು ಒಗೆಯುತ್ತಿದ್ದಳು. . ಒಣಗಲಿಕ್ಕೆ ಹಾಕುತಿದ್ದಳು. ೪-೬ ದಿನಗಳಲ್ಲಿ ಗುರುಗಳ ದೋತರ, ಅಂಗಿ ಸುಣ್ಣದ ಬಣ್ಣಕ್ಕೆ ತಿರುಗಿದುವು. ಗಂಗಮ್ಮನು ವಯೋಮಾನಕ್ಕನುಸರಿಸಿ, ಆಶ್ರಮರೀತಿಗಳಿಗನುಸರಿಸಿ ಗುರುಗಳ ಬಟ್ಟೆಬರಿಗಳನ್ನು ಕೆಂಬಣ್ಣಕ್ಕೆ ತಿರುಗಿಸಿದ್ದಳು. ಇನ್ನೊಂದಿಷ್ಟು ಕೆಂಪಾಗಿದ್ದರೆ ಸನ್ಯಾಸಿಯ ಬಟ್ಟೆಗಳಾಗಿರತಕ್ಕವುಗಳಾಗಿದ್ದುವು. ಇಷ್ಟು ಹೊಲಸಾಗಿದ್ದರೂ ಗುರುಗಳು ಒಂದು ದಿನ ಬಾಯಿತೆಗೆದವರಲ್ಲ. ಯಾವುದಾದರೇನು? ಎಂಬ ಮಂತ್ರವನ್ನು ಜಪಿಸುತ್ತ ನಡೆದಿದ್ದರು. ಗುಣವಂತಿಯು ಸಬಕಾರ ತಂದು ತಿಕ್ಕಿ ತೊಳೆದು ತಾಯಿಯ ಹೊಲಸನ್ನು ಓಡಿಸಿದಳು. ಶುಭ್ರವಾದ ಬಟ್ಟೆಗಳ ಧಾರಣದಿಂದ ಗುರುಗಳ ಮುಖದ ಮೇಲೆ ಹೊಸ ಕಾಂತಿ ಮೂಡಿಕೊಂಡಿತು. ಇಳಿದ ವಯಸ್ಸು ಹಿಂದೆ ಸರಿಯಿತು. ಬಳಿದ ಮಾಂಸ ಬೆಳೆದುಕೊಂಡಿತು. ಶರೀರದಲ್ಲಿ ಒಂದು ಬಗೆಯ ಉತ್ಸಾಹದ ರಸಗಂಗೆ ಹರಿದಾಡಹತ್ತಿತು. ಕಣ್ಣಲ್ಲಿ ಜೀವರಸವು ತುಂಬಿಕೊಂಡಿತು. ಹಳೆಯ ನೆಲವು ಹೊಸದಾಗಿ ಕಾಣಹತ್ತಿತು.

ಗುಣವಂತಿಯು ಒಗೆದು ಉಳಿದ ಸಬಕಾರದ ತುಂಡುಗಳನ್ನು ಕೈಯಲ್ಲಿಟ್ಟು ತಿಕ್ಕುತ್ತಿದ್ದಳು. ಬೊಗಸೆಯ ತುಂಬ ಹುಬ್ಬಿದ ಬುರುಗನ್ನು ಮುಖಕ್ಕೆ ತೊಡೆದುಕೊಳ್ಳುತ್ತಿದ್ದಳು. ಚೆನ್ನಾಗಿ ತಿಕ್ಕುತ್ತಿದ್ದಳು. ೪-೬ ತಂಬಿಗೆ ತಣ್ಣೀರನ್ನು ಮುಖಕ್ಕೆ ಸುರಿದುಕೊಂಡು ಮುಖದ ಎಣ್ಣೆಯನ್ನು ಕಳೆದುಕೊಳ್ಳುತ್ತಿದ್ದಳು. ಉಳಿದುದನ್ನು ಅಂಗೈ, ಮುಂಗೈ, ಮೊಳಕೈಗೆ ಸವರಿಸಿಕೊಳ್ಳುತ್ತಿದ್ದಳು. ಒಮ್ಮೊಮ್ಮೆ ಕಲ್ಲಿನ ಚೂರಿನಿಂದ ತಿಕ್ಕುತ್ತಿದ್ದಳು. ಆದರೆ ಕಾಲಿನ ಹಿಮ್ಮಡವನ್ನು ತಿಕ್ಕಿಕೊಳ್ಳಲು ಹೆಚ್ಚುವೇಳೆ ಬೇಕಾಗುತ್ತಿದ್ದಿತು. ಅವುಗಳು

ಬರ್ಫದ ತುಂಡುಗಳಾಗಿದ್ದವೆಂದರೂ ಸರಿ. ಮೈಮೇಲಿನ ಸೀರೆ–ಕುಪ್ಪಸ ಸ್ವಚ್ಛವಾದುವು. ಉಪ್ಪು ಉಂಡ ಬಳೆಗಳು ಹೋಗಿ ರೇಶಿಮೆಯ ಬಳೆಗಳು ಬಂದುವು. ಕಾಲಿಗೆ ಚಪ್ಪಲಿಗಳು ಬಂದುವು; ಬಳೆಯ ಸಂಗಡ ಗಿಲಿಟಿನ ಬಂಗಾರದ ಬಳೆಗಳಾದುವು. ಮೂಗಿಗೆ ಮೂಗುಬಟ್ಟು ಬಂದಿತು. ಹೇಗೆ ಸೌಮ್ಯ ಸಾಲಂಕೃತಳಾಗಿ ಗುರುಗಳ ಮನೆಗೆ ಬರಹತ್ತಿದಳು. ಆ ತುಂಬಿದ ಮೈಯ, ಓರಣದ ಬಟ್ಟೆಯ, ನಗೆಮುಖದ ಗುಣವಂತಿಯನ್ನು ನೋಡಿ ಗುರುಗಳ ಮನಸು ಅರಳುತ್ತಿದ್ದಿತು. ಅವಳು ಮನೆಯಲ್ಲಿ ಓಡಾಡುವ ಮುಂದೆ ಕಣ್ಣುಗಳು ಕಣ್ಣುಮುಚ್ಚಾಲೆಯ ಆಟವನ್ನು ಆಡುತ್ತಿದ್ದುವು. ಮನಸು ಹಿತ್ತಲಿಂದ ನಡುಮನೆ ಯವರೆಗೆ ಶತಪಥವನ್ನು ಹಾಕುತ್ತಿದ್ದಿತು. ಈ ಮಾನಸಿಕ ವ್ಯಾಪಾರದಲ್ಲಿಯೇ ಅವಳ ಮುಖವನ್ನು ನಾಲ್ಕಾರು ಸಾರೆ ನೋಡಿಬಿಡುತ್ತಿದ್ದರು.

ಆ ಸಾದುಗಪ್ಪಿನ, ಅಶಿಕ್ಷಿತ, ಅನಾಗರಿಕ, ಅಬ್ರಾಹ್ಮಣ್ಯ ಹೆಣ್ಣೇ ರಂಭೆಯಾಗಿ ತೋರುತ್ತಿದ್ದಳು. ಎಂಥ ಹೆಣ್ಣು ! ಏನು ಚೆಲುವು !! ಎಂಬ ಉದ್ಗಾರದ ಸಂಗಡ ಇನ್ನೊಂದು ಮಾತು ಫಕ್ಕನೆ ನೆನಪಾಗಿ ವಿಸ್ಮಯವನ್ನು ಕೆರಳಿಸುತ್ತಿದ್ದಿತು.

ಅಂದು ಸಾರಿಸುವ ಮುಂದೆ ಮೂವರು ಕೂಡಿ ಕಷ್ಟದಿಂದ ಎತ್ತಿದ ಪೆಟ್ಟಿಗೆಯನ್ನು ಗುಣವಂತಿಯು ಒಬ್ಬಳೇ ಎತ್ತಿ ಇಟ್ಟಳಲ್ಲ ! ನಾನೂ ಇಡಬಹುದಿದ್ದಿತು. ಒಂದಿಷ್ಟು ಕಷ್ಟವೇನೋ ಸರಿ. ಪೆಟ್ಟಿಗೆಯು ಭಾರವಿದ್ದಿತು. ಅದಕ್ಕೇ ಇಬ್ಬರು ಸಹಾಯಕ್ಕೆ ಬಂದರು. ಆದರೆ ಅದನ್ನು ಗುಣವಂತಿಯು ಒಬ್ಬಳೇ ಎತ್ತಿದಳು ! ಯಾರನ್ನೂ ಕರೆಯಲಿಲ್ಲ. ನನ್ನ ಶಕ್ತಿಗೂ ಮಿಗಿಲು ! ಆ ಕುಳ್ಳನ್ನ ದೇಹದಲ್ಲಿ ಇಷ್ಟು ಶಕ್ತಿ ಇದೆಯೇ ? ಆ ಶಕ್ತಿಗೆ ಅನುಗುಣವಾಗಿ ದೇಹದ ಮಾಟವಿದೆ. ಈ ಅಂತರಿಕ ಆಶ್ಚರ್ಯ, ಬಹಿರಂಗ ಸೌಂದರ್ಯಗಳು ಕೂಡಿ ಗುರುಗಳನ್ನು ಮುಗ್ಧರನ್ನಾಗಿ ಮಾಡಿದುವು. ಜೀವವು ಇನ್ನೊಮ್ಮೆ ನೋಡಬೇಕು ಎನ್ನುತ್ತಿದ್ದಿತು, ಮನಸು ಮಾತಾಡಿಸಬೇಕು, ಎಂದು ತವಕಗೊಂಡಿತು. ಗುಣವಂತಿಯು ಗುರುಗಳ ಈ ಭಾವನೆಯನ್ನು ಅರಿತಿದ್ದಳೇನೋ ! ಬೇಕೆಂತಲೆ ಅವರ ಮುಂದೆ ಸುಳಿಯುತ್ತಿದ್ದಳು. ಲಜ್ಜೆಯ ಸಣ್ಣ ಸಣ್ಣ ಎಳೆಗಳನ್ನು ಮುಖದ ಮೇಲೆ ಕೊರೆದುಕೊಂಡು ತೋರಿಸುತ್ತಿದ್ದಳು. ಎದೆಯು

ಸೆರಗನ್ನು ಪಕ್ಕಕ್ಕೆ ಸರಿಸುತ್ತಿದ್ದಳು. ತಲೆಯ ಮೇಲಿನ ಸೆರಗನ್ನು ಹೆಗಲ ಮೇಲೆ ತರುತ್ತಿದ್ದಳು. ಆಗ ತನ್ನ ದುಂಡನ್ನ ಕರಿಯ ಕೂದಲಿನ ತಲೆಯನ್ನು ಪ್ರದರ್ಶನಕ್ಕೆ ಇಟ್ಟಂತೆ ಬಗ್ಗಿಸಿ ನಡೆಯುತ್ತಿದ್ದಳು. ನಡು ನಡುವೆ ಎತ್ತಿ ತೋರಿಸುತ್ತಿದ್ದಳು. ಗುರುಗಳ ನೇತ್ರ ಭ್ರಮರಗಳು ತವಕಗೊಂಡು ಅವಳ ಮುಖ ಕಮಲವನ್ನು ಮುದ್ದಿಟ್ಟಂತೆ ನೋಡಿಬಿಡುತ್ತಿದ್ದುವು.

ದಿನಗಳು ಕಳೆದಂತೆ ಈ ಶೃಂಗಾರ ನಾಟಕವು ಹೆಚ್ಚಾಯಿತು. ಗುರುಗಳು ಒಂದೆರಡು ಹೆಜ್ಜೆ ಮುಂದೆ ಬಂದರು. ಗುಣವಂತಿಯು ಹಿಂದೆ ಸರಿಯಲಿಲ್ಲ. ಮಾತು ಆರಂಭವಾಯಿತು. ನಗೆಯು ನಡುನಡುವೆ ಇಣಿಕಿಕ್ಕಿತು. ಆದರೆ ಅವೆಲ್ಲ ಅವಾಂತರ ಮಾತುಗಳು. ನಗೆಯು ಹುಸಿನಗೆಯು. ಹೆಚ್ಚು ಮಾತಿಗೆ, ಕರುಣನ ಇರುವು ಬಾಧಕವಾಗುತ್ತಿದ್ದಿತು. ಗುರುಗಳು ಅಷ್ಟಕ್ಕೆ ಮುಗಿಸಿ ತಮ್ಮ ಕೆಲಸಗಳಿಗೆ ಹೋಗುತ್ತಿದ್ದರು. ಆಗ ಗುಣವಂತಿಯು ಕರುಣನನ್ನು ಕೂಡಿಸಿಕೊಂಡು ಅವರ ಮನೆಯ ಎಲ್ಲ ಸಂಗತಿಯನ್ನು ಕೇಳುತ್ತಿದ್ದಳು.

ಒಂದು ದಿನ ಗುಣವಂತಿಯು ಪಾತ್ರೆಗಳನ್ನು ತೊಳೆದು ನಡುಮನೆಯಲ್ಲಿ ಇಟ್ಟು—"ಕರುಣಪ್ಪ, ನೀನು ಸಾಲೆಯನ್ನು ಕಲಿಯುವುದನ್ನು ಮುಗಿಸಿದೆ ಏನು ?" ಎಂದು ಕೇಳಿದಳು.

"ಅಹುದು."

"ಎಷ್ಟು ಕಲಿತೆ ?"

"ಮ್ಯಾಟ್ರಿಕ್ಯನವರೆಗೆ ಕಲಿತೆ."

"ಮುಂದೆ ಕಲಿಯಬಾರದೇ ?"

"ತಂದೆಯವರು ಬೇಡ ಎಂದರು."

"ಏಕೆ ?"

"ಮುಂದಿನ ಖರ್ಚು ಬಹಳ. ಅದು ತಂದೆಯವರಿಂದ ಆಗದ ಮಾತು."

"ಹಣವನ್ನು ಕೊಟ್ಟಿದ್ದರೆ ಕಲಿಯುತ್ತಿದ್ದೆಯಾ ?"

"ಅಹುದು."

"ಮುದುಕನಾಗುವ ವರೆಗೆ ಕಲಿಯುವುದೇನು ?"

" ಇನ್ನು ಮುಂದೆ ನಾಲ್ಕಾರು ವರುಷ ಕಲಿತರೆ ಮುದುಕನಾಗುವೆನೇ ?"

" ಈಗ ನಿನಗೆ ಎಷು ವರುಷ ?"

" ಹದಿನೆಂಟು."

" ಹದಿನೆಂಟು ವರುಷ ಓದಿದರೆ ಸಾಕಲ್ಲವೇ ?"

" ಈಗ ಕಲಿತದ್ದರಿಂದ ಏನಾಗಬೇಕು ! ಹತ್ತು ರೂಪಾಯಿಯ ಸಂಬಳದ ಕೆಲಸ ಸಿಕ್ಕುವುದಿಲ್ಲ."

" ಹಾಗಾದರೆ ಏಕೆ ಕಲಿಯಬೇಕು ?"

" ಏನು ಮಾಡುವುದಿದ್ದಿತು ?"

" ಹೊಲದಲ್ಲಿ ಹರಗುವುದು, ಬಿತ್ತುವುದು ಮಾಡಿದ್ದರೆ ಇಷ್ಟು ವರುಷದಲ್ಲಿ ನೀನು ಬೇಕಾದ ಹಾಗೆ ಒಂದು ಹೊಲವನ್ನು ತೂಗಿಸಿಕೊಂಡು ಹೋಗುತ್ತಿದ್ದೆ."

" ಅದು ನಮಗೆ ಸಾಧ್ಯವೇ ?"

" ಮಾಡಿದರೆ ಎಲ್ಲವೂ ಸಾಧ್ಯ."

" ನೀನು ಸಾಲೆಯನ್ನು ಕಲಿತಿರುವೆ ಏನು ?"

" ನಾಲ್ಕು ವರುಷ ಹೋಗಿದ್ದೆ."

" ಮುಂದೆ ?"

" ಮದುವೆಯಾದೆ."

" ಅಷ್ಟು ಚಿಕ್ಕವಳಿರುವಾಗಲೆ ಮದುವೆಯಾದೆಯಾ ?"

" ಅಹುದು. ನಮ್ಮಲ್ಲಿ ಬೇಗನೆ ಮದುವೆ ಮಾಡುವರು. ನಿಮ್ಮಂತೆ ತಡಮಾಡುವುದಿಲ್ಲ."

" ನಮ್ಮಲ್ಲಿ ತಡವೇ ?"

" ಓ ! ನೀನು ನಮ್ಮಲ್ಲಿ ಹುಟ್ಟಿದ್ದರೆ ಆರೇಳು ವರುಷಗಳ ಹಿಂದೆಯೇ ನಿನ್ನ ಮದುವೆಯಾಗುತ್ತಿದ್ದಿತು. ಸಾಧ್ಯವಿದ್ದರೆ ಈಗ ಎರಡು ಮಕ್ಕಳ ತಂದೆಯಾಗಬಹುದಿದ್ದಿತು." ಎಂದು ನುಡಿದು ನಗಹತ್ತಿದಳು.

ಕರುಣನಿಗೆ ಈ ನಗೆಮಾತು ತೀರ ವಿಚಿತ್ರವೆನಿಸಿತು. ಹೊರಗೆ ಬಂದುಬಿಟ್ಟನು. ಗುಣವಂತಿಯು ಹಿತ್ತಿಲಕ್ಕೆ ಒಗೆಯಲು ಹೋದಳು. ಗುರುಗಳು

ಇವರ ಸಂವಾದವನ್ನು ನಡುಮನೆಯಲ್ಲಿ ಅಡ್ಡಾಗಿ ಕೇಳುತ್ತಿದ್ದರು.

ಗುಣವಂತಿಯ ಮಾತು, ಅವುಗಳನ್ನು ಕ್ರಮವಾಗಿ ಬಳಸುವ ರೀತಿ, ಬೆಳೆಸುವ ಪದ್ಧತಿ ಗುರುಗಳಿಗೆ ರಮ್ಯವೆನಿಸಿತು. ಮನಸು ಏಳು, ಏಳು ಎಂದು ಪ್ರೇರೇಪಿಸಹತ್ತಿತ್ತು. ಗುಣವಂತಿಯು ಹಿತ್ತಿಲಲ್ಲಿದ್ದಳು. ಅಲ್ಲಿ ಅವಳ ಎದುರು ನಿಲ್ಲುವುದು ಸರಿಯೆನಿಸಲಿಲ್ಲ. ಸಾಲೆಯಲ್ಲಿ ಸಾವಿರಾರು ವಿದ್ಯಾರ್ಥಿಗಳಿಗೆ ನೈತಿಕ ಪಾಠಗಳನ್ನು ಹೇಳಿಕೊಡುವ ತಾವು, ಅಷ್ಟೇ ಪಾಲಕರಿಗೆ ಸನ್ಮಾನ್ಯರಾದ ತಾವು ಒಂದು ಸಾಮಾನ್ಯ ಹೆಣ್ಣಿನ ಮುಂದೆ ನಿಂತು, ತಮ್ಮ ಆಂತರ್ಯದ ಲವಲವಿಕೆಯ ತೃಪ್ತಿಗಾಗಿ ಮಾತಾಡಿ, ಅನವಶ್ಯವಾಗಿ ನಗೆಯಾಡಿ ಜನರ ಕಣ್ಣಿಗೆ ಬೀಳುವಂತೆ ಸುಳಿದಾಡಿ ವರ್ತಿಸುವುದು ಬೇಡಾಯಿತು. ತುದಿಯೇರಿದ ಅನ್ನದ ಪಾತ್ರೆಗೆ ಮುಚ್ಚಳವನ್ನು ಹಾಕಿದಂತೆ ಲೋಕಲಜೆಯ ಹೊದಿಕೆಯನ್ನು ಹಾಕಿ ಸುಮ್ಮನೆ ಕುಳಿತರು. ಕುಳಿತರೂ ಕುಳಿತಿರುವುದು ಅಸಹ್ಯವೆನಿಸಿತು. ಎದ್ದರು. ಅಡುಗೆಯ ಮನೆಯಲ್ಲಿ ಶತಪಥ ಹಾಕಹತ್ತಿದರು. ಮನಸು ಎತ್ತೆತ್ತ್ಲೋ, ಎಲ್ಲೆಲ್ಲೋ ಓಡಾಡುತ್ತಿದ್ದಿತು. ಆದರೆ ಕರ್ಮಾನುಸಾರಿಯಾದ ಕಾಲುಗಳು ಭಾರವಾದ, ಬಿಸಿಯಾದ ದೇಹವನ್ನು ಹೊತ್ತು ಕಷ್ಟವನ್ನು ಸಹಿಸುತ್ತಿದ್ದುವು.

ಗುಣವಂತಿಯು ಹಿಂಡಿಕೊಂಡು ಬಟ್ಟೆಗಳನ್ನು ಒಣಗಹಾಕಲು ಬಂದಳು. ಗುರುಗಳು ಆಕೆಯನ್ನು ನೋಡಿದರು. ಜೀವವು ಅ ಹ ಹ ! ಎಂದುಕೊಂಡಿತು.

ಸೀರೆಯು ಒದ್ದೆಯಾಗಬಾರದೆಂದು ಏರಿಸಿ ಕಚ್ಚೆಯನ್ನು ಹಾಕಿದ್ದಳು. ಅದರಿಂದ ಆಕೆಯ ತುಂಬಿದ, ಮಿರುಗಿಡುವ, ಕರಿಯ ದುಂಡನ್ನ ತೊಡೆಗಳು ಕಾಣುತ್ತಿದ್ದುವು. ತೊಡೆಯ ಮೇಲಿನ ನೀರ ಹನಿಗಳು ಮುತ್ತಿನಂತೆ ಹೊಳೆಯುತ್ತಿದ್ದುವು. ಸೆರಗು ಭುಜದ ಮೇಲೆ ಸುರುಳಿಯಾಗಿ ಸರಿದು ಮಲಗಿದ್ದಿತು. ತುದಿಯನ್ನು ಟೊಂಕದಲ್ಲಿ ಸಿಕ್ಕಿಸಿಕೊಂಡಿದ್ದಳು. ಬಲಗಡೆಯ ಕುಪ್ಪಸದಲ್ಲಿ ಬಿಗಿದುಕೊಂಡು ಕುಳಿತ ದುಂಡನ್ನ ಮೊಲೆಯು ಎದ್ದು ಕಾಣುತ್ತಿದ್ದಿತು. ತಲೆಯ ಮುಂಗುರುಳು ಗಾಳಿಗೆ ಬಿಚ್ಚಿ ತೂಗಾಡುತ್ತಿದ್ದುವು. ಹಾಳತವಾಗಿ ಏರಿಸಿಕೊಂಡ ಬಳೆಗಳು ಕೈಗೆ ಮನೋಹರವಾಗಿದ್ದುವು. ಗುರುಗಳು ಎವೆಯಾಡಿಸದೆ ಈ ವ್ಯಕ್ತ ಸೌಂದರ್ಯವನ್ನು ನೋಡಹತ್ತಿದರು. ಮತ್ತೂ

ನೋಡಹತ್ತಿದರು. ೮–೧೦ ವರುಷಗಳಿಂದ ಮೀಸಲಾದ ಸ್ತ್ರೀ ಸೌಂದರ್ಯವು ಇಂದು ಪ್ರದರ್ಶನವಾದಂತೆ ನೋಡಹತ್ತಿದರು. ತಮ್ಮ ಹೆಂಡತಿಯು ಇಷ್ಟು ತುಂಬು ಮೈಯವಳಿರಲಿಲ್ಲ. ಎತ್ತರವಾದರೂ ಅಷ್ಟಕಷ್ಟೇ! ಬಲದಲ್ಲಿ ಅಬಲೆ. ಮುಖದಲ್ಲಿ ಇಂಥ ಚಿಮ್ಮುವ ಸೆಳೆತವಿರಲಿಲ್ಲ. ಮೈಯಲ್ಲಿ ಇಂಥ ಎಳೆಯುವ ಮಾರ್ದವವಿರಲಿಲ್ಲ. ಧರ್ಮಾನುಸಾರವಾಗಿ ಬಂದ ಹೆಂಡತಿಯೆಂದು ೩–೪ ವರುಷ ಪ್ರಪಂಚ ನೂಕಿದರು. ಪಾಲಿಗೆ ಬಂದದ್ದೇ ಪಂಚಾಮೃತವೆಂಬ ನಿಷ್ಕ್ರಿಯ ವೈರಾಗ್ಯ ಮಂತ್ರದಲ್ಲಿಯೇ ಸಕ್ರಿಯರಾಗಿ ನಡೆದಿದ್ದರು. ಆ ಮಹಾ ತಾಯಿಯಾದರೂ ಆನಂದಮಯಳಾಗಿ ಬಾಳಿ, ಕರುಣನನ್ನು ಗುರುಗಳ ತೊಡೆಯ ಮೇಲೆ ಮಲಗಿಸಿ ಕಣ್ಣುಮುಚ್ಚಿದ್ದಳು. ಅಂದಿನಿಂದ ಇಂದಿನ ವರೆಗೆ ಗುರುಗಳು ಬೇರೊಂದು ಹೆಣ್ಣನ್ನು ನೋಡಿದವರಲ್ಲ. ಮುಖದಲ್ಲಿ ಮುಖ ವಿಟ್ಟು ನಿರೀಕ್ಷಿಸಿದವರಲ್ಲ. ಎದೆಯ ಎತ್ತರ, ತೊಡೆಯ ಗಾತ್ರ ಅಳೆದವರಲ್ಲ. ಜೀವನದ ತಲಮಲದಲ್ಲಿ ಅಥವಾ ಬಾಳಿನ ಹರ್ಷೋನ್ಮಾದದಲ್ಲಿ ಹಳೆಯ ಚಿತ್ರ ಗಳನ್ನು ಮೆಲುಕಾಡಿಸಿ, ಕಲ್ಪನೆಯ ಮುಂದೆ ಕುದುರಿಸಿ ಸಂತೃಪ್ತಿಯನ್ನು ಪಡೆಯುತ್ತಿದ್ದರು. ಆದರೆ ಇಂದು ಗುಣವಂತಿಯನ್ನು ನೋಡಿ, ಅವಳ ಬೆಡಗು —ಬಿಣ್ಣಾನಗಳನ್ನು ನಿರೀಕ್ಷಿಸಿ, ಸುರಮ್ಯ ಅಂಗ—ಪ್ರತ್ಯಂಗಗಳನ್ನು ಅವಲೋಕಿಸಿ ಹಿಂದಿನ ಹರಿಗಡಿದ ಶೃಂಗಾರ ಪ್ರಪಂಚ, ಶೃಂಗಾರ ಭಾವನೆ ಚಿಗುರೊಡೆದುವು. ಕಳೆದ ಅನೇಕ ವರುಷಗಳ ಏಕಾಂತ ಜೀವನವು ಮರೆಯಾಯಿತು. ಭವಿಷ್ಯರಥವನ್ನು ಮುಂದೆಳೆಯಲು ಭೂತ ಸಂಗತಿಯನ್ನು ಜೋಡಿಸಿಕೊಂಡು ಹೋಗಲು ಗುಣವಂತಿಯು ಕೈಚಾಚಿ ನಿಂತಳು.

ಗುಣವಂತಿಯು ತನ್ನ ಅಂಗ—ಪ್ರತ್ಯಂಗಗಳಿಂದ ಈ ಬಗೆಯಾಗಿ ಹೆಣ್ಣುತನವನ್ನು ಪ್ರದರ್ಶಿಸುತ್ತ ಅರಿವೆಗಳನ್ನು ಒಣಗಹಾಕ ಹತ್ತಿದಳು. ಗುರುಗಳು ಮೆಲ್ಲಗೆ ಬಂದರು. ಬಚ್ಚಲದ ಕಡೆಗೆ ನಡೆದರು. ಗುಣವಂತಿಯು ಕಂಡು ಸಾವರಿಸಿಕೊಂಡಳು.

"ಈಗ ಎದ್ದಿರಾ?" ಎಂದು ಕೇಳಿದಳು.

"ಮಲಗಿರಲಿಲ್ಲ. ಸುಮ್ಮನೆ ಅಡ್ಡಾಗಿದ್ದೆ." ಎಂದು ಮುಖವನ್ನು ತೊಳೆಯಹತ್ತಿದರು.

"ಕರುಣಪ್ಪನು ಬಟ್ಟೆಗಳನ್ನು ಹೊಲಸುಮಾಡಿಕೊಂಡು ಬರುವನು.

ನಾನು ಎಷ್ಟು ಸ್ವಚ್ಛ ಒಗೆದರೂ ಮರುದಿನ ಅಷ್ಟೇ ಹೊಲಸು ಮಾಡಿಕೊಂಡು ಬರುವನು."

" ನಾನೂ ಬಹಳ ಹೇಳಿದೆ. ಹೇಗೆ ಹೊಲಸು ಮಾಡಿಕೊಳ್ಳುವನೋ ?"

" ಈಗ ನಿಮ್ಮ ದೋತರ ನೋಡಿರಿ. ಸುಣ್ಣದಂತೆ ಬೆಳ್ಳಗಾಗಿವೆ."

" ನಿಮ್ಮವ್ವ ನನಗೆ ಶಾಟಿಯನ್ನೇ ಉಡಿಸಿದ್ದಳು." ನಗಹತ್ತಿದರು.

" ನಾನೂ ಹಾಗೆ ಅನ್ನಬೇಕೆಂದೆ. ಆದರೆ ಹಾಗೆ ಅನ್ನುವುದಕ್ಕಿಂತ ಹೀಗೆ ಒಗೆದು ಸ್ವಚ್ಛಮಾಡುವುದೇ ಒಳ್ಳೆಯದೆಂದು ತಿಳಿದೆ."

" ಬಹಳ ಒಳ್ಳೆಯದನ್ನೇ ಮಾಡಿದೆ."

" ಬಟ್ಟೆ ಸ್ವಚ್ಛವಿದ್ದರೆ ಎಲ್ಲವೂ ಸ್ವಚ್ಛವಿದ್ದಂತೆ."

ಇದರ ಇಂಗಿತ ತಿಳಿಯಲಿಲ್ಲ. ಗುರುಗಳು ಸುಮ್ಮನೆ ಒಳಗೆ ಬಂದರು.

ಅರಿವೆಗಳನ್ನು ಒಣಗಹಾಕಿ ಗುಣವಂತಿಯು ನಡುಮನೆಗೆ ಬಂದಳು. ಈಗ ಮೈಮೇಲಿನ ಬಟ್ಟೆಗಳನ್ನು ಓರಣದಿಂದ ಸಾವರಿಸಿಕೊಂಡಿದ್ದಳು.

ಗುರುಗಳ ಜೀವ ಹೊಡೆದುಕೊಳ್ಳುತ್ತಿದ್ದಿತು. ಗುಣವಂತಿಯು ಮುಂದಾಗಿ—" ಚಹದ ವೇಳೆಯಾಗಿರಬೇಕು ?" ಎಂದಳು.

" ಅಹುದು." ಎಂದರು.

" ಕರುಣಪ್ಪನು ಇನ್ನು ಬರಲಿಲ್ಲವೇನೋ ?"

" ಹ."

" ನಾನು ಒಲೆಯನ್ನು ಹೊತ್ತಿಸಿ ಕೊಡಬಹುದೇ ?" ಉತ್ತರವು ಗೊತ್ತಿದ್ದರೂ ಕೇಳಿದಳು.

" ಬೇಡ."

" ಒಲೆಯನ್ನು ಹೊತ್ತಿಸಿದರೆ ಮೈಲಿಗೆ ಎಲ್ಲಿಯಾಗುವುದು ಗುರುಗಳೇ ! ನಾನು ಸೇದಿತಂದ ನೀರನ್ನೇ ಗೌಡರ ಮನೆಯಲ್ಲಿ ಬಳಕೆಗೆ ಉಪಯೋಗಿಸುವರು. ಹೊತ್ತಿಸುವೆ." ಎಂದಳು.

" ನಿನಗೇಕೆ ಕಷ್ಟ ಗುಣವಂತೀ."

" ನಮಗೆ ಕಷ್ಟವೆಲ್ಲಿ ಬಂದಿತು. ಹೆಣ್ಣು ಜೀವಕ್ಕೆ ಬಂದಮೇಲೆ ಮನೆಯ ಕೆಲಸಕ್ಕೆ ಕಷ್ಟವೆಂಬ ಶಬ್ದವೇ ಬಾರದು. ನಿಮ್ಮ ಹೆಂಡತಿಯ ಬಾಯಿಂದ ಈ ಶಬ್ದವನ್ನು ಎಂದಾದರೂ ಕೇಳಿದ್ದಿರಾ ?" ಎಂದು ಎದ್ದು ಒಲೆಯಲ್ಲಿ

ಇದ್ದಲಿಯನ್ನು ತುಂಬಿದಳು. ಚಿಮಣಿಯ ಎಣ್ಣೆಯಲ್ಲಿ ಕಕ್ಕಡವನ್ನು ಅದ್ದಿ ಉರಿಹಚ್ಚಿ ಒಲೆಯ ಬಾಯಿಗೆ ಇಟ್ಟಳು. ಎಣ್ಣೆಯ ವಾಸನೆಯ ಹೊಗೆಯು ಮನೆಯನ್ನು ತುಂಬಿತು. ಗುರುಗಳ ಜೀವನದಲ್ಲಿಯ ಈ ಹೊಸ ಪ್ರಸಂಗದ ರುಚಿಯನ್ನು ತಿಳಿಸುವ ಸೋದಾರಣೆಯಾಗಿ ಬಾಗಿಲಿನಿಂದ ಹೊರಬಿದ್ದು ಬೀದಿಗೆ ಸಾಗಹತ್ತಿತು.

ಗುರುಗಳು ಮೇಲೆದ್ದರು. ಪಾತ್ರೆಯಲ್ಲಿ ಎರಡು ಕಪ್ಪು ನೀರು ಸುರಿದು ಒಲೆಯ ಮೇಲಿಟ್ಟು ಗಾಳಿಯನ್ನು ಹಾಕಹತ್ತಿದರು.

" ನಿಮಗೆ ಬೇಸರಿಕೆ ಬಾರದೇ ಗುರುಗಳೇ ?" ಎಂದು ಬಾಗಿಲ ಹತ್ತಿರ ನಿಂತು ಗುಣವಂತಿ ಕೇಳಿದಳು.

" ಯಾವುದು ?"

" ಅಡಿಗೆಯನ್ನು ಮಾಡಿಕೊಳ್ಳುವುದು, ಚಹವನ್ನು ಕುದಿಸಿಕೊಳ್ಳುವುದು."

" ಅದೇಕೆ ?"

" ಒಲೆಯ ಮುಂದೆ ಕೂಡಹತ್ತಿ ಎಷ್ಟು ವರುಷಗಳಾದುವು ?"

" ೮-೧೦ ವರುಷಗಳಾದುವು."

" ನಿಮ್ಮ ಅಡಿಗೆಯನ್ನು ಅಂದಿನಿಂದ ನೀವೇ ಮಾಡಿಕೊಳ್ಳುವಿರಿ ?"

" ಅಹುದು."

" ಇನ್ನೊಬ್ಬಳನ್ನು ಮದುವೆಯಾಗ ಬಹುದಿದ್ದಿತಲ್ಲ ? "

" ಏನೋ ಆಗಲಿಲ್ಲ."

" ಮಗುವಿನ ರಕ್ಷಣೆಗಾದರೂ ಆಗಬೇಕಿದ್ದಿತು."

" ನಾನೇ ಆ ಹೊಣೆಯನ್ನು ಹೊತ್ತೆನು."

" ಅಡಿಗೆಯ ಕಾಟಕ್ಕಾದರೂ ಆಗಬೇಕಿದ್ದಿತು."

" ಅದನ್ನೂ ನಾನೇ ಮಾಡಬೇಕೆಂದೆ."

ಗುಣವಂತಿಗೆ ಇಂಥ ಒಣ ಉತ್ತರಗಳು ನಿಜವಾಗಿ ಬೇಕಾಗಿರಲಿಲ್ಲ.

" ಹೆಂಡತಿಯಿಲ್ಲದೆ ಸಾಯುವ ವರೆಗೆ ಇರಬೇಕೆಂದು ಪ್ರತಿಜ್ಞೆ ಮಾಡಿರುವಿರಾ ?" ಎಂದು ಕೇಳಿಯೇ ಬಿಟ್ಟಳು.

" ಹಾಗೇನಿಲ್ಲ."

“ ಹೋಗಲಿ. ಅಡಿಗೆಗಾಗಿ ಯಾರನ್ನಾದರೂ ಕರೆಯಿಸಿ ಕೊಳ್ಳಬಾರದೇ.”

“ ನನಗೆ ಯಾರೂ ಇಲ್ಲ.”

“ ಒಬ್ಬ ಅಡಿಗೆಯವಳನ್ನು ಇಟ್ಟುಕೊಳ್ಳಬೇಕಿದ್ದಿತು. ”

“ ಅಂಥವಳು ಸಿಕ್ಕಲಿಲ್ಲ.”

“ ಸಿಕ್ಕಿದ್ದರೆ ಇಟ್ಟುಕೊಳ್ಳುತ್ತಿದ್ದಿರಾ ?”

“ ವಿಚಾರಿಸುತ್ತಿದ್ದೆ.”

ಗುಣವಂತಿಯು ವಿಸ್ಮಯಪಟ್ಟಳು. ಗುರುಗಳ ಧೈರ್ಯ ಅಸಾಧಾರಣವೆಂದು ತಿಳಿದಳು. ಆದರೂ ಕೆಲದಿನಗಳಿಂದ ಒಂದು ಆಶೆಯು ಅಂಕುರಿಸಿದ್ದಿತು.

“ ನೀವು ಏನೇ ಹೇಳಿರಿ. ಮನೆಯಲ್ಲಿ ಒಂದು ಹೆಣ್ಣು ಬೇಕು. ಪ್ರಪಂಚದಲ್ಲಿ ಬೇನೆ, ಬೇಸರಿಕೆ ಹೀಗೆ ನೂರಾರು ಸಂಕಟಗಳಿರುವುವು. ಸೇವೆಗೆಂದು ಒಂದು ಇರಬೇಕು. ಅನಾಥರು ಬೇನೆಬಿದ್ದು ಆಸ್ಪತ್ರೆಯನ್ನು ಸೇರಿದರೂ ಅಲ್ಲಿ ಸೇವೆಗಾಗಿ ಹೆಣ್ಣು ದಾದಿಯರೇ ಇರುವರು. ನಿಮ್ಮ ಮೈಯಲ್ಲಿ ಇನ್ನೂ ನೆಣವಿದೆ. ರಕ್ತವಿದೆ. ಈಗ ಹಾಗೆ ಎನಿಸಲಾರದು. ಮುಪ್ಪಿನ ಕಾಲಕ್ಕೆ ಸಜಾತಿಯರಿರಲಿ, ವಿಜಾತಿಯರಿರಲಿ ಒಂದು ಹೆಣ್ಣು ಬೇಕು. ಹೆಣ್ಣಿಗೂ ಒಂದು ಗಂಡಿನ ನೆರವು ಬೇಕು. ನೋಡಿರಿ ನೀವೂ ತಿಳಿದವರಿರುವಿರಿ.” ಎಂದು ನುಡಿದಳು.

ಗುರುಗಳಿಗೆ ಈ ಮಾತು ನಿಜವೆನಿಸಿತು.

“ ಗುಣವಂತೀ, ನೀನು ವಿಶೇಷ ಕಲಿತವಳಲ್ಲ. ಆದರೂ ಅನುಭವದ ಮಾತುಗಳನ್ನು ಆಡುತ್ತಿರುವೆ.”

“ ಇಂಥ ಮಾತುಗಳನ್ನು ಆಡಲು ಶಾಲೆಯನ್ನು ಕಲಿಯುವ ಆವಶ್ಯಕತೆಯಿಲ್ಲ. ಬೆಳೆದ ಮೇಲೆ ಹೆಣ್ಣು ತನ್ನ ಸ್ವಂತ ಬುದ್ಧಿಯಿಂದ ಅರಿತುಕೊಳ್ಳುವಳು. ನಾನು ತಾಯಿಯ ಮನೆಯಲ್ಲಿ ಎಷ್ಟೇ ದಿನವಿರಲಿ ಅದು ನನ್ನ ಮನೆಯಾಗದು. ನನ್ನದೆಂಬ ಒಂದು ಮನೆಯು ನನಗೆ ಬೇಕೆನಿಸುವುದು.”

“ ಮದುವೆಯಾಗ ಬೇಕೆನ್ನುವೆಯಾ ?”

“ ತಾಯಿಯು ಹಾಗೆ ವಿಚಾರಿಸುತ್ತಿರುವಳು.”

“ ಆಗಬಾರದೇಕೆ ?”

" ಚಹವು ಕುದಿಯ ಹತ್ತಿತು ನೋಡಿರಿ." ಎಂದು ವಿಷಯಾಂತರಿಸಿ ನುಡಿದಳು.

ಗುರುಗಳು ಚಹವನ್ನು ಕೆಳಗಿಳಿಸಿದರು. ಒಲೆಯ ಮೇಲೆ ಹಾಲು ಕಾಯಲಿಕ್ಕೆ ಇಟ್ಟರು.

ಗುಣವಂತಿಯು ಕಪ್ಪುಗಳನ್ನು ತಂದಿಟ್ಟಳು. ಗುರುಗಳು ಎರಡು ಕಪ್ಪುಗಳಲ್ಲಿ ಚಹ ತುಂಬಿ ಒಂದು ಗುಣವಂತಿಗೆ ಕೊಟ್ಟು, ಇನ್ನೊಂದನ್ನು ತಮಗೆ ಇಟ್ಟುಕೊಂಡರು.

" ಇದು ಕರುಣಪ್ಪನ ಚಹ. ನನಗೇಕೆ ?" ಎಂದಳು.

" ಅವನು ಬಂದು ಮಾಡಿಕೊಳ್ಳುವನು."

" ನನಗೆ ಮಾಡಿದಿರಾ ?"

" ಅಹುದು."

" ಹಾಗಾದರೆ............"

" ಏನು ?"

ಗುಣವಂತಿಯು ನಾಲಗೆಯನ್ನು ಬಿಗಿಹಿಡಿದು—

" ನಿಮ್ಮ ಹೆಂಡತಿಯು ಚಹಮಾಡಿ ನಿಮ್ಮ ಮುಂದೆ ಇಡುತ್ತಿದ್ದಳು. ಈಗ ನೀವು ಮಾಡಿ ಇನ್ನೊಂದು ಹೆಣ್ಣಿನ ಮುಂದೆ ಇಡುವಿರಿ. ಪ್ರಪಂಚದಲ್ಲಿ ಯಾವ ಕಾಲಕ್ಕೆ ಎಂಥ ಪ್ರಸಂಗಗಳು ಬರುವುವೆಂದು ಯಾರು ಹೇಳುವರು !"

" ನೀನು ನಮ್ಮಂತೆಯೇ ಶುದ್ಧವಾಗಿ, ತಿಳಿಯಾಗಿ ಮಾತಾಡುವೆ...."

" ಓ ! ನನ್ನ ಜೀವನವೆಲ್ಲ ನಿಮ್ಮಂತವರ ಮನೆಯಲ್ಲಿಯೇ ಕಳೆದಿದೆ."

" ಅಂದರೆ !"

ಹೇಳಬೇಕೋ, ಹೇಳಬಾರದೋ ಎಂದು ಅನುಮಾನಿಸ ಹತ್ತಿದಳು. ಗುರುಗಳು ತವಕಗೊಂಡು ಕುಳಿತಿದ್ದರು.

" ಏನು ?" ಮತ್ತೆ ಕೇಳಿದರು.

" ನನ್ನ ತಂದೆಯವರು ಈ ಊರ ದೊಡ್ಡ ಗೌಡರ ತಮ್ಮ ಮಾಧವರಾಯರಂತೆ !"

" ಮಾಧವರಾವ ಕುಲಕರ್ಣಿಯವರೇ ? ಈಗ ನಾಲ್ಕು ವರುಷಗಳ ಹಿಂದೆ ತೀರಿಕೊಂಡರು. ಅವರೇ ?"

" ಹ !"

" ನಾನು ಚೆನ್ನಾಗಿ ಬಲ್ಲೆ. ಎಂಥ ಸಾತ್ವಿಕರು. ಎಂಥ ಸಜ್ಜನರು."

" ನನ್ನ ತಾಯಿ ಹೇಳುವಳು. ನಾನು ಅವರ ಮನೆಯ ಮಕ್ಕಳ ಸಂಗಡ ಉಂಡಿರುವೆ. ಆಡಿರುವೆ. ತೊಟ್ಟಿರುವೆ. ಉಟ್ಟಿರುವೆ. ನಿಮ್ಮಂಥವರ ಮನೆಯಲ್ಲಿಯೇ ನನ್ನ ಎಲ್ಲ ಬಾಳೂ ಆಗಿದೆ."

ಗುರುಗಳು ಇವಳು ಬ್ರಾಹ್ಮಣ ಬೀಜದವಳೆಂದು ಇಂದೇ ತಿಳಿದರು. ಆದರಿಂದಲೇ ಇಷ್ಟು ನಯವಿನಯ, ಸಂಪನ್ನತೆ ಮುಖದ ಮೇಲೆ ಕಾಂತಿ, ಅಂಗಗಳಲ್ಲಿ ಮಾರ್ದವತೆ, ಮಾತಿನಲ್ಲಿ ಸರಳತೆ ಇರುವುದೆಂದು ಅರಿತರು. ಗುಣವಂತಿಯು ಹೆಚ್ಚು ಆತ್ಮೀಯಳಾದಳು. ಮಾನಸಿಕ ಭಾವನೆಗಳಿಗೆ, ಅವುಗಳ ಸಂತೃಪ್ತಿಗೆ ಅಡ್ಡಿಯಾಗಿ ನಿಂತ ಕೆಲವು ಆತಂಕಗಳು ಸಡಿಲಾದುವು.

" ಇದೊಂದು ಹೊಸ ಸಂಗತಿಯನ್ನು ಹೇಳಿದೆ ಗುಣವಂತಿ." ಗುರುಗಳೆಂದರು.

" ಸಂಗತಿಯು ತೀರ ಹಳೆಯದು. ನೀವು ಇಂದು ತಿಳಿದದ್ದು ಹೊಸದು." ಎಂದು ನಗಹತ್ತಿದಳು.

" ಚಹ ಆರುವುದು ಕುಡಿ." ಎಂದರು.

" ನೀವು ಕುಡಿದಿರಾ ?"

" ಕುಡಿದೆ."

" ಇನ್ನು ನಾನು ಕುಡಿಯುವೆ." ಎಂದು ನುಡಿದು ಸುಮ್ಮನೆ ಕುಳಿತಳು.

" ಕುಡಿಯಲ್ಲ ? "

" ಕುಡಿಯುವೆ."

ಚಹದ ಕಪ್ಪು–ಬಸಿಯನ್ನು ಇನ್ನಷ್ಟು ಮುಂದೆ ಸರಿಸುತ್ತ—

" ತೆಗೆದುಕೋ. ಆರಿಹೋಯಿತು." ಎಂದರು.

ಗುಣವಂತಿಯು ತೆಗೆದುಕೊಂಡು—'ಕುಡಿಯುವೆ ಬಿಡಿರಿ' ಎಂದು ಎತ್ತಿಕೊಂಡಳು.

ಗುರುಗಳ ಕೈ ಗುಣವಂತಿಯ ಕೈಬೆರಳುಗಳಿಗೆ ತಗುಲಿತು. ಇಬ್ಬರ ಮೈಮೇಲೆ ಹರ್ಷರೋಮಾಂಚನಗಳೆದ್ದುವು.

ಕರುಣನು ಬಾಗಿಲಿಗೆ ಬಂದನು.

" ಕರುಣಪ್ಪನು ಬಂದನು." ಗುಣವಂತಿಯು ನುಡಿದಳು.

ಗುರುಗಳು ಗಡಗಡಿಸಿ ಎದ್ದು —

" ಎಲ್ಲಿಗೆ ಹೋಗಿದ್ದೆ ?" ಎಂದು ಮುಖದ ಮೇಲೆ ವಿಕೃತ ಕಳೆಯನ್ನು ತಂದು ಕೇಳಿದರು.

" ಇಲ್ಲೇ ಶಿವಶಂಕರನ ಮನೆಗೆ ಹೋಗಿದ್ದೆ." ಎಂದು ನುಡಿದು ಕರುಣನು ತನ್ನ ಕೋಣೆಗೆ ಹೋದನು.

ಕರುಣನು ಚಿಕ್ಕವನಿರಲಿಲ್ಲ. ತಾರುಣ್ಯದ ಹೊಸತಿಲಕ್ಕೆ ಇದೇ ಬಂದಿದ್ದನು. ಮುಖದ ಮೇಲೆ ಚಿಗುರು ಮೀಸೆ, ಸುಂಕುಗಡ್ಡ ಮೂಡಿದ್ದುವು. ಶಿಕ್ಷಣವು ಮುಗಿದು ವರುಷದ ಮೇಲಾಗಿದ್ದಿತು. ಓರಗೆಯ ಗೆಳೆಯರು ತಮ್ಮ ನಿತ್ಯದ ಹರಟೆಯಲ್ಲಿ ಹೆಣ್ಣು ಅದರ ಸಹವಾಸ, ಉಪಯುಕ್ತತೆ, ಆವಶ್ಯಕತೆಯ ಸಂಬಂಧ ಮಾತಾಡುತ್ತಿದ್ದರು. ತಮ್ಮ ಕಣ್ಣಳತೆಯಲ್ಲಿ ಬಂದ ರೂಪಸಿಯನ್ನು ನೋಡಿ ಮೆಚ್ಚಿಕೊಳ್ಳುತ್ತಿದ್ದರು. ಅವರ ಮೂಗು, ತುಟಿ, ಕಣ್ಣು, ಕೈಕಾಲುಗಳನ್ನು ಕಂಡು ವರ್ಣಿಸಿಕೊಳ್ಳುತ್ತಿದ್ದರು. ಹೆಂಡತಿಯೆಂದು ಸ್ವೀಕರಿಸಿದವರ ಭಾಗ್ಯವನ್ನು ಕೊಂಡಾಡುತ್ತಿದ್ದರು. ಅದೇ ಮಂಗ ಮುಖದ ಇದ್ದಲಿ ಬಣ್ಣದ ವೆತಾರಿಯರನ್ನು ನಿರೀಕ್ಷಿಸಿ ಬ್ರಹ್ಮನನ್ನೇ ನಿಂದಿಸುತ್ತಿದ್ದರು. ಅಂಥವರ ಕೈಹಿಡಿದ ದುರ್ಭಾಗ್ಯ ಗಂಡುಗಳನ್ನು ಹಳಿಯುತ್ತಿದ್ದರು. ಅವರ ನೂರಾರು ವಿಷಯಗಳಲ್ಲಿ ಹೆಣ್ಣು ವಿಚಿತ್ರವಾದ, ರೋಮಾಂಚಕಾರಿಯಾದ, ಉತ್ಸಾಹ ಜನತವಾದ ವಿಷಯವಾಗಿದ್ದಿತು.

ಗುಣವಂತಿಯ ಸಂಗಡ ತನ್ನ ತಂದೆಯವರು ನಗುವುದು, ಕಲೆಯುವುದು, ಅವಳಿಗೆ ಚಹ ಮಾಡಿಕೊಡುವುದು ಇತ್ಯಾದಿಗಳನ್ನು ಒಂದೆರಡು ಸಾರಿ ಕಂಡಿದ್ದನು. ಮುಂದೆ ದಿನಗಳು ಕಳೆದಂತೆ ಹೆಚ್ಚು ಹೆಚ್ಚಾಗಿಯೇ ಕಂಡನು. ಅವಳಾದರು ತನ್ನ ತಂದೆಯ ಸಂಬಂಧ ಆಸ್ಥೆಯಿಂದ ತನ್ನೆದುರು ಮಾತಾಡುವುದು, ಅವರ ಸೇವೆಯನ್ನು ಮಾಡಬೇಕೆಂದು ಮಾತೃಭಾವನೆಯ ಉಪದೇಶವನ್ನು ಹೇಳುವುದು ಅವ್ಯಾಹತವಾಗಿ ನಡೆದಿದ್ದಿತು. ತಾನು ಅವರ ಬಟ್ಟೆಬರೆಗಳನ್ನು ಸ್ವಚ್ಛವಾಗಿ ಒಗೆಯುವುದು, ಮಡಿಚಿ ಓರಣದಿಂದ ಇಡುವುದು, ಅವರು ಕೂಡುವ ಕೋಣೆಯನ್ನು ವ್ಯವಸ್ಥಿತವಾಗಿ ರಕ್ಷಿಸುವುದು, ಹಾಸಿಗೆ—ಹೊದಿಕೆಗಳನ್ನು ಅಲಂಕಾರಯುಕ್ತವಾಗಿ ಹಾಸುವುದು, ಕರುಣನಿಗೆ ವಿಚಿತ್ರವೆನಿಸಲಿಲ್ಲ. ಅವನಿಗಾದರೂ ಮನೆಯಲ್ಲಿ ಒಂದು ಹೆಣ್ಣು ಓಡಾಡುವುದು, ಮಾತಾಡುವುದು, ಅಲ್ಪಸ್ವಲ್ಪ ತನ್ನ ಸೇವೆಗೆ ನೆರವಾಗುವುದು ಆನಂದದಾಯಕವೆನಿಸಿತು. ಆದರೆ ಅವಳ ಸಂಗಡ ತಂದೆಯವರ ಸಂಬಂಧ ಹಾಗೂ

ಇರಬಹುದೇ ? ಎಂದು ಶಂಕಿಸಲಿಲ್ಲ. ಅಥವಾ ಅದನ್ನು ನಿರ್ಣಯಿಸುವ ಸಾಹಸಕ್ಕೂ ಹೋಗಲಿಲ್ಲ. ಅವರ ಹರಟೆಯು ನಡೆದ ಸಮಯದಲ್ಲಿ ತಾನು ಸಹಾ ಹೋಗುತ್ತಿರಲಿಲ್ಲ. ಆಕಸ್ಮಿಕ ಪ್ರಸಂಗದಲ್ಲಿ ಒಂದೆರಡು ಸಾರಿ ಹೋಗಬೇಕಾಗಿದ್ದಿತು. ಆಗ ಉಭಯತರು ಸಾವರಿಕೊಂಡಿದ್ದರು. ಸಂಕೋಚಪಟ್ಟಿದ್ದರು. ನಿರುತ್ಸಾಹದಿಂದ ದೂರ ಸರಿದು ಕುಳಿತಿದ್ದರು. ಕರುಣನು ಇದನ್ನು ಹೇಗೋ ಅರಿತಿದ್ದನು. ತಾನಿಲ್ಲಿ ಬರಬಾರದಿದ್ದಿತೆಂದೇ ಬಗೆದನು. ಅಂದಿನಿಂದ ಆ ಕಡೆಗೆ ಸುಳಿಯುವುದನ್ನೇ ಬಿಟ್ಟನು. ಗುಣವಂತಿಯು ಕೆಲಸಕ್ಕೆ ಬಂದಮೇಲೆ ಮಾಡುವ ಕೆಲಸಗಳನ್ನು ಒಪ್ಪಿಸಿ, ಯಾವುದಾದರೊಂದು ನೆವ ಹೇಳಿ ಹೊರಗೆ ಹೋಗಿಬಿಡುತ್ತಿದ್ದನು. ಇದು ಉಭಯತರಿಗೂ ಹಿತವೆನಿಸಿತು.

ಗುಣವಂತಿಯು ಕರುಣನು ಹೊರಗೆ ಹೋಗುತ್ತಿರುವ ಸಂಬಂಧ ಹೆಚ್ಚು ವಿಚಾರಿಸಲಿಲ್ಲ. ಅವಳ ಬುದ್ಧಿಯಾಗಲಿ, ಸ್ವಭಾವವಾಗಲಿ ಆ ದಾರಿಯನ್ನು ಹಿಡಿಯಲಿಲ್ಲವೆಂದರೂ ಸರಿ. ಕೆಲಸವಿರಬೇಕು. ಹರಟೆಗೆ ಹೋಗಿರಬೇಕು. ನನಗೇನು ಮಾಡುವುದು ಎಂಬ ಭಾವನೆಯ ಸೆಳೆತದಲ್ಲಿ ಆ ಪ್ರಸಂಗದ ಸದುಪಯೋಗಕ್ಕೆ ಹೆಣಗಾಡುತ್ತಿದ್ದಳು. ಅಥವಾ ತಲೆಯಲ್ಲಿ ತುಂಬಿಕೊಂಡ ಉದ್ದೇಶದ ಫಲಿತಾಂಶಕ್ಕೆ ಬುದ್ಧಿಶಕ್ತಿಯನ್ನು ವ್ಯಯಮಾಡಿಕೊಳ್ಳುತ್ತಿದ್ದಳು.

ಆದರೆ ಗುರುಗಳಿಗೆ ಇದು ಬೇರೊಂದು ಬಗೆಯಾಗಿ ಅರ್ಥವಾಯಿತು. ಕರುಣನು ಬಹುಶಃ ಮನೆಯ ಹೊರಗೆ ಹೋಗದವ. ಇತ್ತಲಾಗಿ ಮನೆಯಲ್ಲಿಯೇ ಇರುವುದಿಲ್ಲ. ಇದರರ್ಥವೇನು ?............

ನನ್ನ ಮತ್ತು ಗುಣವಂತಿಯ ಪರಿಚಯವು ಮೂಲತಃ ಅವನಿಗೆ ಸೇರುತ್ತಿರಲಿಕ್ಕಿಲ್ಲ. ಅವನ ತಾಯಿಯು ಜೀವದಿಂದಿದ್ದರೆ ಈ ಬಗೆಯ ವ್ಯವಹಾರವು ನಡೆಯುತ್ತಿರಲಿಲ್ಲ. ಆ ಸಾಧ್ವಿಯನ್ನು ಇಷ್ಟುಬೇಗ ಮರೆತು ಕೆಲಸದವಳ ಸ್ನೇಹಕ್ಕೆ ಒಳಗಾದೆನು. ಅವಳ ಸಂಗಡ ಮಾತು, ಹರಟೆ ಉತ್ಸಾಹಜನಕವಾಯಿತು. ಏಕಪತ್ನಿ ವ್ರತದ, ಪುತ್ರವಾತ್ಸಲ್ಯದ, ಆದರ್ಶರೂಪದ ಮನೆಯಲ್ಲಿ ಇಂದಿಗೆ ಅನಾದರ್ಶವಾದ ಘಟನೆಗಳು ನಡೆಯುತ್ತಿವೆ. ಇವುಗಳನ್ನು ನೋಡುವುದಕ್ಕಿಂತ ದೂರ ಇರುವುದು ಒಳ್ಳೆಯದು. ಎಂದು ಹೋಗುತ್ತಿರ

ಬೇಕೇ ? ಅಥವಾ...............

ತಂದೆಯ ರುಚಿಗೆ ಮಗನು ತಡೆಯಾಗಿ ಏಕೆ ನಿಲ್ಲಬೇಕು ? ತಂದೆಗೆ ಗುಣವಂತಿ ಬೇಕಾಗಿರುವಳು. ಅವಳ ಸ್ನೇಹದಲ್ಲಿ ತಂದೆಯವರು ಬೆರೆಯುತ್ತಿರುವರು. ಅವಳೂ ಹೊಂದಿಕೆಯಾಗುವ ಹೆಣ್ಣು. ನಾನು ಮಗನಾದರೇನಾಯಿತು ? ಅವರ ಎದುರು ನಿಂತು ವಿರಸವೇಕೆ ಮಾಡಬೇಕು ? ಅವರ ಸುಖ—ಸಂತೋಷಗಳನ್ನು ಬಯಸುವುದು ನನ್ನ ಧರ್ಮ ಮತ್ತು ಕರ್ಮ. ಊಟವಾದ ಮೇಲೆ ಮನೆಯಲ್ಲಿ ನನಗೂ ಕೆಲಸವಿರುವುದಿಲ್ಲ. ಹೀಗಿದ್ದು ನಾನು ಮನೆಯಲ್ಲಿ ನಿಂತರೆ ಅವರ ವ್ಯವಹಾರದ ಮೇಲೆ ನಾನು ಕಣ್ಣಿಟ್ಟ ಸಂಶಯವು ವ್ಯಕ್ತವಾಗುವುದು. ಅದಕ್ಕೆ ಹೊರಗೆ ಹೋಗುವುದು ಒಳ್ಳೆಯದು. ಎಂದು ಹೋಗುತ್ತಿರಬೇಕೇ ? ಅಥವಾ........

ಅವನೂ ತಾರುಣ್ಯಕ್ಕೆ ಬಂದಿರುವನು. ಮದುವೆಯ ಸಂಬಂಧ ಊರಲ್ಲಿ ಸುದ್ದಿ ಹಬ್ಬಿದೆ. ಗೆಳೆಯರಲ್ಲಿ ಸಾಕಷ್ಟು ಚರ್ಚೆಯಾಗಿದೆ. ಇಂಥ ಸಮಯದಲ್ಲಿ ತಂದೆಯು ಒಬ್ಬ ಕೆಲಸದವಳ ಸಂಗಡ ಸ್ನೇಹ ಬೆಳೆಸುವುದೆಂದರೇನು ? ಇದು ಲೌಕಿಕರಲ್ಲಿ ಗೊತ್ತಾದರೆ ಏನಾದೀತು ? ತಮ್ಮ ಮನೆಗೆ ದೊಡ್ಡವರು ಹೆಣ್ಣನ್ನು ಕೊಡಬಹುದೇ ? ಜನರ ಕಣ್ಣಲ್ಲಿ ನಾವು ಹೀನರೆಂದು ಗಣನೆಯಾದರೆ ನಮ್ಮನ್ನು ಯಾರು ಕೇಳಬೇಕು ? ಯಾರು ಮಾತಾಡಿಸಬೇಕು ಅನೀತಿಯವರೆಂದು ಕೆಂಗಣ್ಣಿನಿಂದ ನೋಡಲಾರರೆ ? ಇದು ಕುಟುಂಬಘಾತದ, ಗೃಹವಿನಾಶದ ಮಾರ್ಗವಲ್ಲವೇ ? ಈ ಹಾಳು ಪ್ರಸಂಗವನ್ನು ನೋಡುವುದಕ್ಕಿಂತ ದೂರ ಇರುವುದು ಲೇಸೆಂದು ಹೋಗುತ್ತಿರಬಹುದೇ ? ಅಥವಾ ?....... ....

ಕರುಣನು ತರುಣನು. ತಾರುಣ್ಯದ ಹೊಸ ಹುರುಪು, ಹೊಸತನವನ್ನು ಬಲ್ಲನು. ನಾನು ಗುಣವಂತಿಯ ಸಂಗಡ ಮಾತನಾಡುವುದನ್ನು ಬಲ್ಲನು. ನಗುವುದನ್ನು ಕೇಳಿರುವನು. ಈ ನಗೆ ಈ ಮಾತುಗಳಲ್ಲಿ ಹುದುಗಿರುವ ಸ್ನೇಹವನ್ನು ಅರಿಯಬಲ್ಲನು. ಅವನೂ ಗಂಡಸು. ಹೆಣ್ಣು — ಗಂಡಿನ ಸಲಿಗೆಯ ರುಚಿಯನ್ನು ತಿಳಿಯುವ ಸಾಮರ್ಥ್ಯವಿದೆ. ಈ ನಮ್ಮ ಶೃಂಗಾರ ಚೇಷ್ಟೆ ಅವನ ಭಾವನೆಗಳನ್ನು ಕೆರಳಿಸಿರಲು ಸಾಕು. ಅವನಿಗೆ ಹತ್ತಿಪ್ಪತ್ತು ಜನ ಗೆಳೆಯರಿರುವರು. ಒಳ್ಳೆಯವರು, ಸಾಮಾನ್ಯರು, ದುಷ್ಟರು ಇರಬೇಕು.

ಉಚ್ಛೃಂಖಲ ಭಾವನೆಗಳನ್ನು ಬಿತ್ತದಿಲ್ಲ. ಬಿತ್ತಿರಲೇ ಬೇಕು. ಗುಣವಂತಿಯು ಇಲ್ಲಿಗೆ ಬರುವುದೇ ತಡ ಕಾಲುಗಳು ಹೊಸತಿಲ ಹೊರಗೆ ಬೀಳುವುವು. ಅವರು ಎಲ್ಲಿಯೋ ಒಂದು ಗುಪ್ತಕಾರಸ್ಥಾನವನ್ನು ನಡಸಿರಬೇಕು. ನನ್ನ ವರ್ತನೆಯು ಉದಾಹರಣೆಯಾಗಿರಬೇಕು. ತಂದೆಯೇ ಹೀಗೆ ಮಾಡಿದ ಮೇಲೆ ಮಗನೇಕೆ ಮಾಡಬಾರದು! ನನ್ನ ಮೇಲಿನ ಸೇಡನ್ನು ತೀರಿಸಲು ಹೊರಗೆ ಹೋಗುವನು. ಅವನೂ ಒಬ್ಬಳಿಗೆ ಅಂಟಿಕೊಂಡಿರುವನು. ಹೋಗುವಮುಂದೆ ಬೆಕ್ಕಿನಂತೆ ಸಪ್ಪಳವಿಲ್ಲದೆ ಹೋಗುವನು. ಬರುವ ಮುಂದೆ ಮೆಲ್ಲಗೆ ಬರುವನು. ಇದೆಲ್ಲ ಸೇಡು.—ಎಂದು ವಿಚಾರಿಸುವರು.

ಆದರೆ ವಸ್ತುಸ್ಥಿತಿಯು ಹೀಗಿರಲಿಲ್ಲ. ಗುರುಗಳ ವಿಕೃತ ಮನಸ್ಸು ಅಪಕ್ವ ಭಾವನೆ ಹಾಗೆ ಕೆರಳಿ ನಿಂತು ನೂರಾರು ತರ್ಕಗಳನ್ನು ಹೂಡುತ್ತಿದ್ದುವು. ಬುದ್ಧಿಯು ಇದು ಸರಿಯಲ್ಲವೆಂದು ಹೇಳುತ್ತಿದ್ದಿತು. ಸಂಸ್ಕಾರ ಹೀಗಾಗಬಾರದೆಂದು ಎಚ್ಚರಿಸುತ್ತಿದ್ದಿತು. ಆದರೆ ಉತ್ತೃಪ್ತ ಮನಸು ಹೆಜ್ಜೆ ಹೆಜ್ಜೆಯಿಂದ ಮುಂದೆ ಸರಿಯುತ್ತಿದ್ದಿತು. ಮಗನ ವಿಚಾರವು ಮರೆಯಾಗಿ ಬಿಡುತ್ತಿದ್ದಿತು.

ಕಳೆದ ನಾಲ್ಕಾರು ತಿಂಗಳುಗಳಲ್ಲಿ ಕೇವಲ ಎರಡು ಹಂತುಗಳನ್ನು ದಾಟಿ ಬಂದಿದ್ದರೆಂದು ನುಡಿಯಬಹುದು ಒಂದು ಮಾತಾಡುತ್ತ ಗುಣವಂತಿಯ ಸಂಗಡ ನಗುವುದು. ಇನ್ನೊಂದು ಚಹದ ಕಪ್ಪನ್ನು ಎತ್ತಿ ನೋಡುವ ಮುಂದೆ ಅವಳ ಬೆರಳನ್ನು ಸೋಂಕುವುದು. ಗುಣವಂತಿಯು—ಗುರುಗಳು ತಾವಾಗಿ ಮುಂದೆ ಬರಲಿ! ಎಂದು ಸ್ತ್ರೀ ಪ್ರತಿಮೆಯಾಗಿ ಎಲ್ಲವನ್ನು ನಿರೀಕ್ಷಿಸುತ್ತ ನಡೆದಿದ್ದಳು. ತನ್ನ ದುಂಡು ಮುಖದ, ಬೆಳ್ಳನ್ನ ಹಲ್ಲಿನ ಬಾಯನ್ನು ಬಿಚ್ಚಿ, ಹುಸಿನಗೆಯಿಂದ ಸ್ವಾಗತದ ಬಾಗಿಲನ್ನು ತೆರೆದಿದ್ದಳು. ಗುರುಗಳು ಇನ್ನೂ ಚೆನ್ನಾಗಿ ಅದನ್ನು ಅರಿತಿರಲಿಲ್ಲ.

ಗುರುಗಳಲ್ಲಿಯ ಶೇಷ ತಾರುಣ್ಯ ಗುಣವಂತಿಯ ಸ್ನೇಹದಿಂದ ಒಮ್ಮೆ ಹೆಡೆಯೆತ್ತಿ ನಿಂತು ಬಿಟ್ಟಿತು. ಆದರೆ ಅದು ಹೆಚ್ಚು ಮುಂದೂ ಸರಿಯಲಿಲ್ಲ. ಹಿಂದೂ ಹೋಗಲಿಲ್ಲ, ತರ್ಕದ ಹೊಯ್ದಾಟದಲ್ಲಿ ಇಂದು ಒಂದು ಹೆಜ್ಜೆ ಮುಂದೆ ಸರಿಯಬೇಕು. ನಾಳೆ ನಾಲ್ಕು ಹೆಜ್ಜೆ ಓಡಬೇಕು ಗುರಿಯನ್ನು ಮುಟ್ಟಬೇಕು ಎಂಬ ಶಾಬ್ದಿತ ಗುಣಾಕಾರದಲ್ಲಿಯೇ ನಡೆದಿದ್ದಿತು. ಆದರೆ

ಕಾರ್ಯವು ತೀರಿ ಮುಂದವಾಗಿದ್ದಿತು. ಹೀಗೆ ದಿನಗಳು ಮುಂದೆ ನಡೆದಂತೆ ಗುಣವಂತಿಯು ಕಲ್ಲು ಗೊಂಬೆಯಾದಳು. ತನ್ನ ಕೆಲಸವು ಕಳೆದು ಹೋಗ ದಷ್ಟು ಗುರುಗಳ ಸ್ನೇಹವನ್ನು ಇಟ್ಟುಕೊಂಡು ಆಗಾಗ ನಕ್ಕು ಹಲ್ಲು ತೋರಿ ಸುತ್ತಿದ್ದಳು. ಎದೆಯನ್ನು ತೋರಿಸುತ್ತಿದ್ದಳು. ಹುಬ್ಬು ಹಾರಿಸುತ್ತಿದ್ದಳು. ಇವು ಗುರುಗಳಿಗೆ ಪೂರ್ವದ ಸ್ನೇಹ ಇನ್ನೂ ಇದೆ. ಗುಣವಂತಿಯು ಇನ್ನೂ ಮೆಚ್ಚಿಕೊಂಡಿರುವಳು, ಸ್ವಾಗತಕ್ಕೆ ಸಿದ್ಧಳಿರುವಳು ಎಂದು ದೃಢಪಡಿಸುತ್ತಿದ್ದುವು.

ಗುರುಗಳ ಕ್ರಮಿಸುವ ದಾರಿಯು ಇನ್ನೂ ದೂರವಿದ್ದಿತು. ಅವರು ಗುರುಗಳು. ಮಕ್ಕಳಿಗೆ ಉಪದೇಶವನ್ನು ಹೇಳುವ ವ್ಯಕ್ತಿಗಳು ನೈಚಿತ ಹೊಣೆಯನ್ನು ತಿಳಿಯಪಡಿಸುವ ಆದರ್ಶವಾದಿಗಳು. ಸಾಲೆಯ ವಿಷಯ ಗಳಲ್ಲಿ ಬರುವ ಸೀತೆ, ದ್ರೌಪದಿ, ಅಹಲ್ಯೆ ಮುಂತಾದ ಸಾಧ್ವಿಶಿರೋಮಣಿಗಳ ಪಾತಿವ್ರತ್ಯವನ್ನು ಬಾಯಿ ಹುಳಿ ಏರುವಂತೆ ವರ್ಣಿಸುವ ಚಾರಣರು. ರಾಮ, ಕೃಷ್ಣ, ಬುದ್ಧ ಮುಂತಾದ ಯುಗ ಪುರುಷರ ಚಾರಿತ್ಯ ಮಹಾತ್ಮೆಯನ್ನು ಸ್ಪಷ್ಟಪಡಿಸುವ ಪ್ರವಚನ ಪಟುಗಳು. ಅಲ್ಲದೆ ಕಾಣಬಂದ ಪಾಲಕರ ಮುಂದೆ ತಾವು ಶುದ್ಧಾತ್ಮರು, ಶುದ್ಧ ಚಾರಿತ್ಯತರು, ಧರ್ಮಸಂಭವರು, ಕರುಣಾಳು ಗಳು ಎಂಬ ಗುಣುಗಣಗಳನ್ನು ಒಪ್ಪಿಸುತ್ತ ತಮ್ಮ ಅಗಾಧ ಭಾಷಾಜ್ಞಾನ ವನ್ನು ಶಬ್ದಸಂಪತ್ತನ್ನು ತೋಡಿಕೊಂಡು ತಮ್ಮ ಹೆಚ್ಚಳದ ನಿಲುಮೆಯನ್ನು ಎತ್ತರಿಸಿ ನಿಲ್ಲುವಂತೆ ಮಾಡುತ್ತಿದರು. ಸಾಮಾನ್ಯವಾಗಿ ತಾವು ಸರ್ವಜ್ಞನ ಅಪರಾವತಾರವೆಂದು ನಾಬ್ಯ ಬಾಡಿ ಅವರ ಹೂಂಕಾರದ ಉಮರ್ಶೆಯನ್ನು ಪಡೆಯುತ್ತಿದ್ದರು

ನಿಜವಾಗಿ ನೋಡಿದರೆ ದತ್ತಗುರುಗಳು ಪ್ರಾಥಮಿಕ ಸಾಟೆಯ ಒಬ್ಬ ಸಾಮಾನ್ಯ ಶಿಕ್ಷಕರು. ಆ ಕೆಲಸದಲ್ಲಿಯೇ ೨೦—೨೫ ವರುಷಗಳನ್ನು ಕಳೆದಿದ್ದರು. ತಮ್ಮ ವರ್ಗದ ವಿಷಯ ಪಟ್ಟಿಗೆ ಅನುಗುಣವಾಗಿ ೮—೧೦ ವಿಷಯ ಗಳನ್ನು ಕಲಿಸುತ್ತಿದ್ದರು ಅವು ಸಹ ಪ್ರಾಥಮಿಕಾವಸ್ಥೆಯ ಬಾಲ್ಯ ಸ್ವರೂಪ ಸಂತವುಗಳು. ತರಪೇತಿ ವರ್ಗಗಳಲ್ಲಿ ಒಂದಿಷ್ಟು ಪುನರಾವರ್ತಿಯಾಗಿದ್ದುವು. ಮಿಕ್ಕವುಗಳಲ್ಲಿ ತಮ್ಮ ಸಾಲೆಯ ವರ್ಗದ ಮಕ್ಕಳು ಪುಸ್ತಕಗಳನ್ನು ಓದಿಕೊಂಡಿದ್ದುವು. ಇಂತಿಷ್ಟು ವಿಷಯ ಜ್ಞಾನದಿಂದ ತಾವು ಸಂಪೂರ್ಣರೆಂದೇ ತಿಳಿದೆ

ದ್ದರು. ತಮಗೆ ಗೊತ್ತಿದ್ದ ಜ್ಞಾನವೇ ಆಚಾರ್ಯದೇವೋಭವ ಪಟ್ಟಕ್ಕೆ ಯೋಗ್ಯವಾದುದು. ಮೇಲೆ ವರ್ಣಮಾತ್ರಂಕಲಿಸಿನಾತಂಗುರು. ಇವು ಅವರ ನಿತ್ಯ ಮಂತ್ರ. ಆದರೆ ಇಷ್ಟು ವ್ಯವಹಾರ ಜ್ಞಾನಕ್ಕೆ ಸಾಲದೆಂದು ಅನೇಕ ಸಾರಿ ಮನ ಗಂಡಿದ್ದರು. ಮುಖ ಹೀನ ಮಾಡಿಕೊಂಡು ತಿರುಗಿದ್ದರು. ಆಗ ಇದು ಗುರುಗಳ ಕ್ಷೇತ್ರವಲ್ಲ. ನಾವು ಹೋಗಬಾರದು. ಎಂದು ವೈರಾಗ್ಯದ ಮಂತ್ರ ಎಳೆದು ಹಿಂದೆ ಸರಿದಿದ್ದರು — ಇತ್ಯಾದಿ ಅಂತರಿಕ ಭಾವನೆಗಳು ಅವರ ಮೀನ ಮೇಷಕ್ಕೆ ಹಿಂದೆ ಸರಿಸುತ್ತಿದ್ದುವು. ಗುಣವಂತಿಯು ದಿಕ್ಕಿಲ್ಲದೆ ಹೆಣ್ಣಾಗಿದ್ದರೂ ಗುರುಗಳು ಆಕೆಯನ್ನು ಇನ್ನೂ ಪ್ರಯೋಗದ ದಾರಿಯಲ್ಲಿ ನಡೆಸುತ್ತಿದ್ದರು. ಇನ್ನೂ ಅವಳ ಮೂಗು ಅಳೆಯುತ್ತಿದ್ದರು. ಕಣ್ಣಿನ ಕಾಂತಿಯನ್ನು ನಿರೀಕ್ಷಿಸುತ್ತಿದ್ದರು. ತೊಡೆಯಗಾತ್ರವನ್ನು, ಎದೆಯ ಪರಿಷವನ್ನು ನೋಟದ ವಸ್ತುಗಳನ್ನಾಗಿ ಮಾಡಿಕೊಂಡಿದ್ದರು. ಮನಸು ಅವಳನ್ನು ನೂರು ಸಾರಿ ಮುದ್ದಿಟ್ಟಿದ್ದಿತು. ಅಷ್ಟೇ ಸಾರಿ ಅಪ್ಪಿಕೊಂಡಿದ್ದಿತು ಸ್ವಪ್ನದಲ್ಲಿ ಗುಣವಂತಿಯು ಮೆಚ್ಚಿನ ಪ್ರಿಯಸಿಯಾಗಿದ್ದಳು.

ಗುಣವಂತಿಯು ಗುರುಗಳ ಪೌರುಷ ಉನ್ಮಾದವನ್ನು ಕೆರಳಿಸಿದ ಮೇಲೆ ಅವರ ಗತಿಸಿದ ಪತ್ನಿ — ಮಹಾಲಕ್ಷ್ಮಿ ಸ್ವಪ್ನದಲ್ಲಿ ಸುಳಿಯ ಹತ್ತಿದಳು:—

ಮದುವೆಯ ದಿನದ ಮೊದಲಗಿತ್ತಿಯಾಗಿ ಮನೆಗೆ ಬಂದಳು ಹಿಂದಿನ ಅವಳ ಕನ್ನೆತನದ ಕಾಂತಿ ಗುರುಗಳ ಮನೆಯನ್ನು ಮತ್ತು ಮನಸನ್ನು ಬೆಳಗಿತು. ರುಚಿರುಚಿಯಾದ ಅಡಿಗೆಯನ್ನು ಮಾಡಿದಳು. ಬಡಿಸಿದಳು. ಉಣಿಸಿದಳು. ಮೆತ್ತನ್ನ ಹಾಸಿಗೆಯನ್ನು ಹರಹಿದಳು. ಬೆಚ್ಚನ್ನ ನಿದ್ದೆಯನ್ನು ಕೊಟ್ಟಳು. ಈ ಶೃಂಗಾರ ಜೀವನದಲ್ಲಿಯೇ ಒಂದು ದಿನ ಕರುಣಿನ ಬಾಲರೂಪ ಕಂಡಿತು. ಅದಕ್ಕೆ ದೇಹವನ್ನು, ಜೀವವನ್ನು ತೆತ್ತು ಪ್ರೈಯಿಂದ ಮನೆಯಲ್ಲಿ ಇಳಿಸಿದಳು. ಮಗುವು ದಟ್ಟ ಹೆಜ್ಜೆಯನ್ನು ಇಡಹತ್ತಿತು. ನಡೆದಾಡ ಹತ್ತಿತು. ಮಹಾಲಕ್ಷ್ಮಿಗೆ ತಾಯಿ! ಎಂದು ಕರೆಯ ಹತ್ತಿತು. ದತ್ತ ಗುರುಗಳಿಗೆ ತಂದೆ! ಎಂದು ನುಡಿಯ ಹತ್ತಿತು. ಈ ಬಾಲಲೀಲೆ, ಲೀಲಾ ವಿನೋದ ಇಬ್ಬರಲ್ಲಿಯೂ ಪ್ರಪಂಚ ಪಂಚಾಮೃತದ ಸೆಲೆಯನ್ನೇ ಚಿಮ್ಮಿತು. ಗುರುಗಳು ಪಿತೃ ಋಣದ ಮುತ್ತಲೆಯನ್ನು ಹೊಂದಿದಂತೆ, ಪುನ್ನರಕದಿಂದ ಉದ್ಧಾರವಾದಂತೆ ಸಂತೋಷಪಟ್ಟರು. ಮಹಾಲಕ್ಷ್ಮಿಯು ತನ್ನ ತಾಯಿ

ತನದ ಸಂಪುಷ್ಟದಲ್ಲಿ ಮಗುವನ್ನಿಟ್ಟುಕೊಂಡು ಆನಂದಮಯಳಾದಳು. ಅವಳು ತನ್ನ ಒಂದು ಜೀವ ಎರಡು ಜೀವವಾದುದಕ್ಕೆ, ಅಂಥ ಅಮೌಲ್ಯ ಶಕ್ತಿಯನ್ನು ದೇವರು ತನಗೆ ಕೊಟ್ಟದಕ್ಕೆ ಗಂಡನ ಪುಣ್ಯವೇ ಕಾರಣವೆಂದು ಹುಚ್ಚು ಹುಚ್ಚಾಗಿ ತಿಳಿದುಕೊಂಡು ಜೀವನದ ಕಷ್ಟ—ಕಾರ್ಪಣ್ಯಗಳನ್ನು ನೋವು—ದುಃಖಗಳನ್ನು ಮರೆತು ಮಹಾಸಾಧ್ವಿಯಾಗಿ, ಸಹಧರ್ಮಿಣಿಯಾಗಿ ಬಾಳ ಹತ್ತಿದಳು. ಆದರೆ ಧೈವವು ಈ ಸುಖವನ್ನು ಬಹುದಿನಗಳವರಗೆ ಸವಿಯಲು ಅನುವು ಮಾಡಗೊಡಲಿಲ್ಲ. ತರುಣನು ೮—೧೦ ವರುಷ ದೊಡ್ಡವನಾಗು ವಷ್ಟರಲ್ಲಿ ಮಹ ಮಾರಿಯ ಬಲೆಗೆ ತುತ್ತಾದಳು. ಸಾಯುವ ಮುನ್ನಾ ದಿನ ಗಂಡನನ್ನು ಬಳಿಗೆ ಕರೆದಳು. ಕರುಣನ ಬೆನ್ನ ಮೇಲೆ ಕೈಯಾಡಿಸಿನಳು. ಮನೆಯನ್ನು ನಿರೀಕ್ಷಿಸಿದಳು. ತನ್ನ ಸುತ್ತು ಹರಹಿನಿಂತ ತನ್ನ ಪ್ರಪಂಚದ ವಸ್ತು—ಒಡವೆಗಳನ್ನು ಅರಿವೆ—ಅಂಚಡಿಗಳನ್ನು ಎಲ್ಲವನ್ನು ನೋಡಿದಳು. ಇಷ್ಟೆಲ್ಲವನ್ನು, ಇವರೆಲ್ಲರನ್ನು ಬಿಟ್ಟು ಹೋಗುವುದು ಕಷ್ಟವೆನಿಸಿತು. ಗಂಡನನ್ನು, ಕರುಣನನ್ನು ಅಗಲುವುದು ಹೆಚ್ಚಿನ ಸಂಕಟವೆನಿಸ ಹತ್ತಿತು. ಸಾಯುವ ಹೊತ್ತು ಸಮೀಪಿಸಿದಂತೆ ದೈಹಿಕವೇದನೆಯು ಅಧಿಕವಾಗ ಹತ್ತಿತು. ಕಣ್ಣಿಂದ ನೀರು ಧಾರಾಕಾರವಾಗಿ ಇಳಿಯ ಹತ್ತಿದುವು. ಹೇಳಬೇಕೆಂದು ಬಿಚ್ಚಿದ ಬಾಯಲ್ಲಿ ದುಃಖದ ಬಿಸಿಯುಸಿರೇ ತುಂಬಿದ್ದಿತು. ಎದೆಯು ಶಬ್ದಗಳನ್ನು ಹೊರಡಿಸಲು ಹೊಸ ಉಸಿರನ್ನು ಹೆಚ್ಚಾಗಿ ತುಂಬಿಕೊಳ್ಳುತ್ತಿದ್ದಿತು. ಆದರೆ ಮಾತು ಹೊರಡದೆ ಉಸಿರೇ ಚಿಮ್ಮುತ್ತಿದ್ದಿತು. ಮಾತಿನ ಆತುರ ಕೃತಿಯಲ್ಲಿ ಇಳಿದು ಕರುಣನನ್ನು ದತ್ತಗುರುಗಳ ಕೈಯಲ್ಲಿ ಇಟ್ಟಳು. ಇನ್ನು ನುಡಿಯ ಬೇಕೆಂದು ಬಾಯಿ ತೆರೆದಳು. ಬಡವಾಗಿ ಮಲಗಿದ ನಾಲಿಗೆಯು ಸಹ ಅಲುಗಾಡಲಿಲ್ಲ. ದುಃಖಭಾರ ಹೆಚ್ಚಾಗಿ ಪ್ರಜ್ಞೆ ಹೋಯಿತು. ಜೀವಶ್ರವದಂತೆ ಎರಡು ದಿನವಿದ್ದು ಪರಲೋಕವನ್ನು ಸೇರಿದಳು. ಮಹಾಲಕ್ಷ್ಮಿ ಸತ್ತಳು.

ಈ ಉದ್ದನ್ನ ವಿಷಯದ ತುಂಡುತುಂಡು ಭಾಗಗಳು ದತ್ತ ಗುರುಗಳ ನಿತ್ಯ ಸ್ವಪ್ನದ ವಿಷಯಗಳಾಗಿದ್ದುವು. ಒಮ್ಮೆ ಅವಳು ಬಂದು ಅಡಿಗೆಯನ್ನು ಮಾಡಿ ಉಣಬಡಿಸುತ್ತಿದ್ದಳು. ಇನ್ನೊಮ್ಮೆ ಕರುಣನನ್ನು ಕೈಗಿಟ್ಟು ಮರೆಯಾಗುತ್ತಿದ್ದಳು ಮತ್ತೊಮ್ಮೆ ಸ್ತ್ರಿ ಸುಖದ ಸಮೀಪಕ್ಕೆ ಬಂದು ಕಾಣದಾಗುತಿದ್ದಳು. ಒಮ್ಮೆ ಮುದ್ದಿನಿಂದ, ಅಪ್ಪುಗೆಯಿಂದ, ಸಂಪರ್ಕದಿಂದ ಗುರುಗಳ

ಭಾವನೆಗಳಿಗೆ ನೀರುಣಿಸಿ ಬೆಳಗಾಗಿಸುತ್ತಿದ್ದಳು. ಈ ಅತೃಪ್ತ ಸ್ವಪ್ನ ಸುಖಗಳು ಪ್ರತಿಕ್ರಿಯೆಯನ್ನು ಹೊಂದಿ ಗುಣವಂತಿಯ ಸಾಮೀಪ್ಯಕ್ಕಾಗಿ ಹಾತೊರೆಯುತ್ತಿದ್ದುವು. ಅವಳ ಅಸರೋಪದಲ್ಲಿ ಇಂಥಿಂಥ ಕಲ್ಪನೆಯನ್ನು ಮಾಡುತ್ತಿದ್ದುವು. ಆದರೆ ಪ್ರತ್ಯಕ್ಷದಲ್ಲಿ ಸಂಸ್ಕಾರ, ನೈಚಿಕ ಅರಿವು ಹಿಂದೆ ಎಳೆಯುತ್ತಿದ್ದುವು. ಈ ಜೊಂಜಾಟದಲ್ಲಿ ಸ್ವಪ್ನದ ಚಿತ್ರಗಳು ಬೈಲಾಗ ಹತ್ತಿದುವು. ಮಹಾಲಕ್ಷ್ಮಿಯು ವಿಸ್ಮೃತಿಯ ರಂಗಕ್ಕೆ ಇಳಿಯುತ್ತ ಆ ಬರಿದಾದ ಸ್ಥಾನವನ್ನು ಗುಣವಂತಿಯು ಅಲಂಕರಿಸ ಹತ್ತಿದಳು.

ಇಂದು ಗುಣವಂತಿಯು ಗುರುಗಳ ಸ್ವಪ್ನದ ಪ್ರೇಯಸಿ, ಹಸರಿನಲ್ಲಿ ಹಿಂಜರಿದ ಕೃತಿಗಳು ಸ್ವಪ್ನದಲ್ಲಿ ಸ್ವಚ್ಛಂದವಾಗಿ ಮೂರ್ತಿಯಾಗ ಹತ್ತಿದುವು ಗುಣವಂತಿಯು ಗುರುಗಳ ಭೋಗ ಸಾಧನಳಾದಳು. ಈ ಸ್ವಪ್ನ ಸುಖದ ಒತ್ತಡದಿಂದ ಅವಳು ಹತ್ತಿರಕ್ಕೆ ಬಂದಂತಾದಳು.

ನಿತ್ಯದಂತೆ ಗುಣವಂತಿಯು ಕೆಲಸಕ್ಕೆ ಬಂದಳು. ಕರುಣನು ಅವಳಿಗೆ ಕೆಲಸವನ್ನು ಒಪ್ಪಿಸಿ ಹೊರಗೆ ಹೋದನು. ಗುರುಗಳು ನೋಡಿದರು. ಆದರೆ ಅಡ್ಡಿಯನ್ನು ಮಾಡಲಿಲ್ಲ. ಗುಣವಂತಿಯು ತನ್ನ ಕೆಲಸದಲ್ಲಿ ತೊಡಗಿದಳು.

ಗುರುಗಳು ನಡುಮನೆಯಲ್ಲಿ ಶತಪಥವನ್ನು ಹಾಕಹತ್ತಿದರು. ಒಂದು ಶತಪಥದ ತುದಿಯು ಹಿತ್ತಲ ಬಾಗಿಲವರೆಗೆ ಹೋಯಿತು. ತಿರುಗಿ ಮುಂದಿನ ಬಾಗಿಲವರೆಗೆ ಬಂದರು. ಮತ್ತೆ ತಿರುಗಿದರು ಗುಣುವಂತಿಯು ಪಾತ್ರೆಗಳನ್ನು ತಿಕ್ಕುತ್ತಿದ್ದಳು. ಗುರುಗಳು ನೋಡಿದರು: ಅವಳ ಮುಂದಲೆಯ ಬಿಡಿಗೂದಲು ಕುರುಳು ಕುರುಳಾಗಿ ಹಣೆಯ ಮೇಲೆ ಕುಣಿಯುತ್ತಿದ್ದುವು. ಮೂಗಿನ ಮೇಲೆ ಬೆವುರು ಹನಿಗಳು ಮುತ್ತುಗಟ್ಟಿದುವು. ಎದೆಯ ಸೆರಗು ಓರೆಯಾಗಿದ್ದಿತು. ಕುಪ್ಪಸದ ಕೆಳಗಡೆಯ ತುಂಬಿದ ಬಲಮೊಲೆಯು ಸುಂದರವಾಗಿ ಕಾಣುತ್ತಿದ್ದಿತು. ಕೆಳಭಾಗದ ಕುಪ್ಪುಸದ ಅಂಚಿನಿಂದ ಹೊರಬಿದ್ದ ಕಡುಬಿನಾಕರದಿಂದ ವುರುಗಿಡುತ್ತಿದ್ದಿತು. ಹೊಲಸು ಹತ್ತಬಾರದೆಂದು ಸೀರೆಯನ್ನು ಏರಿಸಿ ಕುಳಿತಿದ್ದಳು. ಮೊಳಕಾಲಿನವರೆಗೆ ಕೇಶರಹಿತವಾದ ತೊಡೆಯು ಮನೋಹರವಾಗಿದ್ದಿತು. ಗುರುಗಳ ಒಮ್ಮೆ ನೋಡಿದರು. ಮತ್ತೊಮ್ಮೆ ಬಂದು ನೋಡಿದರು ಉತ್ಸಾಹವು ಬಿಸಿಬಿಸಿಯಾಯಿತು. ರಕ್ತ ಒತ್ತಡದಿಂದ ಹರಿಯ ಹತ್ತಿತು. ಆದರೆ ಹೃದಯವು ಒಂದೇ ಸಮನೆ ಹೊಡೆದುಕೊಳ್ಳುತ್ತಿ

ದ್ದಿತು. ಅಂಜಿಕೆಯನ್ನು ಕಳೆದುಕೊಂಡ ಮೇಲೆಯೇ ಮುಂದುವರಿಯುವ ಎಂಬ ಮಾತು ಹುಚ್ಚು—ಮದುವೆಯಂತಹ ಸಮಸ್ಯೆಯಾಗಿದ್ದಿತು. ಅದಕ್ಕೆ ಏನೊಂದು ಗಣಿಸದೆ ಇಂದು ಮುಂದಡಿಯಿಡುವ ಎಂದು ಸಂಕಲ್ಪಿಸಿದ್ದರು. ಗುಣವಂತಿಯು ಕೆಲಸವನ್ನು ಮುಗಿಸಿ ಪಾತ್ರೆಗಳನ್ನು ಒಣಗಲಿಕ್ಕೆ ಹಾಕಿ ಒಳಗೆ ಬಂದಳು. ಗುರುಗಳು ಹಸಿದು ಆಕೆಯನ್ನು ನೋಡಿದರು. ಅವಳು ಹಲ್ಲು ತೆಗೆದಳು.

"ಪಾತ್ರೆಗಳನ್ನು ಹಾಕಿರುವೆ." ಎಂದಳು.

"ಕೆಲಸವಾಯಿತೇ ?" ಎಂದು ಕೇಳಿದರು. ದನಿಯಲ್ಲಿ ಕಂಪನ ವಿದ್ದಿತು.

"ಮುಗಿಯಿತು." ಮುಖವನ್ನು ಒರಸಿಕೊಂಡಳು.

"ಇನ್ನಾವುದಿಲ್ಲವೇ ?"

"ಇನ್ನಾವುದಿರಬೇಕು ?"

"ನಾನು ಹೇಳುವೆ." ಗುರುಗಳು ಅಂಜಿಕೆಯನ್ನು ಕಳೆದುಕೊಂಡಿದ್ದರು.

"ಹೇಳಿರಿ." ಗುಣವಂತಿ ಕೌತುಕದಿಂದ ಗುರುಗಳನ್ನು ನೋಡಿದಳು.

ಗುರುಗಳು ಎದ್ದರು. ಕಾಲುಗಳು ಲಟಪಟಿಸುತ್ತಿದ್ದುವು. ಮುಖದ ಮೇಲೆ ಹುಚ್ಚು ಕಳೆಯು ಸುರಿಯುತ್ತಿದ್ದಿತು. ನಾಲಿಗೆಯು ಒಣಗಿ ಅಂಟು ಹಿಡಿದಿದ್ದಿತು. ಆದರೂ ತಡಬಡಿಸುತ್ತ ಮುಂದೆ ಸಾಗಿದರು.

"ಗುಣವಂತೀ...." ಎಂದು ಕೈಹಿಡಿದರು.

"ಇದೇನು ಗುರುಗಳೇ ?" ಗುಣವಂತಿ ನುಡಿದಳು.

"ನೀನು..." ಬೆರಳು ಬೆವುರಿನಿಂದ ಹಸಿಯಾಗಿದ್ದುವು.

"ನಾನು.... !"

"ಹೂ....ನೀನು...." ಎಂದು ಎಳೆದು ಕೊಳ್ಳ ಬಯಸಿದರು.

ಗುಣವಂತಿಯು ಆ ಸೆಳೆತದ ಮೊದಲೇ ಗುರುಗಳ ಅಪ್ಪುಗೆಯನ್ನು ಸೇರಿ ಕೊಳ್ಳಬೇಕೆಂದು ಮಾಡಿದ್ದಳು.

ಹೊರಗಿನ ಬಾಗಿಲನ ಮೇಲೆ ಯಾರೋ ಕಟಕಟ ಬಡಿದಂತಾಯಿತು. ಗುರುಗಳು ಕಕ್ಕಾಬಿಕ್ಕಿಯಾದರು. ಕೈಬಿಟ್ಟು ಕೋಣೆಗೆ ಹೋಗಿ ಅಡ್ಡಾದರು. ಗುಣವಂತಿಯು ಬಾಗಿಲನ್ನು ತೆರೆದಳು.

" ಗುರುಗಳಿಲ್ಲವೆ ? " ರಾಮಾಚಾರ್ಯರು ಕೇಳಿದರು.

" ಕೋಣೆಯಲ್ಲಿ ಮಲಗಿರುವರು." ಎಂದು ನುಡಿದಳು.

" ಎಲ್ಲಿ ? "

" ಅಲ್ಲಿ " ಎಂದು ಕೋಣೆಯಕಡೆಗೆ ಬೆರಳು ಮಾಡಿ ತೋರಿ ಮನೆಗೆ ಹೋದಳು.

" ದತ್ತಾ....ದತ್ತಾ...." ಎಂದು ಒದರುತ್ತಾ ರಾಮಾಚಾರ್ಯರು ಗುರುಗಳನ್ನು ಎಬ್ಬಿಸ ಹತ್ತಿದರು.

೬

ಮದುವೆಯ ಮುಹೂರ್ತವು ಇನ್ನೂ ದೂರವಿದ್ದಿತು. ಒಮ್ಮೆ ಕಲ್ಯಾಣಿಯು ತನ್ನ ಗೆಳೆಯರ ಸಂಗಡ ರಾಮತೀರ್ಥಕ್ಕೆ ಹೋಗಿದ್ದಳು. ಎಲ್ಲರು ದೇವರ ದರ್ಶನವನ್ನು ತೆಗೆದುಕೊಂಡು ಒಂದು ಗಿಡದ ಕೆಳಗೆ ವಿಶ್ರಮಿಸಿದರು. ಎಲ್ಲರ ಮುಖಗಳು ಬಿಸಿಲಿನ ಬೇಗೆಗೆ ಬಾಡಿದ್ದುವು. ಆದರೆ ಕಣ್ಣಲ್ಲಿಯ ಸಹ ಜತೆ ತಾರುಣ್ಯದ ಕಿಡಿಯು ಮಾಸಿರಲಿಲ್ಲ. ಸತೇಜವಾಗಿ ಕಾಣುತ್ತಿದ್ದುವು. ಸ್ವಾತಂತ್ರ್ಯತೆಯ ಸ್ವಚ್ಛಂದತೆ ಅಂಗಾಂಗಗಳಿಂದ ಪ್ರದಶನಗೊಳ್ಳುತ್ತಿದ್ದಿತು. ಮುಖಗಳು ಚೆಂಬಣ್ಣಕ್ಕೆ ತಿರುಗಿ ಸೌಂದರ್ಯದಲ್ಲಿ ಇನ್ನೂ ಹೆಚ್ಚಳವನ್ನು ತಂದಿದ್ದುವು. ಆ ಸೌಂದರ್ಯವು ಹರಿದು ಹೋಗಬಾರದೆಂದು ನೀರ ಹನಿಯ ಮುಸುಕು ಹಾಕಿದಂತೆ ಬೆವರಿನ ಜಾಳಿಗೆಯ ಬಳ್ಳಿ ಹಬ್ಬಿನಿಂತಿದ್ದಿತು. ಆದರೆ ಕಲ್ಯಾಣಿಯ ಮುಖದಲ್ಲಿ ಈ ಸಂತೋಷ, ಈ ಸ್ವಾತಂತ್ರ್ಯ, ಈ ಉತ್ಸಾಹ ಕಂಡು ಬರುತ್ತಿರಲಿಲ್ಲ. ಒಂದು ಬಗೆಯ ಗುಹೆಯ ಗಭೀರತೆಯನ್ನು ತೋರ್ಪಡಿಸುವಂತೆ ತುಂಬಿಕೊಂಡಿದ್ದಿತು. ಅವಳ ಈ ತಪ್ತಭಾವನೆಯನ್ನು ತೆಗೆದು ಹಾಕಬೇಕೆಂದು ಗೆಳತಿಯರು ಆಕೆಯನ್ನು ಆಗ್ರಹದಿಂದ ಕರೆದು ತಂದಿದ್ದರು. ಕಲ್ಯಾಣಿಯೂ ಅವರ ಒತ್ತಾಯಕ್ಕೇ ಬಂದಿದ್ದಳು. ಆದರೆ ಆ ಭಾವನೆಯು ಹೋಗಿರಲಿಲ್ಲ.

ಸಮೀಪದ ಝರಿಯಿಂದ ಕಾಲು ತೊಳೆದುಕೊಂಡು ಬಂದರು. ಕಟ್ಟಿ ತಂದ ಬಾದ್ಯವನ್ನು ಬಿಚ್ಚಿದರು. ಎಲೆಗಳನ್ನು ಹರಹಿದರು. ಕ್ರಮವಾಗಿ ಬಡಿಸಿಕೊಂಡರು. ಒಬ್ಬ ಚದುರೆ ಕೃಷ್ಣಾರ್ಪಣವೆಂದು ನುಡಿದು ಉಣ್ಣಲು ಅಪ್ಪಣೆಯನ್ನಿತ್ತಳು.

ಎಲ್ಲರು ನಗುತ್ತಾ ಮೊದಲಿನ ತುತ್ತಿಗೆ ಕೈಹಾಕಿದರು. ಕಲ್ಯಾಣಿಯು ಏನನ್ನೋ ವಿಚಾರಿಸುತ್ತಿದ್ದಳು.

“ ಏಕೆ ಕಲ್ಯಾಣಿ ಸುಮ್ಮನೆ ಕುಳಿತೆ ? ಕೃಷ್ಣಾರ್ಪಣವಾಗಿ ಬಹಳ ವೇಳೆಯಾಯಿತು.” ಚಕ್ಕುಲಿಯ ಚೂರನ್ನು ಬಾಯಿಗೆ ಹಾಕಿ ಕೊಳ್ಳುತ್ತ ಮಣಿಮಾಲ ನುಡಿದಳು.

" ಉಳಿದವರು ಎವೆಯಾಡಿಸದೆ ಕಲ್ಯಾಣಿಯ ಕಡೆಗೆನೋಡ ಹತ್ತಿದರು.

" ಇಲ್ಲ ಆರಂಭಿಸುತ್ತೇನೆ." ಎಂದು ಎಲೆಗೆ ಕೈಹಚ್ಚಿ ಕಲ್ಯಾಣಿಯು ಉತ್ತರಿದಳು.

" ನಿನ್ನ ಮನಸಿಗೆ ಸಂತೋಷವಾಗಲೆಂದೇ ನಾವು ಅಗ್ರಹದಿಂದ ಇಲ್ಲಿಗೆ ಕರೆದು ತಂದಿರುವೆವು. ನಗುತ್ತ ಇಂದಿನ ಒಂದು ಹೊತ್ತನ್ನಾದರೂ ಕಳೆಯ ಬಾರದೆ ? " ಇನ್ನೊಬ್ಬ ಗೆಳತಿಯಾದ ವಿನೋದಿನಿಯು ನುಡಿದಳು.

" ನಾನು ಸಂತೋಷದಿಂದಲೆ ಇಲ್ಲಿಯವರೆಗೆ ಬಂದಿರುವೆನು. ಕೃಷ್ಣಾರ್ಪಣದ ಬಾದ್ಯ ಸಾಗಲಿ." ಎಂದು ಉಂಡೆಯ ಚೂರನ್ನು ಬಾಯಿಗೆ ಹಾಕಿ ಕೊಂಡಳು.

ಮಾತುಗಳು ಹೀಗೆ ಬಾಯಿಂದ ಬರುತ್ತಿದ್ದರೂ ಅವಳ ಹೃದಯದ ಕೋಲಾಹಲವು ನೆರಳಿನಂತೆ ಹಿಂದೆನಿಂತು ಮುಖದ ಮೇಲಿನ ಗೆರೆಗಳಿಂದ ಕಂಡುಬರುತ್ತಿದ್ದಿತು. ಅದನ್ನು ಎಷ್ಟು ರೀತಿಯಿಂದ ಬಚ್ಚಿಟ್ಟುಕೊಳ್ಳಬೇಕೆಂದರೂ ಕಲ್ಯಾಣಿಗೆ ಸಾಧ್ಯವಾಗಿರಲಿಲ್ಲ. ಅದು ತನಗರಿಯದಂತೇ ತಿಳಿಯ ಪಡಿಸುತ್ತಿದ್ದಿತು.

" ಇನ್ನು ಹತ್ತುದಿನ ಉಳಿಯಿತಲ್ಲವೇ ? " ಪೂರ್ಣಿಮಾ ಕೇಳಿದಳು.

" ಏತಕ್ಕೆ ? " ಜಾಂಬುವತಿಯು ಮೂಗು ಏರಿಸಿ ತುತ್ತು ನುಂಗಿ ಪ್ರಶ್ನಿಸಿದಳು.

ಪೂರ್ಣಿಮಾ ಉತ್ತರಿಸದೆ ಸುಮ್ಮನೆ ಕುಳಿತಳು.

" ಆಕೆಗೆ ಉತ್ತರವನ್ನು ಹೇಳೆ ! " ವನಮಾಲ ಮುಂದಲೆಯ ಮೇಲೆ ಹಾರಾಡುವ ಕುರುಳುಗಳನ್ನು ತೀಡುತ್ತ ನುಡಿದಳು.

ಜಾಂಬುವತಿಯು ತನ್ನಿಂದ ಯಾವುದೋ ಅಪರಾದವಾದಂತೆ ಎಲ್ಲರನ್ನು ನೋಡಿದಳು.

" ಯಾರ ಮಾನಸ ಪೂಜೆಯನ್ನು ನಡೆಸಿರುವೆ ಜಾಂಬುವತಿ ?" ಪೂರ್ಣಿಮಾ ತನ್ನ ಮಾತಿಗೆ ಉತ್ತರವು ಬಾರದಿದ್ದರಿಂದ ಕೇಳಿದಳು.

" ಜಾಂಬುವತಿಗೆ ಪ್ರಶ್ನೆ ಇನ್ನೂ ಜಟಿಲವಾಯಿತು. ಪೂರ್ಣಿಮಾಳನ್ನು ನೋಡುತ್ತ—ಯಾರನ್ನು ಪೂಜಿಸುವುದೇ ? " ತಿಳಿಯದೆ ನುಡಿದಳು.

ಈಚರ್ಚೆ ದೂರದೂರ ಸಾಗುವುದೆಂದು ವನಮಾಲ ಸ್ಪಷ್ಟಪಡಿಸುವಂತೆ—

ಜಾಂಬುವತಿ, ಗಾಬರಿಯಾಗಬೇಡ. ಕಲ್ಯಾಣಿಯ ಮದುವೆ ಇನ್ನು ಹತ್ತು ದಿನ ಉಳಿದುವೆಂದು ಪೂರ್ಣಿಮಾ ನುಡಿದಳು. ನೀನು ಏನೆಂದು ಕೇಳಿದೆ? ಅದಕ್ಕೆ ನೀನು ಯಾವ ಗಂಡನನ್ನು ಆರಾಧಿಸುತ್ತಿರುವೆ? ಎಂದು ಪುನಃ ಪ್ರಶ್ನಿಸಿದಳು. ಇಷ್ಟೇ? ಎಂದು ನುಡಿದು ವಿಷಯಕ್ಕೆ ತಂದು ನಿಲ್ಲಿಸಿದಳು.

"ಅಹುದು ಹತ್ತು ದಿನ ಉಳಿಯಿತು." ಸುವಾಸಿನಿ ಮಾತು ಹೊಂದಿಸಿ ನುಡಿದಳು.

ಕಲ್ಯಾಣಿಯ ಮದುವೆ ಮಾತಿನ ಉಪೋದ್ಘಾತ ಹೀಗೆ ಸುತ್ತು ಸುತ್ತಾಗಿ ಬಂದು ನಿಂತಿತು.

ಕಲ್ಯಾಣಿಗಾದರೂ ಗೊತ್ತು. ತನ್ನ ಮದುವೆಯ ಚರ್ಚೆ ಒಂದಿಷ್ಟು ಬಿಸಿಯಾಗಿ ಸಾಗಬಹುದು, ಅವರು ಅನುಕೂಲ, ಪ್ರತಿಕೂಲದ ನೂರು ಪ್ರಶ್ನೆಗಳನ್ನು ಕೇಳಬಹುದು, ಅದರಲ್ಲಿ ತನ್ನ ತಂದೆ—ತಾಯಂದಿರು ವಹಿಸಿದ ಪಾತ್ರ, ತಾನು ಹೇಗೆ ಮತ್ತು ಏನುಮಾಡಬೇಕು, ಮದುವೆಯಾದ ಮೇಲೆ ಗಂಡನ ಮನೆಯಲ್ಲಿ ನಡೆಯುವ ರೀತಿ ಎಂತು, ಆ ಇಳಿ ವಯಸ್ಸಿನ ಗಂಡನ ಸಂಗಡ ತನ್ನ ಆಶೆ—ಆಕಾಂಕ್ಷೆಗಳು, ರುಚಿ—ಅರುಚಿಗಳು ಹೊಂದಿಕೆಯಾಗಬಹುದೇ? ತನ್ನ ವಯಸ್ಸಿನಷ್ಟು ಸವತಿಯ ಮಗನಿರುವನು ಅವನ ಸಂಗಡ ಹೇಗೆ ನಡೆಯಬೇಕು. ತನ್ನ ಭಾವೀ ಆಯುಷ್ಯದಲ್ಲಿ ಸವಿಯಾದ ಸಂಗತಿಗಳಾವುವು, ವಿಷ ನಿಮಿಷಗಳಾವುವು, ಅವುಗಳನ್ನು ಹೇಗೆ ಪರಿಹರಿಸಿಕೊಳ್ಳಬೇಕು, ಕಣ್ಣೀರು ಎಷ್ಟು ದಿನ ಹರಿಸಬೇಕು, ತಲೆಯನ್ನು ಎಷ್ಟು ದಿನ ಜಜ್ಜಿಕೊಳ್ಳಬೇಕು.‹ ಓರಗೆಯವರು ಕೇಳಿದರೆ ಏನು ಹೇಳಬೇಕು, ಇದರಲ್ಲಿ ದೈವದ ಒಳಸಂಚುಎಷ್ಟು.... ಇತ್ಯಾದಿಗಳನ್ನು ಕಳೆದ ಅನೇಕ ದಿನಗಳಿಂದ ವಿಚಾರಿಸಿಕೊಂಡು ಒಂದು ನಿರ್ಧಾರಕ್ಕೆ ಬರುವ ಸಿದ್ಧತೆಯಲ್ಲಿದ್ದಳು. ಅವನ್ನ ತರ್ಕ, ಪ್ರಮಾಣ, ನಿರ್ಧಾರಗಳ ಹೊರೆಯನ್ನು ಈ ಗೆಳತಿಯರ ಎದುರಿಗೆಇಟ್ಟು ಪರಾಮರ್ಶೆಯನ್ನು ಅರಿತುಕೊಳ್ಳಬೇಕು ಎಂಬ ಆಶೆಯಿಂದಲೇ ಬಂದಿದ್ದಳು. ಅದರಿಂದ ಅವರು ಎತ್ತಿದ ಪ್ರಶ್ನೆಯು ಆಕೆಗೆ ಸಂಕೋಚ, ನಾಚಿಕೆ ಲೋಕ ಲಜ್ಜೆಯನ್ನು ತಂದು ಕೊಡಲಿಲ್ಲ. ಉತ್ತರವನ್ನು ಹೇಳಲು ಸಿದ್ಧಳಾಗಿದ್ದಳು. ಮನದಲ್ಲಿ ಬತ್ತಿ ಬತ್ತಿ ತುಂಬಿಕೊಂಡ ಸಂಗತಿಗಳನ್ನು ಹೊರಗೆಹಾಕಲು ಒಂದು ಪ್ರಸಂಗವು ದೊರಕಿತೆಂದು ಸಂತೋಷ ಸಮಾಧಾನವಾಯಿತು. ಬಿಗಿದು ನಿಂತ ಸ್ನಾಯುಗಳಿಗೆ

ಶ್ಶಥಿಲ್ಯವೆನಿಸಹತ್ತಿತು.

“ಮನಸ್ಸಿಗೆ ಬಾರದವನ ಸಂಗಡ ಮದುವೆಯನ್ನು ಮಾಡಿಕೊಳ್ಳುವುದು ಅಥವಾ ಮಾಡಿಕೊಡುವುದು ಅನ್ಯಾಯವಲ್ಲವೇ ?” ಮಣಿಮಾಲಾ ನುಡದು ಪ್ರಸಂಗಕ್ಕೆ ಚಾಲನೆಯನ್ನು ಕೊಟ್ಟಳು

“ಈ ಅನ್ಯಾಯದಲ್ಲಿ ಯಾರ ಹೊಣೆಯು ಎಷ್ಟೆಂದು ನಿರ್ಣಯಿಸಿ ಈ ಮಾತನ್ನು ಗಟ್ಟಿಪಡಿಸಿದರೆ ಸರಿ.” ವನಮಾಲಾ ನುಡಿದಳು.

“ನಿರ್ಣಯಿಸುವ ಶ್ರಮವೇಕೆ ? ಕನ್ನಡಿಯಂತೆ ಸ್ಪಷ್ಟವಿದೆ.” ಜಾಂಬುವತಿ ನುಡಿದಳು.

“ಜಾಂಬುವತಿಯ ಮಾತು ಸರಿಯಾದುದು. ಕಲ್ಯಾಣಿಯ ತಂದೆ-ತಾಯಂದಿರೇ ಕಾರಣರೆಂದು ನಾನು ತಿಳಿಯುವೆ. ಸ್ಪಷ್ಟವಾಗಿ ನುಡಿದುದಕ್ಕೆ ನೀನು ಸಿಟ್ಟಾಗಬೇಡ.” ಮಣಿಮಾಲಾ ಕಲ್ಯಾಣಿಯ ಕಡೆಗೆ ಮುಖಮಾಡಿ ನುಡಿದಳು.

“ಏನಿಲ್ಲ. ನಾನೇಕೆ ಸಿಟ್ಟಾಗಬೇಕು ?” ಕಲ್ಯಾಣಿಯೆಂದಳು.

“ಇದರಲ್ಲಿ ಕಲ್ಯಾಣಿಯ ತಪ್ಪೇ ಬಹಳ.” ಪೂರ್ಣಿಮಾ ಗಟ್ಟಿಯಾಗಿ ಮಾತಾಡಿದಳು.

“ಏಕೆ ?” ಜಾಂಬುವತಿ ಕೇಳಿದಳು.

“ತಂದೆಯವರು ಯಾವುದೇ ವರನನ್ನು ಆರಿಸಲಿ. ಕೊನೆಯ ಒಪ್ಪಿಗೆಯನ್ನು ಮದುವೆಯನ್ನು ಮಾಡಿಕೊಳ್ಳುವ ವಧುವೇ ಕೊಡಬೇಕಷ್ಟೇ! ಒಲ್ಲೆಂದು ಹೇಳಿದರೆ ಕಂಬಕ್ಕೆ ಕಟ್ಟಿಹಾಕಿ ಅಕ್ಷತೆಯನ್ನು ಯಾರೂ ಹಾಕಲಾರರು.” ಪೂರ್ಣಿಮಾ ಅಭಿಪ್ರಾಯವನ್ನಿತ್ತಳು.

“ಹಾಕುವರು. ಹಾಗೆ ಮಾಡಿದ ಪಾಲಕರೂ ಉಂಟು.” ಜಾಂಬುವತಿ ನುಡಿದಳು.

ಉಳಿದವರು ಸುಮ್ಮನೆ ಕುಳಿತರು.

“ನಮ್ಮ ನೆರೆಮನೆಯ ಒಕ್ಕಲಿಗ ಕೆಂಚಪ್ಪ ಎಮ್ಮೆ-ಆಕಳುಗಳನ್ನು ಮಾರಿ ಮನೆ ಕೊಂಡ. ಗುರಪ್ಪ ಕುಲಕರ್ಣಿಯವರು ಮಗಳನ್ನು ಮಾರಿ ತನಗಾದ ಸಾಲವನ್ನು ತೀರಿಸಿಕೊಂಡರು. ಹೆಣ್ಣುಮಕ್ಕಳನ್ನು ಪ್ರಪಂಚದ ಸಾಧನಗಳನ್ನು ಮಾಡಿಕೊಳ್ಳುವ ಪಾಲಕರು ಇಂದಿಗೂ ಉಂಟು.” ಜಾಂಬು

ವತಿಯು ತನ್ನ ಮಾತನ್ನು ಸಮರ್ಥಿಸಿಕೊಳ್ಳಲು ಕೆಲವು ಉದಾಹರಣೆಗಳನ್ನು ಕೊಟ್ಟಳು.

"ಕಲ್ಯಾಣಿಯನ್ನು ಅವರ ತಂದೆಯವರು ಮಾರಿಕೊಂಡಿಲ್ಲ." ವನ ಮಾಲಾ ನುಡಿದಳು.

"ನಾನು ಹಾಗೆ ಹೇಳುವುದಿಲ್ಲ. ಕೆಲವು ಪಾಲಕರ ಸ್ವಭಾವವನ್ನು ಹೇಳಿದೆ. ಇಂಥ ಪ್ರಸಂಗಗಳಲ್ಲಿ ಕಲ್ಯಾಣಿಯೇ ಧೈರ್ಯವನ್ನು ವಹಿಸಬೇಕು."

"ಒಳ್ಳೇದು. ಕಲ್ಯಾಣಿ ಇಲ್ಲೆಂದಳು. ಮುಂದೇನು?"

"ಬೇರೊಬ್ಬನನ್ನು ಹುಡುಕುದರು."

"ಹುಡುಕುವ ಕೆಲಸವನ್ನು ಹಿರಿಯರಿಗೇ ಒಪ್ಪಿಸಬೇಕಷ್ಟೇ?" ಜಾಂಬುವತಿಯು ಕೇಳಿದಳು.

"ಅಹುದು. ಇದು ನಮ್ಮ ರೂಢಿ- ನಮ್ಮ ಸಂಸ್ಕೃತಿ."

"ಇವುಗಳನ್ನು ನಂಬಿದ ಮೇಲೆ ಉಳಿದವುಗಳನ್ನೂ ನೀನು ನಂಬ ಬೇಕು." ಮಣಿಮಾಲಾ ಕೇಳಿದಳು.

ಮಾತು ತಿಳಿಯಲಿಲ್ಲ. ಪೂರ್ಣಿಮಾ ಸುಮ್ಮನೆ ಕುಳಿತಳು. ಕೊನೆಗೆ —ಅಂದರೇನು? ಎಂದಳು.

"ಪಾತಿವೃತ್ಯ! ಗಂಡನೇ ಪರದೈವ! ದೇವರು ಮಾಡಿಸಿದಂತೆ ಆಗು ವುದು. ಬೇಡಿಕೊಂಡು ಬಂದಷ್ಟೇ ಸಿಕ್ಕುವುದು....ಇತ್ಯಾದಿ....ಏನೆಂದೆ?"

"ಹ! ಒಂದು ಮಾತು. ವ್ಯಕ್ತಿತ್ವ ನಷ್ಟವಾಗುವ ಸಮಯದಲ್ಲಿ ನಾವು ತಲೆಯೆತ್ತಿ ಇದು ಅಲ್ಲ? ಇದು ಹೀಗಾಗಬಾರದು! ಎಂದು ನುಡಿಯುವ ಸಾಮರ್ಥ್ಯವನ್ನಾದರೂ ಇಟ್ಟುಕೊಳ್ಳಬೇಕು. ಅದನ್ನು ಕಳೆದು ಕೊಂಡರೆ ಪಾಲಿಗೆ ಬಂದದ್ದೇ ಪಂಚಾಮೃತವೆಂದು ತಿಳಿದು ದಿನ ಕಳೆಯಬೇಕು. ನನ್ನ ವಾದದಲ್ಲಿ ಅದನ್ನು ಜಾಗೃತವಾಗಿ ಇಟ್ಟುಕೊಂಡು ನಡೆಯಬೇಕೆಂದು ಹೇಳುವೆ. ಇಷ್ಟೇ!" ಪೂರ್ಣಿಮಾ ಹೇಳಿದಳು.

"ಇಲ್ಲಿ ಕಲ್ಯಾಣಿಯ ವ್ಯಕ್ತಿತ್ವವೇನು?"

"ಅದು ಅವಳಿಗೆ ಗೊತ್ತು. ಈ ಪ್ರಸಂಗವು ನಿನ್ನ ಮೇಲೆ ಬಂದಿದ್ದರೆ ನೀನು ಏನು ಮಾಡಬಹುದಿದ್ದಿತು?" ಎಂದು ಕಳ್ಳನಗೆಯಿಂದ ಕೇಳಿದಳು.

"ನೀನು ಹೇಳು."

" ನಿನ್ನದನ್ನು ನಾನು ಹೇಗೆ ಹೇಳಲಿ ? "

" ನನ್ನದಲ್ಲ. ಈ ಪ್ರಸಂಗದಲ್ಲಿ ನೀನೇ ಸಿಕ್ಕಿರುವೆ ಎಂದು ತಿಳಿ."

" ಓ ! ನೋಡಬಂದವರ ಮುಖದ ಮೇಲೆ ನೀರು ಇಳಿಸುತ್ತಿದ್ದೆ. ತಂದೆ-ತಾಯಂದಿರಿಗೆ ಛೀ ಹಾಕುತ್ತಿದ್ದೆ." ಎಂದು ನಗುತ್ತ ನುಡಿದಳು.

ಈ ಮಾತುಗಳು ಕಲ್ಯಾಣಿಗೆ ಸರಿ ಬರಲಿಲ್ಲ. ತನ್ನ ನೋವಿನ ಸಂಗತಿಯನ್ನು ಈ ರೀತಿಯಿಂದ ಹರಟೆಗೆ ಎಳೆಯುತ್ತ ನಡೆದುದು ವಿಷಾದವನ್ನುಂಟು ಮಾಡಿತು. ಅಲ್ಲದೇ ತಂದೆ-ತಾಯಂದಿರನ್ನು ಹಳಿದುದು ಸ್ವಲ್ಪ ಕೋಪಕ್ಕೆ ಕಾರಣವಾಯಿತು. ಎತ್ತಿದ ವಿಷಯವು ತನ್ನದೇ ಆದುದರಿಂದ ಒಂದೆರಡು ಮಾತುಗಳನ್ನು ತಾನೂ ನುಡಿಯುವುದು ಸರಿಯೆಂದು ಸಿದ್ಧಳಾಗಿ-"ಪೂರ್ಣಿಮಾ ನಿನ್ನ ಮಾತುಗಳು ನನಗೆ ಧೈರ್ಯವನ್ನು ತಂದು ಕೊಡುತ್ತವೆ. ಆದಕ್ಕೆ ನಾನೂ ಒಂದೆರಡು ಮಾತುಗಳನ್ನು ಆಡುವೆ." ಎಂದಳು.

" ನಾವು ಮೊದಲಿನಿಂದಲೂ ಇದನ್ನೇ ಆಶಿಸುತ್ತಿರುವೆವು. ಏನು ಹೇಳು." ಪೂರ್ಣಿಮಾ ಕೇಳಿದಳು.

" ನಿನ್ನನ್ನು ೮-೧೦ ಜನರಿಗೆ ತೋರಿಸಿದರು. ಅಹುದೇ ಪೂರ್ಣಿಮಾ ?" ಕಲ್ಯಾಣಿ ಕೇಳಿದಳು.

ಪೂರ್ಣಿಮಾ ನಾಚಿಕೊಂಡಳು.

" ಅಹುದೋ ಅಲ್ಲವೋ ಹೇಳು. ಇಲ್ಲಿ ನಮಗೆ ಸಂಕೋಚ, ನಾಚಿಕೆ ಯೇಕೆ ? ಮೊದಲು ನೋಡಿದವನೇ ಗಂಡನಾಗುವನು ಎಂದು ಯಾವ ಹೆಂಗಸೂ ಹಣೆಯ ಬರಹದಲ್ಲಿ ಬರೆದುಕೊಂಡು ಬಂದಿರುವುದಿಲ್ಲ. ಹತ್ತಿಪ್ಪತ್ತು ಜನ ಗಂಡಸರ-ತರುಣರ ಕಣ್ಣಲ್ಲಿ ನಾವು ಮೂಡಬೇಕು. ಅವರಲ್ಲಿ ಒಬ್ಬನು ಹ ! ಈಕೆಯು ಪಾಸ್ ! ಎಂದು ನುಡಿಯುವನು." ಕಲ್ಯಾಣಿಯು ಮಾತನ್ನು ನಿಲ್ಲಿಸಿದಳು.

" ಹ ! ಮುಂದೆ ! " ಪೂರ್ಣಿಮಾ ನಗುತ್ತ ಸಮ್ಮತಿಸಿದಳು.

" ಹತ್ತು ಜನರ ಕಣ್ಣಲ್ಲಿ ನಾಪಾಸ್ ಆದ ನಾವು ಹನ್ನೊಂದನೆಯವನಿಗೆ ಪಾಸು ಬೀಳುತ್ತೇವೆ. ಮೊದಲಿನವರ ಪರೀಕ್ಷೆಯ ವಸ್ತು ನಾವೇ! ಹಿಂದಿನವನ ಪರೀಕ್ಷೆಯ ವಸ್ತುವೂ ನಾವೇ ! ಹಲವರಿಗೆ ನಾಪಾಸ್ ಆದವಳು ಕೊನೆಯವನಿಗೆ ಪಾಸಾಗುವುದು ಚೋದ್ಯವಲ್ಲವೇ ? "

ಎಲ್ಲರು ಸುಮ್ಮನೆ ಕುಳಿತರು. ಕಲ್ಯಾಣಿಯ ಮಾತುಗಳು ವಿಚಿತ್ರ ವೆನಿಸಿದುವು.

" ಈಗ ಕೆಲ ದಿನಗಳ ಹಿಂದೆ ನೋಡ ಬಂದವನು ನಿನ್ನ ಮೂಗು ದೊಡ್ಡದೆಂದು ಬಿಟ್ಟನು ಎಂದು ಕೇಳಿರುವೆ......"

" ಇದೇನು ಕಲ್ಯಾಣಿ ! " ಪೂರ್ಣಿಮಾ ತಡೆದು ಕೇಳಿದಳು.

" ಕೆಲವು ಮಾತುಗಳನ್ನು ಹೇಳುವೆ. ಸಿಟ್ಟಾಗಬೇಡ. ನನ್ನ ವಿಚಾರವು ಸರಿಯೋ, ಅಲ್ಲವೋ ನೀವೇ ತಿಳಿದು ನೋಡಿರಿ........"

" ಆಗಲಿ. ಹೇಳು." ಜಾಂಬುವತಿ ನುಡಿದಳು.

" ಹ ! ಆ ನೋಡ ಬಂದವನು ನಿನ್ನನ್ನು ಹೆಂಡತಿಯೆಂದು ಸ್ವೀಕರಿಸಿದ್ದರೆ ನಿನ್ನ ಮೂಗು ಅವನ ಪ್ರಪಂಚಕ್ಕೆ ಯಾವ ಅಡ್ಡಿಯನ್ನು ಒಡ್ಡುತ್ತಿರಲಿಲ್ಲ. ಒಂದಿಷ್ಟು ದೊಡ್ಡ ಮೂಗಿನಿಂದ ಹೆಣ್ಣೇ ನಾಪಾಸ್ ಎನ್ನುವುದು ಗಂಡಿನ ಕಣ್ಣಲ್ಲಿಯ ಎಂಥ ದೋಷ ! ಜಾಂಬುವತಿಯು ಒಂದಿಷ್ಟು ದಪ್ಪೆಂದು ಹೋದ ತಿಂಗಳು ನೋಡ ಬಂದವನು ಹೆಸರಿಟ್ಟು ತ್ಯಜಿಸಿದನು. ದೇಹವು ದಪ್ಪವಾಗಿರುವುದು ಯಾರ ತಪ್ಪು ? ವನಮಾಲಾ ಬಡಕಳೆಂದು ಬಿಡಬೇಕಾಯಿತು. ಮಣಿಮಾಲಾ ಕುಳ್ಳಿ ಎಂದು ನಾಪಾಸ್ ಆದಳು. ಗಂಡು ಹೆಣ್ಣಿನ ಪರೀಕ್ಷೆಯಲ್ಲಿ ಎಷ್ಟೆಷ್ಟು ವಿಷಯಗಳ ಪಟ್ಟಿಯನ್ನು ಬರೆದುಕೊಂಡು ಬಂದಿರುವುದೋ ! ನಮಗೆ ಹೇಗೆ ತಿಳಿಯಬೇಕು ! ಹೋಗಲಿ. ಒಂದು ವೇಳೆ ಅವನ ಕಣ್ಣಲ್ಲಿ ನಾವು ಪಾಸಾದರೂ ನಾವು ಅವನನ್ನು ಪರೀಕ್ಷಿಸಿದ್ದೇನು ? ಒಂದು ಕ್ಷಣದ ನೋಟದಲ್ಲಿ ಅವನ ಅಂತರಂಗ—ಬಹಿರಂಗವನ್ನು ತಿಳಿಯಬಹುದೇ ? ಈ ನಾಚಿಕೆಯ ಆವರಣದಲ್ಲಿ ಆಕ್ಷಣದ ಪ್ರಸಂಗಕ್ಕೂ ಎರವಾಗುತ್ತೇವೆ. ಹಿರಿಯರು ಹೇಳಿದ ಅಲ್ಪ ಪರಿಚಯವನ್ನೇ ನಂಬಿ ಮದುವೆಯಾಗುವೆವು. ಆ ನಂಬಿಕೆಯು ಸತ್ಯವಿದ್ದರೆ ಒಳ್ಳೆಯದು. ಸುಳ್ಳಾದರೆ ದೇವರೇ ನಮ್ಮನ್ನು ರಕ್ಷಿಸಬೇಕು. ಅಹುದೇ ? " ಎಂದು ಪ್ರಶ್ನಿಸಿದಳು.

" ಅಹುದು." ಪೂರ್ಣಿಮಾ ನುಡಿದಳು.

" ಹಾಗಾದರೆ ನಮ್ಮ ವ್ಯಕ್ತಿತ್ವದ ಗತಿಯೇನು ? "

" ಉಳಿಯಲಿಲ್ಲ. ಅದಕ್ಕೇ ನಾನು ನಮ್ಮ ವ್ಯಕ್ತಿತ್ವದ ರಕ್ಷಣೆಯನ್ನಿಟ್ಟುಕೊಂಡು ನಡೆಯಬೇಕು ಎಂದು ಹೇಳುವುದು." ಎಂದು ಪುನಃ ತನ್ನ ಮೊದ

ಲಿನ ಮಾತನ್ನು ನುಡಿದಳು.

"ಇನ್ನೊಂದು. ನಮ್ಮನ್ನು ನೋಡ ಬಂದ ೮–೧೦ ಜನರಲ್ಲಿ ೪-೫ ಜನರಾದರೂ ಒಳ್ಳೆಯವರಿರುವರು. ಮನಸ್ಸು ಅವರ ಕಡೆಗೆ ಎಳೆಯುತ್ತಿರುವುದು. ಆದರೆ ಅವರ ಕಣ್ಣಲ್ಲಿ ನಾವು ತ್ಯಾಜ್ಯರು. ಇದರ ಬೆಲೆಯೇನು? ಒಟ್ಟು ಹೆಣ್ಣಿನ ಇಚ್ಛೆಯಂತೆ ಗಂಡನು ಸಿಕ್ಕುವುದೇ ಇಲ್ಲ. ಗಂಡು ನಮ್ಮನ್ನು ಆರಿಸಿಕೊಳ್ಳುವುದು. ಅವನ ಆರಿಸುವಿಕೆಯ ರುಚಿಯಲ್ಲಿ ನಮ್ಮ ವ್ಯಕ್ತಿತ್ವವನ್ನು ತೇಲಿಸಿ, ಸಮರಸ ಮಾಡಿ ಸೇರಿಕೊಂಡು ನಡೆಯಬೇಕು."

"ಇಲ್ಲ. ಇಲ್ಲ. ಹೀಗಾಗದು. ಈ ಮಾತಿಗೆ ನಾನು ಎಂದಿಗೂ ಒಪ್ಪಲಾರೆ." ಪೂರ್ಣಿಮಾ ಪ್ರತಿಭಟಿಸಿದಳು.

"ಇದು ಅವಮಾನದ ಸಂಗತಿಯೇನೋ ಸರಿ. ಆದರೆ ದಿನಗಳು ವರುಷಗಳು ನಮ್ಮ ಪಾಲಿಗೆ ಹೀಗೆಯೇ ಸರಿಯುತ್ತವೆ. ನಾವು ನಮ್ಮ ಹಳೆಯ ಸಂಸ್ಕೃತಿಯನ್ನು ಬಿಡುವುದಿಲ್ಲ. ಹೊಸ ಸಂಸ್ಕಾರಕ್ಕೆ ಅಂಟಿಕೊಂಡಿಲ್ಲ. ಈ ಮಧ್ಯಂತರ ಕಾಲದಲ್ಲಿರುವೆವು. ವ್ಯಕ್ತಿತ್ವವಿದೆ ಎಂದು ನುಡಿಯ ಬಯಸುವೆವು. ಅದೇನು? ಅರಿಯಲಾರೆನು."

"ಅದೇಕೆ? ಜೀವನದಲ್ಲಿ ಇಬ್ಬರೂ ಸಮಾನರು. ಪ್ರಪಂಚರಥದ ಎರಡು ಚಕ್ರಗಳೆಂದರೆ ಗಂಡ ಹೆಂಡಿರು. ನಮ್ಮ ರಾಷ್ಟ್ರ ಹೇಳುತ್ತದೆ. ಜನರು ನಂಬುತ್ತಾರೆ. ಇಬ್ಬರಿಗೂ ಸಮಾನವಾದ ರಾಜ್ಯಸೂತ್ರಗಳಿವೆ. ಒಂದೇ ನ್ಯಾಯವಿದೆ. ಇಂದಿನ ಹೊಸ ಕಾಲದಲ್ಲಿ ಆ ಮಾತು ಹುಚ್ಚರ ಮಾತೆಂದು ನುಡಿಯಬಹುದು........"

"ಅಹುದು. ನಮ್ಮ ರಾಷ್ಟ್ರ ಸಮಾನವೆಂದು ಹೇಳಿದೆ. ಆದರ ಪ್ರತೀತವೂ ಒಂದೆಡೆಗೆ ಕಂಡು ಬಂದಿದೆ."

"ಏನು?" ವನಮಾಲಾ ಕೇಳಿದಳು.

"ಇಲೆಕ್ಷನ್ ಕಾಲದಲ್ಲಿ ಮತಗಳನ್ನು ಕೊಡಲು ಗಂಡು ಹೆಣ್ಣಿಗೆ ಸಮಾನ ಅಧಿಕಾರವಿದೆ. ಮತದ ಯಾದಿಯಲ್ಲಿ ಗಂಡಸರಷ್ಟೇ ಹೆಂಗಸರಿಗೂ ಮತಗಳಿರುತ್ತವೆ. ಇಲೆಕ್ಷನ್ನಿನಲ್ಲಿ ನಿಮ್ಮ ತಂದೆ–ತಾಯಂದಿರಿಬ್ಬರಿಗೂ ಮತವಿದ್ದಿತು...."

ಎಲ್ಲರೂ ನಗಹತ್ತಿದರು.

"ಆದರೆ ನಿಮ್ಮ ತಂದೆ ಕೊರೆ ಎಂದಲ್ಲಿ ನಿಮ್ಮ ತಾಯಿಯು ಕೊರೆದಳು.

ಇನ್ನೊಂದು ಮಾತು. ನಮ್ಮ ಭಾರತದ ಇತಿಹಾಸವನ್ನು ನಿನ್ನ ಕೈಯಲ್ಲಿ ಕೊಡುವೆ. ಎರಡು ಬಿಳಿಯ ಕಾಗದಗಳನ್ನೂ ಕೊಡುವೆ. ಅದರಲ್ಲಿಯ ಗಂಡಸರ ಹೆಸರನ್ನು ಒಂದು ಕಾಗದದಲ್ಲಿ, ಹೆಂಗಸರ ಹೆಸರನ್ನು ಇನ್ನೊಂದು ಕಾಗದದಲ್ಲಿ ಬರೆ. ಯಾರ ಹೆಸರು ಹೆಚ್ಚಾಗುವುವು ?"

"ಗಂಡಸರ ಹೆಸರೇ ಹೆಚ್ಚು."

"ಈ ಆರೇಳು ಸಾವಿರದ ವರುಷಗಳಿಗೆ ಮಾನವ ಜನಾಂಗವನ್ನು ಒದಗಿಸಿ ಕೊಟ್ಟವಳು ಹೆಂಗಸಿದ್ದರೂ ಇತಿಹಾಸದಲ್ಲಿ ಅವರು ೧೦-೨೦ ಜನರಿಗಿಂತಲೂ ಕಡಿಮೆಯಾಗಿ ನಿಂತಿರುವರು. ಸ್ತ್ರೀಯರನ್ನು ಇಷ್ಟು ಕೀಳುಭಾವನೆಯಿಂದ ಕಾಣುವ ಪುರುಷ ಸಮಾಜಕ್ಕೆ ನಾವು ಏನೆನ್ನಬೇಕು ?" ಕಲ್ಯಾಣಿಯು ಮಾತು ಮುಗಿಸಿದಳು.

ಅವಳ ಪ್ರತಿಪಾದನೆ ರಮ್ಯವೆನಿಸಿತು. ಎಲ್ಲರು ಬೆಕ್ಕಸ ಬೆರಗಾಗಿ ಕುಳಿತರು. ಕೆಲ ಹೊತ್ತು ಮೌನದಲ್ಲಿ ಕಳೆಯಿತು.

"ಹಾಗಾದರೆ ನೀನು ಆ ಇಳಿವಯಸ್ಸಿನ ಗುರುಗಳನ್ನೇ ಒಪ್ಪಿಕೊಂಡೆಯಾ ?" ಪೂರ್ಣಿಮಾ ಕೇಳಿದಳು.

"ಒಪ್ಪದೇನು ಮಾಡಲಿ ! ನನಗೆ ವ್ಯಕ್ತಿತ್ವವಿಲ್ಲ. ವ್ಯಕ್ತಿತ್ವದ ಕುದುರೆಯನ್ನು ಮುಂದೆ ನೂಕಿದರೆ ತಂದೆಯವರು ಅವಮಾನವನ್ನು ಹೊಂದುವರು. ತಾಯಿಗೆ ವ್ಯಥೆಯಾಗುವುದು. ಉಭಯತರಿಗೆ ಗೋಳು ಹೊಯ್ದು ನಾನು ಬೇರಾರನ್ನು ಹುಡುಕಲಿ ? ನಮ್ಮ ಪರಂಪರೆ ನಮ್ಮನ್ನು ಕಟ್ಟಿಹಾಕಿದೆ." ಎಂದು ವಿಷಾದದಿಂದ ನುಡಿದಳು.

"ನಿನ್ನ ಹಿತವನ್ನು ನಾವು ಬಯಸುವೆವು ಕಲ್ಯಾಣಿ. ನೀನು ಹೇಗಾದರೂ ಸರಿ ಆ ಗುರುಗಳನ್ನು ಸೇರಬಾರದೆಂದು ದೇವರಲ್ಲಿ ಪ್ರಾರ್ಥಿಸುವೆವು. ನಾನು ಕಾಯಿಯನ್ನು ಒಡೆಸುವ ಮುಂದೆ ಇದನ್ನೇ ಬೇಡಿಕೊಂಡೆ." ಎಂದು ಪೂರ್ಣಿಮಾ ಒಂದಿಷ್ಟು ಜಡವಾದ ದನಿಯಿಂದ ನುಡಿದಳು.

"ನಾವು ಇಲ್ಲಿ ಬಂದುದು ಇದಕ್ಕಾಗಿಯೇ. ನಿನ್ನ ಈ ವಿಷಮ ವಿವಾಹವನ್ನು ತಪ್ಪಿಸಬೇಕು. ದೇವರು ಯಾವುದಾದರೊಂದು ವಿಘ್ನವನ್ನೊಡ್ಡಿ ಇದನ್ನು ಮುರಿಯಬೇಕು ಎಂದು ಬಯಸುವೆವು." ಪೂರ್ಣಿಮಾ ನುಡಿದಳು.

"ಮನಸ್ಸನ್ನು ಈ ವರೆಗೆ ಹೇಗೂ ಗಟ್ಟಿಮಾಡಿಕೊಂಡಿದ್ದೆ. ಆದರೆ

ನನ್ನ ಗೆಳತಿಯರ ಈ ಮಾತುಗಳು ನನ್ನ ದುಃಖಸಾಗರದಲ್ಲಿ ಹೊಸ ಹೊಸ ತೆರೆಗಳನ್ನು ಎಬ್ಬಿಸುವುವು. ನನಗೆ ಅತೀವ ದುಃಖವಾಗುವುದು." ಎಂದು ಹತ್ತಿರ ಕುಳಿತ ಪೂರ್ಣಿಮಾಳ ತೊಡೆಯ ಮೇಲೆ ಮುಖ ಚೆಲ್ಲಿ ಅಳಹತ್ತಿದಳು.

ಮಿಕ್ಕವರು ವಿಷಾದದಿಂದ ಅವಳನ್ನು ನೋಡಹತ್ತಿದರು.

"ಕಲ್ಯಾಣಿ, ಇದನ್ನು ಮುರಿದು ಹಾಕಲು ಸಾಧ್ಯವಿಲ್ಲವೇ?" ವನಮಾಲಾ ಕೇಳಿದಳು.

"ಇಲ್ಲ. ಎಲ್ಲ ಮುಗಿದಿದೆ. ತಂದೆಯವರು ನಿಶ್ಚಯವನ್ನು ಮಾಡಿರುವರು."

"ನೀನು ಹಟಹಿಡಿಯಬಾರದೇ?"

"ಅದೆಲ್ಲವಾಯಿತು."

"ನಿನ್ನ ತಾಯಿಗೆ ಹೇಳಿ ನೋಡು."

"ಅವಳು ಪಾತಿವ್ರತ್ಯದ ಶಿರೋಮಣಿ. ತಂದೆಯವರ ಮಾತಿನ ಹೊರಗೆ ಒಂದು ಹೆಜ್ಜೆ ಇಡಲಾರಳು."

"ಇನ್ನೊಮ್ಮೆ ಪ್ರಯತ್ನಿಸು."

"ಉಳಿದ ಪ್ರಯತ್ನ ಯಾವುದು?"

"ಅಂದಿನ ದಿನವನ್ನು........"

"ಅಂದರೆ! ಆ ಪೂರ್ವದಲ್ಲಿ ಯಾರ ಜೊತೆಯಾದರೂ ಓಡಿಹೋಗಬೇಕೆನ್ನುವೆಯಾ?"

"ಹಾಗೇನಿಲ್ಲ. ನಾನು ಹಾಗೆ ಅನ್ನಲಾರೆನು." ಪೂರ್ಣಿಮಾ ಗಾಬರಿಯಿಂದ ನುಡಿದಳು.

"ಉಳಿದುದು ಇದೊಂದೇ ಮಾರ್ಗ. ಆದರೆ ಇದರಲ್ಲಿ ನನ್ನ ನಂಬಿಕೆಯಿಲ್ಲ."

"ಏಕೆ?" ಮಣಿಮಾಲಾ ಕೇಳಿದಳು.

"ಓಡಿ ಬಂದ ಹೆಣ್ಣನ್ನು ಒಂದಿಲ್ಲೊಂದು ದಿನ ದೂಡಿಹಾಕಲು ಗಂಡು ಹಿಂಜರಿಯುವುದಿಲ್ಲ. ಇದು ಕಟ್ಟಿಟ್ಟ ಮಾತು. ಇದನ್ನು ನಾನು ಮಾಡುವುದಿಲ್ಲ. ನೀವೂ ಮಾಡಬೇಡಿರಿ."

"ಹಾಗಾದರೆ ಮುಂದೆ?"

" ಮುಂದೇನು! ೮–೧೦ ದಿನವಿದೆ. ನಿಮ್ಮ ಕಣ್ಣ ಮುಂದೆಯೇ ನಿಮ್ಮ ಜಾತಿಯ ಒಂದು ಹೆಣ್ಣು ತನ್ನ ವ್ಯಕ್ತಿತ್ವವನ್ನು ಕಳೆದುಕೊಂಡು ಒಬ್ಬನ ಮನೆಯನ್ನು ಸೇರುವುದು. ಅಲ್ಲಿ ಅದು ತನ್ನ ಯಾವ ಆಶೆ–ಆಕಾಂಕ್ಷೆಗಳನ್ನು ತೀರಿಸಿಕೊಳ್ಳುವುದೋ ನೋಡುವೆ. ದೈವವು ನನ್ನ ಬಲಿದಾನಕ್ಕೆ 'ಇಷ್ಟೊಂದು ಕಾರಸ್ಥಾನವನ್ನು ಹೂಡಿ ನಾಶಮಾಡಿದ ಮೇಲೆ ದೈವಕ್ಕೇ ನಾಚಿಕೆ ಬರುವಂತೆ ನಾನೂ ನಡೆಯುವೆ."

" ಆದರೆ ? "

" ಈಗ ನಾನು ಹೇಗೆ ಹೇಳಲಿ ? ಅಲ್ಲಿ ಅಂಥ ಪ್ರಸಂಗ ಬರಬೇಕು. ನಾನು ಅದನ್ನು ಎದುರಿಸಬೇಕು. ಇಷ್ಟೇ ! "

ಕಲ್ಯಾಣಿಯ ಮಾತಿನ ಅರ್ಥ ಯಾರಿಗೂ ತಿಳಿಯಲಿಲ್ಲ. ಸೂರ್ಯನು ಪಶ್ಚಿಮಕ್ಕೆ ಇಳಿದನು. ಎಲ್ಲರೂ ದೇವರಿಗೆ ನಮಸ್ಕರಿಸಿ ಊರ ಹಾದಿಯನ್ನು ಹಿಡಿದರು.

ಕಲ್ಯಾಣಿಯ ಭಾರವಾದ ಮನಸ್ಸು ಎಷ್ಟೋ ಹಗುರಾಗಿದ್ದಿತು.

೭

ದತ್ತಗುರುಗಳನ್ನು ಮದುವೆಗೆ ಒಪ್ಪಿಸಬೇಕಾದರೆ ವೇ. ಮೂ. ರಾಮಾಚಾರ್ಯರು ಮೂರು ಸಾರೆ ಎಡತಾಕಬೇಕಾಯಿತು. ಗುರುಗಳ ಮದುವೆಯನ್ನು ಮಾಡುವಲ್ಲಿ ಆಚಾರ್ಯರು ಎರಡು ಸಂಗತಿಗಳನ್ನು ಲಕ್ಷಿಸಬೇಕಿದ್ದಿತು.

ಗುರುಗಳು ರಾಮಾಚಾರ್ಯರ ಬಾಲ್ಯಸ್ನೇಹಿತರು. ಮೇಲೆ ಅವರ ಮನೆತನದ ಪುರೋಹಿತರು. ಗುರುಗಳ ಮೊದಲನೆಯ ಮದುವೆಯ ಸಮಯದಲ್ಲಿ ತಮ್ಮ ಮನೆಯ ಬಳಗದವರನ್ನೆಲ್ಲ ಕರೆದು ತಂದು ೮—೧೦ ದಿನ ಊಟ_ಉಡಿಗೆ_ವಿನೋದಗಳನ್ನು ಮಾಡಿ ಲಗ್ನ ಮಂಟಪವನ್ನು ಅಲಂಕರಿಸಿದ್ದರು. ಮದುವೆಯಾದ ಮೇಲೆ ಕುಲ ಧರ್ಮಕ್ಕನುಸರಿಸಿ ಮನ ತುಂಬ ಸಂಭಾವನೆಯನ್ನು ಪಡೆದಿದ್ದರು. ತಮ್ಮ ತಂದೆ ಸತ್ತ ಮೇಲೆ ಆಚಾರ್ಯರೇ ಪೌರೋಹಿತ್ಯ ಭಾಗವನ್ನು ವಹಿಸಿದ್ದರು. ತಮಗೆ ಅನುಕೂಲವಾದ ಹಬ್ಬ-ಹುಣ್ಣಿಮೆಗಳಲ್ಲಿ, ಶ್ರಾದ್ಧ-ಪಕ್ಷಗಳಲ್ಲಿ ಗುರುಗಳ ಮನೆಗೆ ಊಟಕ್ಕೆ ಬಂದು ಸುಗ್ರಾಸ ಭೋಜನವನ್ನು ಮಾಡಿ ಯಥಾಶಕ್ತಿ ದಕ್ಷಿಣೆಯನ್ನು ಪಡೆದುಕೊಂಡು ಹೋಗುತ್ತಿದ್ದರು. ಈಗ ಗುರುಗಳು ಅಪತ್ನಿಕರಾಗಲು ಅವರ ಮದುವೆಯನ್ನು ಮಾಡಿ ದಾರಿಗೆ ಹಚ್ಚಬೇಕು. ಗುಣವಂತಿಯಂತಹ ಅಬ್ರಹ್ಮಣ್ಯಳನ್ನು ಕೂಡಿ ಲೌಕಿಕದಲ್ಲಿ ಅಪಹಾಸ್ಯಕ್ಕೆ ಒಳಗಾಗಬಾರದು ಎಂಬ ಸೌಮ್ಯವಾದ ಧರ್ಮಭಾವನೆಯೂ ಒಂದಾಗಿತ್ತು.

ಇನ್ನೊಂದು ಅರ್ಥಭಾವನೆ. ಈಗಿನ ಮುಗ್ಗಟ್ಟಿನಲ್ಲಿ ಧಾರ್ಮಿಕ ವೃತ್ತಿಗಳು ಕಡಿಮೆಯಾಗಿ ಉತ್ಪಾದನೆಯೂ ಕಡಿಮೆಯಾಗಿದ್ದಿತು. ಇಂಥ ಸಮಯದಲ್ಲಿ ಗಂಡನಿಲ್ಲದವರಿಗೆ ಗಂಡಂದಿರನ್ನು ಒದಗಿಸುವುದು, ಹೆಂಡತಿಯಿಲ್ಲದವರಿಗೆ ಹೆಂಡತಿಯರನ್ನು ಒದಗಿಸುವುದು ಎಂಬ ವ್ಯಾವಹಾರಿಕ ಕಾರ್ಯದ ಸಂಗಡ ಧರ್ಮದ ಒಂದೆರಡು ಎಳೆಗಳನ್ನು ಜೋಡಿಸಿ ಉಭಯತರಿಂದ ಸಾಧ್ಯವಾದಷ್ಟು ಹಣವನ್ನು ಸೆಳೆಯುತ್ತಿದ್ದರು. ಅದು ವ್ಯವಹಾರವೂ ಸರಿ. ಧರ್ಮವೂ ಸರಿ. ಮೇಲೆ ಉಪಕಾರವೂ ಅಹುದು. ಅದರಲ್ಲಿ ಗುರುಗಳಂತಹ ಅಸಾಧ್ಯ ಪ್ರಕರಣದಲ್ಲಿ ಲಾಭದ ಅಂಶವು ಇನ್ನೂ ಅಧಿಕವಾಗಿ ಸಿಕ್ಕುತ್ತಿದ್ದಿತು.

ಈ ಎರಡು ಸದ್ಭಾವನೆಗಳಿಂದ ಲಗ್ನಕ್ಕೆ ಟೊಂಕ ಕಟ್ಟಿದ್ದರು.

ಮಹಾಲಕ್ಷ್ಮಿಯು ತೀರಿಕೊಂಡ ಮೇಲೆ ಲಗ್ನದ ಸಂಬಂಧ ಅನೇಕ ಬಗೆಯಾಗಿ ಗುರುಗಳಿಗೆ ಹೇಳಿದ್ದರು. ಆದರೆ ಗುರುಗಳು ವಿಶ್ವಾಮಿತ್ರನಂತೆ ಕಠೋರ ವೃತಿಗಳಾಗಿ ಇರುವುದನ್ನು ಸುಸ್ಪಷ್ಟವಾಗಿ ನುಡಿದುದರಿಂದ ಆಚಾರ್ಯರು ಬಾಯಿ ಕಟ್ಟಿಕೊಂಡು ಸುಮ್ಮನಿದ್ದರು. ಆದರೂ ಒಂದೆರಡು ವರ್ಷಗಳು ಹೋಗಲಿ ಎಂದು ದಾರಿಯನ್ನು ನೋಡುತ್ತಿದ್ದರು.

ಎರಡನೆಯ ಸಲ ಬಂದ ಸಮಯದಲ್ಲಿ ಗುಣವಂತಿಯು ಗುರುಗಳ ಮುಂದೆ ಹಲ್ಲು ತೆರೆದು ನಿಂತಿದನ್ನು ಬಾಗಿಲ ಸಂದಿನೊಳಗಿಂದ ನೋಡಿದ್ದರು. ಅದು ಯೋಗ್ಯ ಸಮಯವೆಂದೇ ಬಗೆದರು. ಅಂದು ದತ್ತಗುರುಗಳನ್ನು ಎಬ್ಬಿಸಿ ಚಹ ಮಾಡಿ ಕುಡಿದರು. ಸುತ್ತಲಿನ ಬ್ರಹ್ಮ ಸೃಷ್ಟಿಯ ಹರಟೆಯಾಯಿತು. ತಮ್ಮ ನಾರದ ಸಂಚಾರದ ಸಂಗತಿಗಳನ್ನು ತಿಳಿಯ ಪಡಿಸಿದರು. ಕೊನೆಗೆ—

"ಇದೀಗ ಮನೆಯಿಂದ ಹೋದವಳು ಯಾರು ?" ಎಂದರು.

"ಅವಳು ಮನೆಯ ಮುಸುರೆಯಾಕೆಯು." ಗುರುಗಳು ನುಡಿದರು.

"ಆಸಾಮಿ ಒಳ್ಳೆಯದಿದೆ."

"ಅಂದರೆ ?"

"ಮುಸುರೆ ತಿಕ್ಕುವವಳು ಎಂದು ನೀನು ಹೇಳಿದ ಮೇಲೆ ನಂಬಬೇಕು."

"ಅದೇಕೆ ?" ಆಶ್ಚರ್ಯದಿಂದ ಕೇಳಿದರು.

"ಏನೋ ದತ್ತು, ಇಂಥವಳು ಮುಸುರೆಯನ್ನು ತಿಕ್ಕಿ ಮೂರು ರೂಪಾಯಿ ಗಳಿಸಿದರೆ ಅವಳ ಯಾವ ಖರ್ಚಿಗೆ ಸಾಲಬೇಕು! ಈ ಬಟ್ಟೆ, ಈ ಚಪ್ಪಲಿ, ಈ ಕೂದಲು, ಈ ಮಾಲೆಗಳಿಂದ ಅವಳ ಪ್ರಾಪ್ತಿ ತಿಂಗಳಿಗೆ ೫೦ರೂ. ಗೂ ಕಡಿಮೆಯಾಗಲಿಕ್ಕಿಲ್ಲ. ಕೈಯಲ್ಲಿಯ ಬಳೆಗಳೇ ಮೂರು ರೂಪಾಯಿ ಬೆಲೆಯವು ಆಗಬಹುದು."

"ನಿಮ್ಮ ಮಾತಿನ ಧೋರಣೆಯೇ ನನಗೆ ತಿಳಿಯದು."

"ಅದೆಲ್ಲ ಹೋಗಲಿ....ಇದು ನನಗೆ ಸರಿಬಾರದು. ನೀನು ಒಳ್ಳೆಯ ಗುರುವು ಹತ್ತು ಜನರಿಗೆ ವಿದ್ಯೆ ಕಲಿಸಿ ಅನ್ನಕ್ಕೆ ಹಚ್ಚಿರುವೆ. ಇನ್ನೂ ಹತ್ತಾರು ಜನರಿಗೆ ಕಲಿಸುವವನಿರುವೆ. ಮನೆಯಲ್ಲಿ ದೊಡ್ಡ ಮಗನಿರುವನು.

ಈ ಎಲ್ಲವನ್ನು ನೋಡಿದರೆ ನನಗೆ ಏನೇನೋ ಎನಿಸುವುದು."

"ಏಕೆ. ಏನಾಯಿತು." ತಿಳಿಯದವರಂತೆ ಕೇಳಿದರು.

"ದತ್ತು, ಬೆಕ್ಕು ಕಣ್ಣು ಮುಚ್ಚಿ ಹಾಲು ಕುಡಿದರೂ ಜನರು ನೋಡು ವರು. ನೀನು ಇದನ್ನೆಲ್ಲವನ್ನೂ ಕದ್ದು-ಮುಚ್ಚಿ ನಡೆಸಿದರೂ ಜನರು ತಿಳಿದು ಕೊಂಡಿರುವರು...."

"ಏನು ಆಚಾರ್ಯರೇ?"

"ನಾನು ಸ್ಪಷ್ಟವಾಗಿ ಹೇಳುವೆ. ಸಿಟ್ಟಾಗಬೇಡ. ನೀನು ಗುಣವಂತಿ ಯನ್ನು ಇಟ್ಟುಕೊಂಡಿರುವೆ. ಇದು ಎಲ್ಲರಿಗೂ ಗೊತ್ತು. ನಾನು ನಂಬಿರ ಲಿಲ್ಲ. ಇಂದು! ನೋಡಿರುವೆ. ನನ್ನ ಮುಂದೆ ಮುಚ್ಚುಮರೆ ಬೇಡ. ೮-೧೦ ವರುಷ ತಡೆದು ನಿಂತ ಬ್ರಹ್ಮಚಾರಿಗೆ ಒಳ್ಳೆಯದು ಕೆಟ್ಟದು ತಿಳಿಯಲಾರದು. ಇದು ಸರಿಯಲ್ಲ. ನಾನು ನಿನ್ನ ಹೆಂಡತಿಯು ತೀರಿದ ಕೂಡಲೆ ಕೇಳಿದೆ. ಆಗ್ರಹ ಮಾಡಿದೆ. ನೀನು ಒಪ್ಪಲಿಲ್ಲ. ನಿನ್ನ ವಯಸ್ಸನ್ನು ನೆನೆದೇ ಅಂದು ನಾನು ಹಾಗೆ ಕೇಳಿದೆ. ನೀನು ಸಂಕಲ್ಪ! ಸಂಕಲ್ಪ!! ಎಂದು ನುಡಿದೆ. ಈಗ ಅದೆಲ್ಲ ಎಲ್ಲಿ ಹೋಯಿತು?"

ಗುರುಗಳು ಸುಮ್ಮನೆ ಕುಳಿತರು.

"ಹಲ್ಲಿದ್ದ ಬಾಯಿ ಹುಳಿ-ಅನ್ನ, ಬಕ್ಕರಿ-ಚಟ್ಟಣಿ ತಿನ್ನುವ ವರೆಗೆ ಹೆಂಡತಿಯು ಬೇಕೇ ಬೇಕು. ಹೀಗೆ ಪ್ರಕೃತಿಯು ಆಶಿಸುವುದು ತಪ್ಪಲ್ಲ. ನೀನು ಈಗ ಮಾಡಿದುದು ತಪ್ಪೆಂದು ನಾನು ನುಡಿಯಲಾರೆ. ಇದೂ ಒಂದು ಮಾರ್ಗವೇ ಸರಿ. ಆದರೆ ನಿನ್ನ ಸ್ಥಿತಿಗತಿಗೆ ಇದು ಬೇಡ ಎಂದು ಹೇಳುವೆ. ಏನೆಂದೆ?"

"ನನಗೂ ತಪ್ಪೆಂದು ತಿಳಿಯುವುದು. ಆದರೆ ಜನರು ತಿಳಿದಷ್ಟು ತಪ್ಪು ಮಾಡಿಲ್ಲ. ತಪ್ಪು ಮಾಡುವ ದಾರಿಯಲ್ಲಿರುವೆ. ಆಚಾರ್ಯರೇ ನಿಮ್ಮ ಮುಂದೆ ಸುಳ್ಳು ಹೇಳಲಾರೆ. ದೇವರಾಣೆ!" ಎಂದರು.

"ಆಣೆ—ಚೂರಿ ಏಕೆ! ಆ ದಾರಿಯಿಂದ ಸಾಗಿದ ಪ್ರವಾಹಕ್ಕೆ ಇನ್ನೊಂದು ಮಾರ್ಗವನ್ನು ಕಲ್ಪಿಸುವ. ಇದು ಬೇಡ."

ಗುರುಗಳು ಪಶ್ಚಾತ್ತಾಪದಿಂದ ಕುದಿಯುತ್ತಿದ್ದರು.

"ಆ ಹೆಂಗಸು ಎಷ್ಟು ಜನರ ಎಂಜಲನ್ನು ತಿಂದಿರುವಳೊ! ಎಷ್ಟು

ಊರ ನೀರನ್ನು ಕುಡಿದಿರುವಳೋ! ನನಗಂತೂ ತಿಳಿಯದು. ಅವಳ ತಾಯಿಯು ಸಹ ವ್ಯಭಿಚಾರದಿಂದಲೇ ಬಾಳಿದಳು. ಇವಳು ವ್ಯಭಿಚಾರದ ಬೀಜವೇ ಸರಿ. ಈ ಸೂಳೇಮಕ್ಕಳನ್ನು ನಂಬಿ ನೀನು ಮೂರು ದಿನ ಸಹ ಬಾಳಲಾರೆ. ಕಣ್ಣಿನಿಂದ ಒಬ್ಬನನ್ನು ಕರೆಯುವರು. ಕೈಯನ್ನು ಇನ್ನೊಬ್ಬರ ಹಸ್ತದಲ್ಲಿ ಇಡುವರು. ತುಟಿಯನ್ನು ಮುಗುದೊಬ್ಬನಿಗೆ ಚಾಚುವರು. ಎದೆಯನ್ನು ಯಾರಿಗೋ ಮಾರಿಕೊಂಡಿರುವರು. ಇಂಥವರ ಸಹವಾಸಕ್ಕೆ ನೀನು ಬಿದ್ದೆಯಾದರೆ ನಾಲ್ಕು ದಿನಗಳಲ್ಲಿ ಅವಳ ಪಾದದ ಹತ್ತಿರವೂ ನಿನಗೆ ಸ್ಥಳ ಸಿಕ್ಕಲಾರದು. ಅವಳ ಸಹವಾಸ ಬೇಡ. ಒಮ್ಮೆ ನಿನಗೆ ಅಂಟಿಕೊಂಡಳೆಂದರೆ ನಿನ್ನ ತಿಂಗಳ ಸಂಬಳವನ್ನು ಅವಳ ಮುಂದಿಟ್ಟು ದೇವೀ ಪ್ರಸನ್ನಳಾಗು! ಎಂದರೂ ಕಿವುಡಿಯಾಗಿ ನಿಂತು, ಹಣವನ್ನು ಬಳಿದುಕೊಂಡು ನಾಳೆ ಬಾ ಎಂದು ಆಜ್ಞಾಪಿಸಬಹುದು. ಅದಕ್ಕೆ ಅವರ ಸಹವಾಸ ಬೇಡ." ಎಂದು ಉಪದೇಶಿಸಿದರು.

"ಬಿಡುವೆ." ಮೆಲ್ಲಗೆ ನುಡಿದರು.

"ನೋಡು. ನಾನು ಒಂದು ಮುತ್ತಿನಂತಹ ಮಾತು ಹೇಳುವೆ. ಇದೇ ಸಮೀಪದ ಹಳ್ಳಿಯಲ್ಲಿ ಶಂಕರರಾಯರೆಂಬುವವರು ಇರುವರು. ಮಧ್ಯಮ ತರಗತಿಯ ಗೃಹಸ್ಥರು. ಅವರಿಗೆ ಕಲ್ಯಾಣಿಯೆಂಬ ಮಗಳಿರುವಳು. ವಯಸ್ಸಿಗೆ ಬಂದಿರುವಳು. ಏನೋ ಒಂದು ರಿಣದಲ್ಲಿ ಸಿಕ್ಕಿರುವರು. ನಾನು ನಿನ್ನ ಹೆಸರನ್ನು ಹೇಳಿರುವೆ. ನೀನು ಆ ಹುಡುಗಿಯನ್ನು ನೋಡು. ನನ್ನನ್ನೇ ಕೇಳಿದರೆ ಕನ್ನೆ ಉತ್ತಮಳು. ಬಿರುಸಾಗಿ ಬೆಳೆದಿರುವಳು. ನೀನು ಮದುವೆಯನ್ನು ಮಾಡಿಕೊಳ್ಳುವುದಿದ್ದರೆ ನಾನು ಪ್ರಯತ್ನಿಸುವೆ. ಗಂಟು ಹಾಕುವೆ."

"ನನಗೆ ಮದುವೆ ಬೇಡ."

"ಈ ಮುಸುರೆ ತಿಕ್ಕುವವಳಿಗಿಂತಲೂ ಒಳ್ಳೆಯವಳು."

"ಬೇಡ."

"ನಿನಗೆ ಮದುವೆ ಬೇಡ. ಇದರ ಅರ್ಥವೇನು ಬಲ್ಲೆಯಾ?"

"ಏನು?"

"ಗುರುಗಳು ಅನಾಥ ಒಬ್ಬ ಹೆಂಗಸನ್ನು ಸಂರಕ್ಷಿಸುವರು. ಆದರೆ ಮದುವೆ ಬೇಡ ಎಂದು ಜನರೆನ್ನುವರು. ಆಗ ಏನು ಉತ್ತರವನ್ನು ಹೇಳುವೆ.

ನನ್ನ ಕಿವಿಗೆ ಇಂಥ ಮಾತು ಹತ್ತಾರು ಸಾರೆ ಬಿದ್ದಿವೆ. ಈ ಮೊದಲು ಅವರನ್ನು ಬೆದರಿಸುತ್ತಿದ್ದೆ. ಇನ್ನು ಮುಂದೆ ಹೂ ಎನ್ನಲೇಬೇಕು. ಅಂತೂ ಲೌಕಿಕದಲ್ಲಿ ನೀನು ಛೀಮಾರಿಯಾಗುವುದು ಖಂಡಿತ."

ಗುರುಗಳು ವಿಚಾರದ ಗೊಂದಲದಲ್ಲಿ ಬಿದ್ದರು.

ಗುಣವಂತಿಯು ಗುರುಗಳ ಹೃದಯದಲ್ಲಿ ಶೃಂಗಾರ ರಸದ ರತ್ನದೀಪ ವನ್ನು ಒಮ್ಮೆ ಹಚ್ಚಿದ್ದಳು. ಮನಸು ಪೂಜಾಸಾಮುಗ್ರಿಗಳನ್ನು ಅಣಿಗೊಳಿಸಿ ಕೊಂಡಿದ್ದಿತು. ಸ್ವಪ್ನದಲ್ಲಿಯೂ ಸುಳಿದಾಡುತ್ತಿದ್ದಳು. ಅತೃಪ್ತಭಾವನೆ-ಕಾಮನೆಗಳಿಗೆ ಅಲ್ಲಿ ಅನುಕೂಲಳಾಗಿದ್ದಳು. ಹಗಲಿನ ಜೀವನಕ್ಕಿಂತ ಇರುಳಿನ ಜೀವನವು ರಮ್ಯವೆನಿಸುತ್ತಿದ್ದಿತು. ಬೆಳಗಿನಲ್ಲಿ ಕನಸು ಹರಿದು ಗುಣವಂತಿ ಬೈಲಾಗಿದ್ದರೂ ಅದರ ಕಾವು-ಉನ್ಮಾದ ಇನ್ನೂ ಶರೀರದಲ್ಲಿ ಸಂಚರಿಸು ತ್ತಿದ್ದಿತು. ರುಚಿಯುಂಡ ಜೀವ ಹಿಂದೆ ಸರಿಯಲು ಹಿಂಜರಿಯುತ್ತಿದ್ದಿತು. ಮನಸು ಅಷ್ಟು ದೃಢತೆಯನ್ನು ಹೊಂದಬಹುದೇ ಎಂದು ಒಮ್ಮೊಮ್ಮೆ ಶಂಕಿಸು ತ್ತಿದ್ದರು. ಆದರೆ ರಾಮಾಚಾರ್ಯರ ಹೊಸ ಸೂಚನೆ ಇನ್ನೂ ಒಳ್ಳೆಯ ದೆನಿಸಿತು. ಗುಣವಂತಿಯ ಸಹವಾಸ ಒಂದಿಲ್ಲೊಂದು ದಿನ ಬೈಲಿಗೆ ಬರ ತಕ್ಕುದೇ! ಆಗ ಎಲ್ಲರಿಂದ ಛೀ ಥೂ ಎನ್ನಿಸಿಕೊಳ್ಳುವುದಕ್ಕಿಂತ ಲಗ್ನಶಾಸ್ತ್ರ ದಿಂದ ಅದನ್ನು ಕೊನೆಗಾಣಿಸಿದರೆ ಜನರು ಏನನ್ನೂ ನುಡಿಯರು. ಒಂದು ದಿನ ಹೀಗಾಗ ಬಾರದಿದ್ದಿತು. ಆಯಿತು ಎಂದು ನುಡಿದು ಸುಮ್ಮನಾಗ ಬಹುದು. ಮುಂದೆ ದೈನಂದಿನ ಕಾರ್ಯದಲ್ಲಿ ಎಲ್ಲರೂ ಮರೆತು ಬಿಡುವರು. ಇಂಥ ಮದುವೆಗಳು ಆದುದುಂಟು. ಪ್ರತ್ಯಕ್ಷ ನೋಡಿರುವೆ. ಅಂಥವರು ಇಂದಿಗೂ ನೆಮ್ಮದಿಯಿಂದ ಬಾಳುವರು. ನಾನೇಕೆ ಮದುವೆಯಾಗಬಾರದು? ಆದರೆ ಒಳ್ಳೆಯದಲ್ಲವೇ? ಎಂದು ಎಣಿಸಹತ್ತಿದರು.

"ಕೇಳು ದತ್ತ. ಗುಣವಂತಿಗೆ ನೀನು ತಿಂಗಳಿಗೆ ನೂರಿನ್ನೂರು ರೂಪಾಯಿ ಕೊಟ್ಟರೂ ಕಡಿಮೆ. ಅವಳು ಹೇಳಿ ಕೇಳಿ ಸೂಳೆ. ನಿನ್ನಿಂದ ಸಾಧ್ಯವಾದಷ್ಟನ್ನು ದಿನಂಪ್ರತಿ ಎಳೆಯುವವಳೇ! ಹಸಿದು ಹೋದ ನಿನಗೆ ಅಷ್ಟು-ಇಷ್ಟು ಎಂಬ ಕಾಟ ತಪ್ಪಿದುದಲ್ಲ. ನೀನಾದರೂ ಆ ಹಸಿವೆಯ ಬಿಸಿ ಯಲ್ಲಿ ಕೊಡುತ್ತ ಹೋಗುವೆ. ಎಷ್ಟು ದಿನ! ಆದರೆ ಅದೇ ೨೦೦-೩೦೦ ರೂಪಾಯಿಗಳಲ್ಲಿ ಆಳಾಗಿ ದುಡಿಯುವ ಹೊಸ ಹೆಣ್ಣು ಮನೆಗೆ ಬರುವುದು.

ಭೋಗಕ್ಕೆ ಸದಾ ಸಿದ್ಧಳಾಗಿ ನಿಲ್ಲುವಳು. ಲಗ್ನವೆಂಬ ಈ ಧರ್ಮದ ಅನುಕೂಲತೆ ಕಡಿಮೆಯಾದುದೇ? ಆ ಅಧರ್ಮದಿಂದ ಹಣದಿಂದ ಹಾಳು, ಗುಣದಿಂದ ಹಾಳು, ದೇಹದಿಂದ ಹಾಳು ಕೊನೆಗೆ ಅವಳು ಯಾರ ಸೊತ್ತೋ! ಇದು ಹಾಗಲ್ಲ. ಅಲ್ಪ ಹಣದಿಂದ ಮೀಸಲ ಹೆಣ್ಣು ಮನೆಗೆ ಒರುವುದು. ನಿನ್ನದಾಗಿ ಬರುವುದು. ಕೇವಲ ನಿನ್ನವಳಾಗಿ ಬರುವಳು. ಧರ್ಮದ ಈ ಅನುಕೂಲತೆ ಮತ್ತೆಲ್ಲಿ ಸಿಕ್ಕಬೇಕು?" ಎಂದು ಪ್ರೇರೇಪಿಸಿ ನುಡಿದರು.

"ನಿನಗೆ ತಿಳಿದಂತೆ ಮಾಡು." ಗುರುಗಳು ನಿಧಾನವಾಗಿ ನುಡಿದರು.

ಅಂದು ವಚನ ತೆಗೆದುಕೊಂಡು ರಾಮಾಚಾರ್ಯರು ಹೋದರು.

ಇದು ಆಚಾರ್ಯರಿಗೆ ಗೊತ್ತು–ಗುರುಗಳಿಗೆ ಗೊತ್ತು.

ಇಂದು ಮೂರನೆಯ ಸಲ ಬಂದರು.

"ದತ್ತು, ಕೆಲಸವು ನಿಜವಾಗಿ ಕಷ್ಟದ್ದು. ಅವರನ್ನು ಒಪ್ಪಿಸಬೇಕಾದರೆ ನನ್ನ ತಂದೆ–ತಾಯಿಂದಿರ ಪುಣ್ಯವೆಲ್ಲ ವೆಚ್ಚವಾಯಿತು. ಕೊನೆಗೆ ಕಷ್ಟದಿಂದ ಹೂ ಎನ್ನಿಸಿ ಬಂದಿರುವೆ." ಎಂದು ನುಡಿದರು.

"ಏಕೆ ಏನಾಯಿತು?" ಗುರುಗಳು ಕೇಳಿದರು.

"ಅವರು ಕರುಣನಿಗೆ ಕೊಡುವೆನೆಂದು ಹೇಳಿದರು. ನಾನು ಕರುಣನನ್ನು ಕರೆತರಲು ಹೇಳಿದುದು ತಪ್ಪಾಯಿತು. ಹುಡುಗಿಯೂ ಕರುಣನನ್ನು ಮೆಚ್ಚಿಕೊಂಡಿರುವಳಂತೆ. ಮನಸಾ ಮೆಚ್ಚಿರುವಳಂತೆ. ಆದರೆ ಕರುಣನು ಅಳಿಯನಾಗಬೇಕಾದರೆ ಸಾವಿರ ರೂಪಾಯಿ ವರದಕ್ಷಿಣೆ ಕೊಡಬೇಕಾಗುವುದೆಂದು ಹೇಳಿದೆ. ಕರುಣನ ಯೋಗ್ಯತೆ, ವಿದ್ಯೆ ಹೆಚ್ಚಿನದೆಂದು ತಿಳಿಯಪಡಿಸಿದೆ. ಅವರು ಸುಮ್ಮನಾದರು. ಕಾಂಚನವಿಲ್ಲದೆ ಮದುವೆ ಮಾಡುವುದಾದರೆ ಗುರುಗಳಿಗೆ ಕೊಡಿರಿ ಎಂದೆನು. ಅವರು ವಯಸ್ಸಾದವನಿಗೆ ಹೇಗೆ ಕೊಡುವುದು? ಎಂದು ಶಂಕಿಸಿದರು....." ಮಾತು ತಡೆದರು.

"ಹ!.... ಮುಂದೆ."

"ನಾನು ಎಲ್ಲವನ್ನು ಸಮುದಾಯಿಸಿ ಹೇಳಿರುವೆ."

"ಅದೇನು?"

"ನಿನಗೆ ೩೪–೩೫ ವರುಷಗಳಾಗಿವೆ ಎಂದು ಹೇಳಿದೆ. ಮತ್ತು ಮೊದಲನೆಯ ಹೆಂಡತಿಯು ತೀರಿ ೫–೬ ವರುಷಗಳಾಗಿವೆ. ಕೈತುಂಬ ಸಂಬಳ,

ಮನೆಯಲ್ಲಿ ಒಂದಿಷ್ಟು ಬಂಗಾರವಿದೆ. ಬ್ಯಾಂಕಿನಲ್ಲಿ ಹಣವಿದೆ. ಮತ್ತಾರೂ ಇಲ್ಲ. ಕೇವಲ ಮೂವರೇ! ನಿಮ್ಮ ಮಗಳು ಮದುವೆಯಾಗಿ ಮನೆಯ ಸರ್ವಾಧಿಕಾರಿ. ಮುಂದೆ ಗುರುಗಳು ಹೆಚ್ಚಿನ ಕೆಲಸಕ್ಕೂ ಹೋಗುವ ಸಂಭವ ವಿದೆ. ಇಷ್ಟು ವರ್ಣಿಸಿ ಪೂರ್ವ ಪೀಠಿಕೆಯನ್ನು ಹಾಕಿರುವೆ....." ತಡೆದು ನಿಂತರು.

ಗುರುಗಳು ಕುತೂಹಲದಿಂದ ಕೇಳುತ್ತಿದ್ದರು.

"ಕರುಣನಿಗೆ ಕೊಡಲು ಒಪ್ಪಿರುವರು. ಹುಡುಗಿಯು ಮಾಡಿಕೊಳ್ಳಲು ಸಮ್ಮತಿಸಿರುವಳು. ಇದು ಅರ್ಧ ಒಪ್ಪಿಗೆಯೇ ಸರಿ. ಆದರೆ ಲಗ್ನದ ದಿನ ಜಗುಲಿಯ ಮೇಲೆ ನಿಮ್ಮನ್ನು ನಿಲ್ಲಿಸಿ ಕೆಲಸವನ್ನು ಪೂರ್ತಿಮಾಡಿಬಿಡುವುದು."

"ಹೀಗೇಕೆ?"

"ಹುಡುಗಿಯು ಒಪ್ಪಿದರೆ ಸರಿ. ಒಪ್ಪಿಸಲು ಇನ್ನೂ ದಿನಗಳಿವೆ. ಒಂದು ವೇಳೆ ಹಟವನ್ನು ಹಿಡಿದರೆ ನಿಮ್ಮನ್ನು ನಿಲ್ಲಿಸಿ ಮಂಗಳಾಷ್ಟಕದ ಗಡಿ ಬಿಡಿಯಲ್ಲಿ ಅಕ್ಷತೆಯನ್ನು ತೂರಿ ತಾಳಿಯನ್ನು ಕಟ್ಟಿಬಿಡುವುದು....."

"ಆಚಾರ್ಯ ಇದು ನನಗೆ ಹೆದರಿಕೆಯನ್ನುಂಟು ಮಾಡುವುದು."

"ನೀನು ಹೆದರಬೇಡ. ಇಂಥ ನೂರಾರು ಲಗ್ನಗಳನ್ನು ನಾನು ಮಾಡಿರುವೆ. ಒಂದು ಗಂಡು ತೋರಿಸಿ ಇನ್ನೊಬ್ಬನಿಗೆ ಮದುವೆ ಮಾಡಿರುವೆ. ಒಬ್ಬಳನ್ನು ತೋರಿಸಿ ಇನ್ನೊಬ್ಬಳನ್ನು ಕೊರಳಿಗೆ ಕಟ್ಟಿರುವೆ. ಇವೆಲ್ಲ ನಡೆ ಯುವುವು. ಹೀಗೆ ಮಾಡದಿದ್ದರೆ ಕುಂಟ, ಕುರುಡ, ಕಿವುಡ ಮುಂತಾದ ಅಂಗಹೀನ ಅರ್ಥಹೀನ ಕನ್ನೆ-ವರಗಳು ಖರ್ಚಾಗುವುದೆಂತು! ಹೀಗೆ ಮಾಡ ದಿದ್ದರೆ ಆಜನ್ಮ ಬ್ರಹ್ಮಚಾರಿಗಳಾಗಿ ಇರಬೇಕಾದೀತಲ್ಲ. ಬ್ರಹ್ಮಸಂಕಲ್ಪ ವೆಂಬ ವೇದವಾಕ್ಯದಲ್ಲಿ ಇಂಥವುಗಳು ಸರಾಗವಾಗಿ ನಡೆಯುವುವು. ಅವರು ಮುಂದೆ ಚೆನ್ನಾಗಿಯೇ ಬಾಳುವೆಯನ್ನು ಮಾಡುವರು. ನನಗೆ ಗೊತ್ತು."

"ಏನೋ ನಿಮ್ಮನ್ನೇ ಕೂಡಿದೆ."

"ನಾನು ಮಾಡುವೆ. ಹೆದರಬೇಡ. ಅದಕ್ಕೆ ಒಂದಿಷ್ಟು ಕೈಸಡಿಲು ಬಿಟ್ಟು ಖರ್ಚು ಮಾಡಬೇಕು. ಇಂಥ ಪ್ರಸಂಗದಲ್ಲಿ ಒಮ್ಮೆ ಮಾಡಿದರೆ ಸರಿ. ಮುಂದೆ ಮಾಡಬೇಕಿಲ್ಲ. ಏನೆಂದೆ?"

"ನಿನ್ನ ಚಾತುರ್ಯದ ಮುಂದೆ ನಾನು ಓಡಲಾರೆ."

"ಒಪ್ಪಿಗೆಯೇ ?"

"ಒಪ್ಪಬೇಕಲ್ಲ." ತಲೆಯನ್ನು ತೂಗಿದರು.

ಗುರುಗಳು ಗುಣವಂತಿಯ ಮೇಲೆ ಕಣ್ಣಿಟ್ಟು ತಪ್ಪು ಮಾಡಿದರು. ನಿಜ. ಗಂಡು–ಹೆಣ್ಣಿನ ಬಾಳಿನಲ್ಲಿ ಇಂಥ ತಪ್ಪು ನಡೆಯುತ್ತವೆ. ಅನಾಥ ಹೆಣ್ಣು ಒಂದು ಗಂಡಿನ ಆಶ್ರಯವನ್ನು ಬಯಸುವುದು. ಗಂಡಾದರು ಇಂಥ ಒಂದು ಹೆಣ್ಣನ್ನು ಸಾಕಬೇಕೆಂದು ಇಚ್ಛಿಸುವುದು. ಯಾವುದೋ ಒಂದು ಪ್ರಸಂಗದಲ್ಲಿ ಕೂಡುವುವು. ನೆಮ್ಮದಿಯಲ್ಲಿ ದಿನಗಳನ್ನು ಕಳೆಯುವುವು. ಸುಖದ ದಿನಗಳನ್ನು ಕಾಣುವ ವರೆಗೆ ಕೂಡಿಯೇ ಇರುವುವು. ಆದರೆ ಸ್ವತಂಗ ವೃತ್ತಿಯ ಹೆಣ್ಣು ಇಲ್ಲವೆ ಗಂಡು ನಡುವೆ ಬಿಡುಗಡೆಯನ್ನು ಹೊಂದಬಹುದು. ಆರ್ಥಿಕ ಹೀನಾಯವು ಹೆಣ್ಣಿನ ಕಣ್ಣಲ್ಲಿ ಮೂಡಿದರೆ ಇಲ್ಲವೆ ಹೀನರೂಪ ಗಂಡಿನ ಕಣ್ಣಲ್ಲಿ ನಿಂತರೆ, ಉಭಯತರ ಕೂಟದಲ್ಲಿ ಕೀಳು–ಮೇಲು ಕಂಡುಬಂದರೆ ಬಿಡುವನ್ನು ಹೊಂದುವುವು. ಅದು ಲೌಕಿಕರ ಕಣ್ಣಲ್ಲಿ ಮಹತ್ವವೆನಿಸದು. ತಾಳ್ಮೆಯ ಮುಸುಕಿನಲ್ಲಿ ಮರೆಯುವರು ಇಲ್ಲವೆ ಗಣಿಸರು. ಗುರುಗಳ ಜೊತೆಯಲ್ಲಿ ಗುಣವಂತಿಯ ನಡತೆ ಹೀಗೆಯೇ ಆಗುತ್ತಿತ್ತೆಂದು ಹೇಳಲಾಸಲ್ಲ. ಆದರೂ ರಾಮಾಚಾರ್ಯರು ಗುಣವಂತಿಯ ಸಹವಾಸವನ್ನು ಮುರಿದು ಹಾಕಲು ಪ್ರಯತ್ನಿಸಿದರು. ಗುರುಗಳು ಒಪ್ಪಿದರು. ಒಂದು ತಪ್ಪನ್ನು ಮುಚ್ಚಲು ಇನ್ನೊಂದು ತಪ್ಪನ್ನು ಮಾಡಲು ಸಿದ್ಧರಾದರು. ಆ ತಪ್ಪು ಸಿದ್ಧಿಗೆ ಬರುವಂತೆ ಆಚಾರ್ಯರ ಕಾರಸ್ಥಾನಕ್ಕೆ ಹೂ ಎನ್ನಬೇಕಾಯಿತು. ಲಗ್ನಕ್ಕೆ ಧರ್ಮದ ಸಮ್ಮತಿಯಿದೆ ಎಂದೇ ತಿಳಿದರು. ಇಷ್ಟು ದಿನದ ತಮ್ಮ ಆದರ್ಶ, ಏಕನಿಷ್ಠೆ, ಮಗನ ಮೇಲಿನ ವಾತ್ಸಲ್ಯ ಎಲ್ಲವನ್ನು ಗಂಟು ಕಟ್ಟಬೇಕಾಯಿತು. ದೇಹದ ಒಂದು ಸಾಮಾನ್ಯ ತೃಷೆಗೆ ಬುದ್ಧಿಯನ್ನು ಹರಿಯ ಬಿಡಬೇಕಾಯಿತು. ಎಲ್ಲಕ್ಕೂ ಹೆಚ್ಚಾಗಿ ಇನ್ನೂರು ರೂಪಾಯಿಗಳಲ್ಲಿ ಮೀಸಲಿದ್ದ ಕನ್ನೆಯು ಮನೆಗೆ ಮಡದಿಯಾಗಿ ಬರುವಳಲ್ಲ! ಎಂಬ ರಾಮಾಚಾರ್ಯರ ಮಾತು ರಮ್ಯವೆನಿಸಿತು. ಈ ನವೋನ್ಮಾದದಲ್ಲಿ ಕಳೆದು ಹೋದ ಹರಯವು ಮರುಕೊಳಿಸಿತು. ಸ್ನಾಯುಗಳಲ್ಲಿ ಬಿಸಿ ನೆತ್ತರವು ಚಿಮ್ಮಿತು. ಮಹಾಲಕ್ಷ್ಮಿಯು ಮೊದಲ ಸಾರೆ ಮನೆಗೆ ಬಂದ ಸಮಯದಲ್ಲಿಯ ಪ್ರಫುಲ್ಲಿತ ಮನಸು ಮತ್ತೊಮ್ಮೆ ಅರಳಿತು. ರಟ್ಟೆಗಳು ಉಬ್ಬಿದಂತೆ, ತೊಡೆಗಳು ತುಂಬಿದಂತೆ

ಕಂಡುವು. ಎದೆಯು ಅಗಲವಾದಂತೆ ಭಾಸವಾಯಿತು. ರಾಮಾಚಾರ್ಯರು ನಿಜವಾಗಿ ಕುಲಪುರೋಹಿತರೆನಿಸಿದರು.

ಮುಂದೆ ರಾಮಾಚಾರ್ಯರು ಕೊನೆಯ ಸಾರೆ ಬಂದು ಇಷ್ಟನ್ನು ಹೇಳಿದರು—

" ಎಲ್ಲವೂ ನನ್ನ ಹಂಚಿಕೆಯಂತೆಯೇ ನಡೆಯುತ್ತದೆ. ಹುಡುಗಿಯೂ ಒಪ್ಪಿರುವಳು. ಅವಳಿಗೆ ಕೆಲವು ಸಂಗತಿಗಳು ತಿಳಿದಿವೆ. ಆರಂಭದಲ್ಲಿ ಮದುವೆಗೆ ಅಡ್ಡಿಯನ್ನು ಮಾಡಿದಳಂತೆ. ತಾಯಿಯ ಕಳಕಳಿಯ ಮಾತಿಗೆ, ತಂದೆಯ ಅಸಹಾಯ ಸ್ಥಿತಿಗೆ ಒಪ್ಪಿರುವಳು. ಅದಕ್ಕೆ ನಾನು ಹೀಗೆ ಮಾಡಿರುವೆ—ಒಂದು ದಿನ ಕೊಲ್ಹಾಪುರಕ್ಕೆ ಹೋಗಿ ಬಿಡುವ. ಹೆಚ್ಚು ಜನರಿಗೆ ತಿಳಿಸುವ ಅಗತ್ಯವಿಲ್ಲ. ಅವರ ಮನೆಯಿಂದಲೂ ಬಹಳ ಜನರು ಬರುವಂತಿಲ್ಲ. ನಿಮ್ಮಲ್ಲಿಯೂ ಯಾರಿಲ್ಲ. ಅಲ್ಲಿ ನನಗೆ ಸಾಕಷ್ಟು ಪರಿಚಯವಿದೆ. ಒಂದು ದಿನದಲ್ಲಿ ಲಗ್ನವನ್ನು ಮುಗಿಸಿ ಮರುದಿನ ಹೊರಟು ಬಿಡುವ. ಏನೆಂದಿ?" ಎಂದು ಅವಸರದಿಂದ ನುಡಿದು ಸುಮ್ಮನಾದರು.

" ಆಗಲಿ."

" ಸರಿಯೇ ? "

" ನಿಮ್ಮ ಮಾತಿಗೆ ನಾನು ಹೊರಗಿಲ್ಲ."

" ಮದುವೆಯನ್ನು ಮಾಡಿ ಕನ್ನೆಯನ್ನು ನಿನ್ನ ಮನೆ ಹೊಗಿಸುವುದು ನನಗೆ ಒಪ್ಪಿದ್ದು."

" ನಿಮಗೆ ಅಷ್ಟು ಧೈರ್ಯ-ಸಾಹಸವಿದೆ. ನನಗೆ ಗೊತ್ತು."

" ಆದರೆ ನನ್ನ ಸಂಭಾವನೆಯನ್ನು ಮರೆಯಬಾರದು."

" ಒಳ್ಳೇದು."

" ನಿನ್ನ ಮೊದಲನೆಯ ಮದುವೆಯಲ್ಲಿ ನಾನು ಪೌರೋಹಿತ್ಯವನ್ನು ವಹಿಸಿರಲಿಲ್ಲ. ನನ್ನ ತಂದೆಯವರೇ ಓಡಾಡಿದರು. ನಿಮ್ಮ ತಂದೆಯವರು ಏನು ಕೊಟ್ಟರೋ, ನಮ್ಮ ತಂದೆಯವರು ಏನು ತೆಗೆದುಕೊಂಡರೋ ನೆನಪಿಲ್ಲ. ಆದರೆ ಈ ನಿನ್ನ ಮದುವೆಯಲ್ಲಿ ನೆನಪು ಉಳಿಯುವಂತೆ ಕೊಡಬೇಕು."

" ಆಗಲಿ."

" ಒಳ್ಳೇದು ಹೋಗುವೆ."

"ಚಹ ಮಾಡುವೆ. ಕುಳಿತಿರಿ."

"ಇನ್ನು ನಿನ್ನ ಕೈ ಚಹ ಬೇಡ. ಹೆಂಡತಿಯು ಬಂದಮೇಲೆ ಒಂದು ಸುಗ್ರಾಸ ಭೋಜನವನ್ನು ಹಾಕು. ಹೋಗುವೆ." ಎಂದು ಹೊರಟು ಹೋದರು.

ಗುರುಗಳ ಸ್ವಪ್ನದಲ್ಲಿ ಅಂದು ಮಹಾಲಕ್ಷ್ಮಿ ಬಂದು ಹೋದಳು. ಗುಣವಂತಿಯೂ ಬಂದು ಹೋದಳು. ಬಾಗಿಲ ಮರೆಯಿಂದ ಕಲ್ಯಾಣಿಯೂ ಹಣಿಕಿಕ್ಕಿದಳು. ಅವಳ ದುಂಡನ್ನ ಮುಖ, ಕರಿಯ ಕೂದಲು, ತುಂಬಿದ ಕಾಲು, ಎತ್ತರಿಸಿದ ಎದೆಯನ್ನು ನೋಡಿ ಪರವಶರಾಗಿ ಎದ್ದು ಹಿಡಿಯ ಹೋದರು. ಆದರೆ ಕೈಗೆ ಸಿಕ್ಕಿದ್ದು ಕಲ್ಯಾಣಿಯಲ್ಲ. ತಲೆಯ ಕಡೆಗೆ ಇಟ್ಟು ಕೊಂಡ ತಮ್ಮ ಕೈ ಬಡಿಗೆ. ಕಣ್ಣು ಬಿಟ್ಟು ನೋಡಿದರು. ನಾಯಿಯ ಮುಖದ ಹಿಡಿಕೆಯ ಕೆಳಗೆ ಬೆಳ್ಳಿಯ ಅನಸು ಕೂಡಿಸಿದ ಮಿರಿಮಿರಿ ಮಿಂಚುವ ಬಿದರಿನ ಕೈಬಡಿಗೆಯಾಗಿದ್ದಿತು.

## ೮

ರಾಮಾಚಾರ್ಯರ ಕೃಷ್ಣಕಾರ ಸ್ಥಾನ ಅದ್ಭುತವಾದುದು! ದತ್ತ ಗುರುಗಳ ಮದುವೆಯ ವಿಷಯವು ದೇವರಿಗೂ ತಿಳಿಯದಂತೆ ಏರ್ಪಡಿಸಿದರು. ಮದುವೆಯ ನಾಲ್ಕುದಿನ ಮೊದಲು ಕೊಲ್ಲಾಪುರಕ್ಕೆ ಹೋಗಿ ಅಲ್ಲಿಯ ತನ್ನ ಗೆಳೆಯ ಶಾಮಭಟ್ಟರಿಗೆ ಭೆಟ್ಟಿಯಾಗಿ ಯಾಜ್ಞಿಕ ಆಚಾರ್ಯರನ್ನು, ಅಡಿಗೆಯವನನ್ನು, ನೀರಿನವನನ್ನು, ಅಡಿಗೆಗೆ ಬೇಕಾದ ಪಾತ್ರೆಗಳನ್ನು, ಬೆಲ್ಲ-ಬೇಳೆಗಳನ್ನು, ಹಾಲು-ಮೊಸರು-ಎಲೆ-ದೊನ್ನೆ-ಊದಿನಕಡ್ಡಿ ಇತ್ಯಾದಿ ಯಾವತ್ತು ಸಾಮಾನುಗಳ ಒಂದು ದೊಡ್ಡ ಯಾದಿಯನ್ನು ಸಿದ್ಧಮಾಡಿ ಅವರಿಗೆ ಒಪ್ಪಿಸಿದರು. ಒಂದೂ ಕೊರತೆಯಾಗಬಾರದು, ಯಾವುದೂ ತಡೆಯಾಗಿ ನಿಲ್ಲಬಾರದು, ಎಲ್ಲವೂ ಸರಾಗವಾಗಿ ಸಾಗಬೇಕು. ಹಣವನ್ನು ಕಡಿಮೆ ಕೊಟ್ಟೆವೆಂದು ಅದಿಲ್ಲದೆ, ಇದಿಲ್ಲದೆ ನಡೆಯಬಾರದು, ವೈದಿಕ ಧರ್ಮ ಯಥಾಸಾಂಗವಾಗಿ ನೆರವೇರಬೇಕು, ಬ್ರಾಹ್ಮಣ ಭೋಜನ ಯಥೇಚ್ಛವಾಗಿ ಪೂರ್ತಿಯಾಗಬೇಕು ಎಂದು ನುಡಿಯುತ್ತ ಇವುಗಳಿಗೆ ಅನುಲಕ್ಷಿಸಿ ಅವರಿಗೆ ಕೈತುಂಬ ಹಣ, ಕಿವಿ ತುಂಬ ಪ್ರಶಂಸೆಯನ್ನು ಸಲ್ಲಿಸಿ ಗೊತ್ತುಮಾಡಿಕೊಂಡು ಬಂದರು. ಭಟ್ಟರು ಆಚಾರ್ಯರ ಧಾರಾಳವಾದ ಮನಸ್ಸು, ಸಾಹಸಕ್ಕೆ ಮೆಚ್ಚಿ ಲಗ್ನಸಿದ್ಧತೆಯ ಹೊಣೆಯನ್ನು ಹೊತ್ತರು. ಕಣ್ಣು ಕುಕ್ಕುವಂತೆ ದುಡ್ಡು ಅಂಗೈ ಮೇಲೆ ಕುಣಿದಾಡಲು ಯಾವುದು ಕೊರತೆಯಾದೀತು! ಯಾವುದು ತಡೆಯಾದೀತು! ಮನಸುಗೊಟ್ಟು ಕೆಲಸಮಾಡಿ ರಾಮಾಚಾರ್ಯರ ದಾರಿಯನ್ನು ಕಾಯ ಹತ್ತಿದರು.

ಮುನ್ನಾದಿನ ರಾತ್ರಿ ಗತ್ತಗುರುಗಳು, ಕರುಣ, ರಾಮಾಚಾರ್ಯರು, ತಮ್ಮ ಮನೆಯವರು ಸ್ಪೇಶಲ್ ಮೋಟಾರು ಮಾಡಿಕೊಂಡು ಕೊಲ್ಲಾಪುರಕ್ಕೆ ಬಂದರು. ಅದೇ ಸಮಯಕ್ಕೆ ಕಲ್ಯಾಣಿ, ಅವಳ ತಾಯಿ, ತಂದೆ ಮತ್ತು ದೂರದ ಒಬ್ಬ ವೃದ್ಧರೂ ಬಂದರು. ಕಲ್ಯಾಣಿ ತನ್ನ ಸಂಗಡ ಇಬ್ಬರು ಗೆಳತಿಯರನ್ನು ಕರೆತಂದಿದ್ದಳು.

ಬಂದ ದಿನದ ಸಂಜೆಯ ಊಟವಾಯಿತು. ಮುಂದಿನ ಮುಹೂರ್ತಕ್ಕೆ

ಅನುಸರಿಸಿ ಗುಡಿಯ ಹೊರಗೆ ಓಲಗದ ಸ್ವರವು ಎದ್ದಿತು. ರಾಮಾಚಾರ್ಯರ ಅವಸರ ಹೇಳತೀರದು. ಕಲ್ಯಾಣಿಯು ಲಗ್ನವೇದಿಕೆಯ ಮೇಲೆ ಬಂದು ನಿಂತಳು. ದತ್ತಗುರುಗಳು ಘುತ್ತೆಂದರು. ಮಂಗಳಾಷ್ಟಕದ ಕೋಲಾಹಲದ ನಡುವೆ ಅಕ್ಷತಾರೋಪಣವಾಯಿತು. ಎಲೆ-ಅಡಿಕೆ-ಹಾರ-ತುರಾಯಿಗಳ ವಿತರಣವಾಯಿತು. ಸಕ್ಕರೆಯನ್ನು ಹಂಚಿದರು. ರಾಮಾಚಾರ್ಯರು ಬೆವರನ್ನು ಒರೆಸಿಕೊಳ್ಳಹತ್ತಿದರು. ಗುರುಗಳು ಎದೆಯನ್ನು ಹಿಡಿದುಕೊಂಡು ಧೈರ್ಯ ಹೊಂದ ಹತ್ತಿದರು. ಶಂಕರರಾಯರು ಗೌರಮ್ಮನವರು ಭಾರವಿಳಿಯಿತೆಂದು ಉಸ್ಸೆಂದು ಒಂದು ಕಡೆಗೆ ಕುಳಿತರು. ಆದರೆ ಕಲ್ಯಾಣಿ ಮತ್ತು ಕರುಣನ ಅವಸ್ಥೆಯನ್ನು ಯಾರು ಅರಿಯಬೇಕು. ಗುಡಿಯೊಳಗಿನ ಲಕ್ಷ್ಮಿದೇವಿಯು ಮೌನಿಯಾಗಿ ಎಲ್ಲವನ್ನು ಅವಲೋಕಿಸುತ್ತಿದ್ದಳು.

ನೋಡ ಬಂದವರು ಕರುಣನೇ ವರನೆಂದು ತಿಳಿದಿದ್ದರು. ಕಲ್ಯಾಣಿಯ ದೇಹದ ಮಾಟದಂತೆ, ವಯಸ್ಸಿನ ಅಳತೆಯಂತೆ ಕರುಣನೇ ತಕ್ಕವನೆಂದು ಅರ್ಥಮಾಡಿದ್ದರು. ಕರುಣನು ವೇಷಭೂಷಣದಿಂದ, ಹರಯದ ಚೆಲುವಿನಾಟ ದಿಂದ ಅಂದು ಇನ್ನೂ ಸುಂದರನಾಗಿ ಕಾಣುತ್ತಿದ್ದನು- ಕಲ್ಯಾಣಿಯು ಲಗ್ನ ಮಂಟಪವನ್ನು ಏರಿ ನಿಂತು ಸುತ್ತಲೆ ಬಗ್ಗಿಸಿದ ತಲೆಯಿಂದ ನೋಡಿದಳು. ದೂರದಲ್ಲಿ ಕರುಣನು ನಿಂತಿದ್ದನು. ಅವನ ಸಪ್ಪನ್ನಮುಖ, ನಿರಾಶೆ ತುಂಬಿದ ಕಣ್ಣು ಕಲ್ಯಾಣಿಯ ಎದೆಗೆ ಬೆಂಕಿಯನ್ನಿಟ್ಟುವು. ಕರುಣನೂ ಕಲ್ಯಾಣಿಯನ್ನು ನೋಡಿದನು. ಎವೆಯಾಡಿಸದೆ ನೋಡಿದನು. ಆ ಮೌನ ಮುಖ, ಆ ನೀರ ಗಣ್ಣು, ಆ ಕಾಂತಿಹೀನ ಕೆನ್ನೆ ದುಃಖವನ್ನುಂಟುಮಾಡಿದುವು. ಐದಾರು ನಿಮಿಷ ಕಣ್ಣುಕಣ್ಣನ್ನು ಮುಚ್ಚಿ ಮುಚ್ಚಿ ತೇಲಿದುವು. ರಾಮಾಚಾರ್ಯರು ಎತ್ತರಿಸಿ ಅಂತಃಪಟವನ್ನು ಮರೆಮಾಡಿ ಮಂತ್ರವನ್ನು ಆರಂಭಿಸಿದರು. ಈ ಸೂಕ್ಷ್ಮದರ್ಶನವು ದತ್ತಗುರುಗಳ ಕಣ್ಣಿಗೂ ಬಿದ್ದಿತು. ಲಗ್ನಕಾರ್ಯವು ಮುಗಿಯಿತು. ಆದರೆ ಕೆಲವು ಕಹಿಮಾತುಗಳು ದತ್ತಗುರುಗಳ ಕಿವಿಯವರೆಗೆ ಅನಿರೀಕ್ಷಿತವಾಗಿ ಬಿದ್ದುವು. ನೋಡ ಬಂದ ಜನರ ಸಾಮಾನ್ಯ ವಿಮರ್ಶೆ ಯನ್ನು ಯಾರು ತಡೆಯಬಹುದು! ರಾಯರು ಮನಸ್ಸನ್ನು ತಬ್ಬಿಹಾಕಿ ಕೇಳಿದರು.

“ಬೆಳೆದು ನಿಂತ ಮಗನು ಮನೆಯಲ್ಲಿರುವನು. ವಿದ್ಯೆಯನ್ನು ಗಳಿಸಿ

ರುವನು. ಲಗ್ನಕ್ಕೂ ಬಂದಿರುವನು. ಅದನ್ನು ಬಿಟ್ಟು ಗುರುಗಳು ತಮ್ಮ ಲಗ್ನವನ್ನು ಮಾಡಿಕೊಳ್ಳಬೇಕೇ? ಈ ವಯಸ್ಸಿನಲ್ಲಿ ಮದುವೆಯಾಗಿ ಹೊಸ ಹೆಂಡತಿಯನ್ನು ಕಟ್ಟಿಕೊಂಡು ಸಂಸಾರ ಹೂಡಿದರೆ ಮಗನ ಗತಿ ಏನು? ಸವತಿಯ ಮಗನನ್ನು ಆ ಬಾಲೆ ಹೇಗೆ ನೋಡಬೇಕು? ಹೊಸ ಹೆಂಡತಿಯ ಥಳಕು-ತುಳುಕುಗಳಲ್ಲಿ ಮಗನು ಲಕ್ಷ್ಯಕ್ಕೆ ಬಂದಾನೆ? ತಾಯಿಯಿಲ್ಲದ ತಬ್ಬಲಿಯು ಅನಾಥನಾಗಿ ಬದುಕಬೇಕು. ಇಲ್ಲದಿದ್ದರೆ ದೇಶಾಂತರ ವಾಸವನ್ನು ಅನುಭವಿಸಲೇಬೇಕು."

"ಹದಿನಾರು-ಹದಿನೆಂಟು ವರುಷದ ಕನ್ನೆಯೆಲ್ಲಿ! ೪೦-೫೦ ವರುಷದ ವರನೆಲ್ಲಿ! ಈ ವಿಷಮ ವಿವಾಹದ ಪರಿಣಾಮವು ಕಟ್ಟಿಟ್ಟಂತೆ! ಮದುವೆಯನ್ನೇ ಮಾಡಿಕೊಳ್ಳಬೇಕಾಗಿದ್ದರೆ ಪುರೂರವನಂತೆ ತನ್ನ ವೃದ್ಧಾಪ್ಯವನ್ನು ಮಗನಿಗೆ ಕೊಟ್ಟು ಮಗನ ತಾರುಣ್ಯವನ್ನು ತಾನು ಪಡೆದರೆ ಬಾಳುವೆಯು ಚೆನ್ನಾದೀತು. ಇಲ್ಲದಿದ್ದರೆ ಜಪಸರ ಹಿಡಿದು ಧ್ಯಾನಕ್ಕೆ ಕುಳಿತ ಗಂಡನ ಮುಂದೆ ಆ ಬಾಲೆ ಹೂಬತ್ತಿಯನ್ನು ಹೊಸೆಯಬೇಕು. ಇದು ಯಾರ ಕಾರಸ್ಥಾನವೋ ತಿಳಿಯದು."

"ಕನ್ನೆಯು ಗಂಡನ ಮನೆಗೆ ಹೋಗುವ ಮುಂದೆ ಒಂದು ಕೆಲಸವನ್ನು ಮಾಡಬೇಕು. ಹಿಂದೂ ಧರ್ಮಕ್ಕೆ ಅದು ಭೂಷಣವೇ ಸರಿ. ಏಕೆಂದರೆ ಹೆಂಡತಿಯು ಗಂಡನ ಅರ್ಧಾಂಗಿ. ಒಂದು ಗಟ್ಟಿಯಾದ ಪರಟೆಯನ್ನು ಒಯ್ಯಬೇಕು. ತಂದೆಯ ಮನೆಯಿಂದ ಬಳುವಳಿಯೆಂದೇ ತರಬೇಕು. ಗಂಡನು ಜೀವದಿಂದಿರುವ ವರೆಗೆ ಅವನ ಉಗುಳು ಹಿಡಿದು ಚೆಲ್ಲಲು ಬರುವುದು, ಇದು ಪುಣ್ಯದ ಕೆಲಸ. ದೇವರು ಮೆಚ್ಚುವಂತಹದು. ಅದೇ ಅವನು ಸತ್ತಮೇಲೆ ಭಿಕ್ಷೆಗೂ ಅನುಕೂಲವಾಗುವುದು. ಅದೂ ಒಂದು ಧರ್ಮದ ಬಾಬು!"

ಈ ಮಾತುಗಳು ಕಲ್ಯಾಣಿಯ ಕಿವಿಗೂ ಬಿದ್ದುವು. ತನ್ನ ತಂದೆಯ ಕೀಳು ಮನಸ್ಸಿನ ಬಡತನಕ್ಕೆ ಪರಿಹಾರವಿಲ್ಲದೆ, ರಾಮಾಚಾರ್ಯರ ಅಸ್ಫುಟ ವ್ಯವಹಾರಕ್ಕೆ ಬಲಿಯಾಗಿ ಒಪ್ಪಿದ್ದಳು. ಅಲ್ಲದೆ ಅವಳು ಇಂದಿನ ತರುಣಿಯರಂತೆ ಕಲಿತವಳೂ ಇರಲಿಲ್ಲ. ಹಳೆಯ ಸಂಪ್ರದಾಯದ ಒಂದು ಕಟ್ಟಿನಲ್ಲಿ ಸಿಕ್ಕು, ಇತರ ಅಣ್ಣತಮ್ಮ, ಅಕ್ಕತಂಗಿಯರ ಸಹವಾಸವಿಲ್ಲದೆ ಬೆಳೆದು ಬಂದವಳು. ತನ್ನ ಐದಾರು ವರುಷದ ಮೌನಗೌರಿಯ ವ್ರತದ ಫಲವು ದತ್ತರಾಯರೆ

ಇದ್ದರೆ ಬಿಡಿಸುವುದೆಂತು? ವಿಧಿಯ ಎಣಿಕೆ! ತನ್ನ ಹಣೆಯಬರಹ! ಎಂಬ ಪುರಾತನ ಅಧ್ಯಾತ್ಮವಿದ್ಯೆಯನ್ನು ನಂಬಿ ಕಣ್ಣೀರು ಹರಿಸಿದ್ದಳು. ದೈವ ತಪ್ಪಿಸಲಿಲ್ಲ. ತಾನು ಸ್ವೆಚ್ಛೆಯಾಗಿ ವರ್ತಿಸಲಿಲ್ಲ. ಮದುವೆಗೆ ಒಪ್ಪಿದ್ದಳು. ಆದರೂ ಆನಂದದ ಒಂದು ಸಂಗತಿ. " ಕರುಣನು ನನಗೆ ಮಗನಾಗುವನು. ವಯಸ್ಸಿನಿಂದ ನನಗೆ ಸಮನಾಗಬಹುದು. ಇಲ್ಲವೆ ಒಂದೆರಡು ವರುಷದಿಂದ ಹಿರಿಯನೂ ಇರಬಹುದು. ನನ್ನಷ್ಟೇ ಎತ್ತರ. ನನ್ನ ಕಣ್ಣಲ್ಲಿ ತುಂಬಿ ನಿಲ್ಲುವನು. ಮನದಲ್ಲಿ ಮೂಡಿ ಬರುವನು. ಎಂಥ ಸುಸ್ವರೂಪಿ. ಎಂಥ ಸುದೃಢ. ಮೇಲೆ ಕಲಿತವನು. ಶಾಂತ ಮುದ್ರೆಯವನು. ಗಂಭೀರ ನಡೆಯುವನು. ಕಣ್ಣಿಗೆ ಕುತುಹಲನು. ಕಿವಿಗೆ ಕೋಮಲನು. ನಾನು ನನ್ನ ಬಾಳುವೆಯ ಹಂದರದಲ್ಲಿ ಇದಕ್ಕು ಒಳ್ಳೆಯದಾದ ಫಲವನ್ನು-ಶಿಶುವನ್ನು ಪಡೆಯಬಹುದು! ನನಗಂತೂ ಸಾಧ್ಯವಿಲ್ಲ. ದುಃಖ, ಸಂತಾಪ, ಆತ್ಮಗ್ಲಾನಿ, ನಿರಾಶೆ, ಆತ್ಮವಂಚನೆ, ಭಯ ಮುಂತಾದ ವಿಕಾರಗಳಿಂದ ತುಂಬಿದ ಮನಸ್ಸು, ಮಾತು, ಮೈ ಅಂಥ ಮಗನನ್ನು ಪಡೆಯಲಾರದು. ನನಗೆ ಗೊತ್ತು. ದೇವರು ಏನೇ ಮಾಡಲಿ. ನನ್ನ ವಿರುದ್ಧ ಅವನು ಎಷ್ಟೇ ಒಳಸಂಚು ಹೂಡಲಿ. ಅಂಥ ಮಗನನ್ನು ನನ್ನ ಹೊಟ್ಟೆಗೆ ಕೊಡಲಾರ. ನನ್ನ ಮನದ ನನ್ನ ಭಾವನೆಯ ಪ್ರತಿಬಿಂಬವೇ ನನಗೆ ಹುಟ್ಟುವ ಮಕ್ಕಳು! ಕರುಣನಂತಹ ಮಕ್ಕಳು ನನಗೆ ಹುಟ್ಟಲಾರವು. ಈಗ ಆ ಶ್ರಮವನ್ನು ತಪ್ಪಿಸಿರುವನು. ನನ್ನ ಬಾಳಿನ ಉದ್ದಕ್ಕೂ ಬೇಡ ಬಯಸುವ ಮಗನು ಈಗಾಗಲೇ ಹುಟ್ಟಿರುವನು, ಬೆಳೆದಿರುವನು. ನನ್ನ ಹದಿನಾರು—ಹದಿನೆಂಟು ವರುಷದ ಲಾಲನೆ—ಪಾಲನೆಯ ಶ್ರಮವನ್ನು ಬಿಡಿಸಿರುವನು. ಅವನನ್ನು ಕಂಡು ದಿನಗಳನ್ನು ಕಳೆದರೆ ಸರಿ. ನನ್ನ ಹೊಟ್ಟೆಯ ಮಗನ ವಾತ್ಸಲ್ಯವನ್ನು ಅವನ ಮೇಲೆ ಆರೋಪಿಸಿದರೆ ಸರಿ. ಅವನು ಅದಕ್ಕೆ ಪಾತ್ರನಾಗುವನು. ಈಗ ಅವನ ಮುಖದ ಮೇಲೆ ಕಂಡು ಬರುವ ನಿರಾಶೆಯನ್ನು ಹೊಡೆದೋಡಿಸಬೇಕು. ದುಃಖವನ್ನು ಬಳಿದು ತೆಗೆಯಬೇಕು. ಉತ್ಸಾಹದ ಬೀಜಮಂತ್ರವನ್ನು ಊದಬೇಕು. ಆನಂದದ ವಾತಾವರಣವನ್ನು ಸುತ್ತೆಲ್ಲ ಹರಹಬೇಕು. ಬಾಳುವ, ಬದುಕುವ ರುಚಿಯನ್ನು ಕಲಿಸಬೇಕು. ಇದರಿಂದ ಅವನೂ ಬದುಕುವನು. ನಾನೂ ಬದುಕುವೆನು, ಅವರು ಮುದುಕರಾದರೂ ಮಗನು ತರುಣನಿರುವನು. ಗಂಡನ ಸೇವೆ

ಧರ್ಮವಾಯಿತು. ಮಗನ ಮಾತು–ಕೃತಿ–ವಾತ್ಸಲ್ಯವಾಯಿತು, ಎಂಬ ಹಿಂದೂ ಸಂಸ್ಕೃತಿಯ ಸಿದ್ಧಾಂತದ ಮೇಲೆ ಮನಸ್ಸಿನಲ್ಲಿ ಬೆಳಕನ್ನು ಹುಟ್ಟಿಸಿಕೊಂಡಳು. ಈ ಭಾವನೆಗಳೇ ಅವಳಿಂದ ಯಾವ ವಿಕೃತಿಯನ್ನಾಗಲಿ, ವಿಧ್ವಂಸಕ ಕಾರ್ಯವನ್ನಾಗಲಿ ಮಾಡಿಸಲಿಲ್ಲ. ಈ ಗಂಡ ನನಗೆ ಬೇಡ—ಎಂಬುದು ಗಟ್ಟಿಮುಟ್ಟಾಗಿದ್ದರೆ ಲಗ್ನಪೂರ್ವದಲ್ಲಿ ಇಲ್ಲವೆ ಲಗ್ನಮಂಟಪದಲ್ಲಿ ಗೊಂದಲ ಕೋಲಾಹಲವನ್ನು ಎಬ್ಬಿಸುವುದು ಅಸಾಧ್ಯವಿರಲಿಲ್ಲ. ಆದರೂ ಆ ದೊಡ್ಡ ಮನಸಿನ, ದೂರದೃಷ್ಟಿಯ, ತಾಳ್ಮೆಯ ಮೂರ್ತಿಯಾದ ಕಲ್ಯಾಣಿಯು ಸಮುದ್ರದಂತೆ ಶಾಂತಳಾಗಿ ಎಲ್ಲವನ್ನು ಕೊನೆಗಾಣಿಸಿದಳು. ತನ್ನ ಬಾಳಿಗೆ ಒಂದು ಧ್ಯೇಯವನ್ನು ಗೊತ್ತುಮಾಡಿಕೊಂಡಳು.

ಆದರೆ ಕರುಣನ ವಿಚಾರವೇ ಬೇರೆ. ಅವನಿಗೆ ಅರ್ಥವಾಗದ ಒಂದು ಸಮಸ್ಯೆಯು ಅಂಟಿಕೊಂಡು ಮನದ ಶಾಂತಿಯನ್ನು ಕದಡಿಬಿಟ್ಟಿದ್ದಿತು. ಅದೇ ಅವನ ವಿಚಾರ, ಧ್ಯಾನ! ಇದು ಹೀಗೇಕಾಯಿತು? ತಂದೆಯವರು ಮೋಸದಿಂದ, ವಂಚನೆಯಿಂದ, ಯಾರಿಗೂ ತಿಳಿಸದೆ ಮದುವೆಯನ್ನು ಏಕೆ ಆದರು? ಇದರರ್ಥವೇನು?

ಗುರುಗಳ ಮದುವೆಗೆ ಕರುಣನು ಯಾವ ಬಗೆಯ ಆಂತಕವನ್ನು ಒಡ್ಡುತ್ತಿರಲಿಲ್ಲ. ಅವರು ಅವನ ತಂದೆಯವರು, ಗುರುಗಳು. ಅವರನ್ನು ಗೌರವದಿಂದ ಕಾಣುತ್ತಿದ್ದನು. ಭಕ್ತಿಯಿಂದ ನೋಡುತ್ತಿದ್ದನು. ಸೇವಕನಂತೆ ನಡೆಯುತ್ತಿದ್ದನು. ಅದು ಕರ್ತವ್ಯ, ತನ್ನ ಹೊಣೆ, ಧರ್ಮದ ಒಂದು ಕೆಲಸವೆಂದು ತಿಳಿದಿದ್ದನು. ಅವರಾದರು ಮಗನನ್ನು ಶ್ರದ್ಧೆಯಿಂದ, ಸೌಜನ್ಯದಿಂದ ವಾತ್ಸಲ್ಯದಿಂದ ಕಾಣುತ್ತಿದ್ದರು. ಹೆಂಡತಿಯು ತೀರಿದ ಮೇಲೆ ಈ ಉದಾರ ಭಾವನೆಗಳು ಇನ್ನೂ ವೃದ್ಧಿಂಗತವಾಗಿದ್ದುವು. ತಾಯಿಯ ನೆನಪು, ತಾಯಿ ಸತ್ತ ದುಃಖ, ತನಗೆ ತಾಯಿಯಿಲ್ಲವೆಂಬ ಜ್ಞಾನ ಕೂಡ ಆಗಬಾರದೆಂದು ಪ್ರೇಮದಿಂದ ಕಾಣುತ್ತಿದ್ದರು. ಈ ಭಾವನೆಯು ೮–೧೦ ವರುಷ ಅನ್ಯಾಹತವಾಗಿ ಸಾಗಿತು. ನಡುವೆ ಧೂಮಕೇತುವಿನಂತೆ ಗುಣವಂತಿ ಗೋಚರಿಸಿದಳು. ತಂದೆಯವರು ಅವಳಿಗೆ ಮರುಳಾಗಿರುವರೆಂಬುದನ್ನೂ ಅರಿತನು. ಆದರೆ ಇದು ತಂದೆಯವರ ಅಕೃತ್ಯವೆಂದು ತಿಳಿಯಲಿಲ್ಲ. ಅವಳೂ ಅಸಾಧಳು. ಇವರೂ ಹೆಣ್ಣಿನ ವಂಚಕರು. ಅವರವರ ರುಚಿ ಅವರ ಪಾಲಿಗೆ! ಎಂದು

ಮನೆಯನ್ನು ಬಿಟ್ಟು ಹೊರಗೆ ಹೋಗಿ ತನ್ನಿಂದಾಗಬಹುದಾದ ಅಥವಾ ಆದೀ ತೆಂಬ ಶಂಕೆಯ ನಿವಾರಣೆಯನ್ನು ಮಾಡುವುದಕ್ಕೆ ಅನುಕೂಲಸ್ಥನಾಗಿದ್ದನು. ಕೆಲವರು ಗುಣವಂತಿ—ಗುರುಗಳ ಬಗ್ಗೆ ಒಂದೆರಡು ಅಪಶಬ್ದಗಳನ್ನು ನುಡಿದಿದ್ದರು. ಅವರಿಗೆ ಯೋಗ್ಯವಾದ ಉತ್ತರಗಳನ್ನು ಹೇಳಿ ಅಲ್ಲಗಳೆದಿದ್ದನು. ಇನ್ನು ಕೆಲವರಿಗೆ—ಅವರು ನನಗೆ, ನಿಮಗೆ ಕಲಿಸಿದ ಗುರುಗಳು. ಹೀಗೆ ಅನ್ಯಾಯದ ಮಾತನ್ನು ಆಡಿದರೆ ಏನೆನ್ನಬೇಕು! ನನ್ನ ತಂದೆಯನ್ನು ನಾನು ಬಲ್ಲೆ. ಅವರ ಪ್ರೇಮ, ವಿಶ್ವಾಸ, ದೃಢಮನಸು, ದೈವಭಕ್ತಿ ನನಗೆ ಗೊತ್ತು. ಒಂದು ಹೆಣ್ಣಿನ ಸಂಗಡ ಒಂದು ಗಂಡು ಮಾತಾಡಿದರೆ ವ್ಯಭಿಚಾರದ ಮಾತನ್ನು ಆಡುವುದು ನಮ್ಮ ಹೃದಯದಲ್ಲಿಯ ಸಂಶಯ ಪಿಶಾಚಿಯ ಮಾತು. ಅದೇ ನುಡಿಯುವುದೆಂದು ತಿಳಿಯುವೆ ಎಂದು ಪ್ರೌಢರಂತೆ ನುಡಿದು ಸಮಾಧಾನಪಡಿಸಿದ್ದನು. ಇಂಥ ಸತ್ಪಾತ್ರ ಮಗನನ್ನು ವಂಚಿಸುವುದು ಚೋದ್ಯವೆಂದು ತಿಳಿದಿದ್ದನು. ಗುಣವಂತಿಯನ್ನು ಮನೆಯಲ್ಲಿಟ್ಟುಕೊಂಡಿದ್ದರೂ ಬೇಡವೆನ್ನುತ್ತಿರಲಿಲ್ಲ. ಅಥವಾ ಸಜಾತಿಯ ಒಬ್ಬಳನ್ನು ಸರಳವಾಗಿ ಮದುವೆ ಮಾಡಿಕೊಂಡಿದ್ದರೂ ಅಹ ಎನ್ನುತ್ತಿರಲಿಲ್ಲ. ಆದರೆ ಈಗ ಆದುದೇನು? ತನ್ನನ್ನು ಅಲ್ಲಿಯವರೆಗೆ ಕರೆದುಕೊಂಡು ಹೋಗಿ ಕಲ್ಯಾಣಿಗೆ ತೋರಿಸಿದರು. ತನಗೂ ನೋಡಲು ಸಂಜ್ಞೆಮಾಡಿದರು. ಹೆಣ್ಣು ನೋಡಿ ಬಂದೆವೆಂದು ಪ್ರಚಾರ ಮಾಡಿದರು. ನಾನು ಒಪ್ಪಿರುವೆನೆಂದೂ ಅರಿತರು. ನಾನು ವರನೆಂದೇ ಭಾವನೆಯನ್ನು ಹುಟ್ಟಿಸಿದರು. ನಾನು ಗೆಳೆಯರ ಮುಂದೆ ಅವಳ ಪ್ರಶಂಸೆ ಮಾಡಿದೆ. ಅಂಗ ಪ್ರತ್ಯಂಗಗಳ ವರ್ಣನೆ ಹೇಳಿದೆ. ಒಳ್ಳೆಯವಳೆಂದು ತಿಳಿಸಿದೆ. ಆದರೆ ಲಗ್ನಮಂಟಪದ ವೇದಿಕೆಯ ಮೇಲೆ ತಂದೆಯವರು ಹೋಗಿ ನಿಂತರು. ಆಗ ಕಲ್ಯಾಣಿಯ ಅವಸ್ಥೆ ಹೇಗಾಗಿರಬೇಕು! ಅವಳು ಯಾರನ್ನು ಮದುವೆಯಾಗಬೇಕೆಂದು ಬಂದಳು? ಆದರೆ ಯಾರ ಜೊತೆಗೆ ಗಂಟು ಹಾಕಿಕೊಂಡಳು? ಇದೆಂತಹ ಮೋಸ! ಇದೆಂತಹ ಆತ್ಮವಂಚನೆ! ತಂದೆಯವರ ಸದ್ಭಾವನೆಗಳೆಲ್ಲ ಏಕೆ ಕರಗಿದುವು! ಅವರ ಆದರ್ಶವೆಲ್ಲ ಹೇಗೆ ಒಡೆದು ಹೋಳು ಹೋಳಾಯಿತು! ಗುಣವಂತಿಯು ಬೇಡಾದಳೇಕೆ? ಇದೇನು? ಒಂದು ಹೆಣ್ಣಿನ ಕತ್ತನ್ನು ಹಿಸುಕಲು ಏಕೆ ಸಿದ್ಧರಾದರು?

ಗುಣವಂತಿಯು ಪ್ರಪಂಚದ ರುಚಿಯನ್ನು ಅನುಭವಿಸಿದವಳು. ತಾನಾಗಿ

ಬಂದವಳು. ಹುಡುಕುತ್ತ ಬಂದವಳು. ತಂದೆಯವರು ಕೂಡಿದಷ್ಟು ದಿನ ಇಟ್ಟುಕೊಂಡು ಬೇಡಾದ ದಿನ ಹೊರಗೆ ಹಾಕಬಹುದಿದ್ದಿತು. ಅವಳೇ ಬಿಡ ಬಹುದಿದ್ದಿತು. ಈ ವ್ಯವಹಾರ ಹೀಗೆಯೇ ಆಗುತ್ತಿದೆ. ಜನರೂ ಹೆಸರಿಡರು. ಆದರೆ ಕೆಲದಿನಗಳ ಆಶೆಗಾಗಿ ಒಬ್ಬ ತರುಣಿಯ ಇಡಿಯ ಬಾಳನ್ನು ಹಾಳು ಮಾಡುವುದು ಎಲ್ಲಿಯ ನ್ಯಾಯ! ತಂದೆಯವರಿಗೆ ತಮ್ಮ ದೈಹಿಕ—ಅನಿರೀಕ್ಷಿತ ವಾಗಿ ವ್ಯೆದೋರಿದ ಉನ್ಮಾದದಲ್ಲಿ ಗುಣವಂತಿಯೇನು? ಕಲ್ಯಾಣಿಯೇನು? ಹಸಿದವನು ಅಭಿಷ್ಯಭೋಜನವನ್ನು ಮಾಡಲು ಹಿಂಜರಿಯ. ಪುರಾತನ ಕಾಲದಲ್ಲಿಯೂ ಇಂಥ ದೃಷ್ಟಾಂತಗಳಿವೆ. ಧರ್ಮದ ಮುಸುಕಿನಲ್ಲಿ ಕದನ್ನ ವನ್ನು ಉಂಡರೆ ನ್ಯಾಯವಾದೀತೇ? ದೇವರಿಗೆ ನೈವೇದ್ಯವನ್ನು ತೋರಿಸಿ ಭಕ್ಷಿಸಿದರೆ ಸಜ್ಜನರು ಮೆಚ್ಚಬಹುದೇ! ಇದಕ್ಕೆ ಸಮಾಜವು, ಸಮಾಜದಲ್ಲಿಯ ಕೆಲವು ವ್ಯಕ್ತಿಗಳು ಪ್ರೋತ್ಸಾಹವನ್ನು ಕೊಡುವರು. ಇದೆಂತಹ ಆಶ್ಚರ್ಯ. ತಂದೇ, ಇದೇನು ಮಾಡಿದಿರಿ! ಯಾವ ಪಿಶಾಚಿಯ ಪ್ರೇರಣೆಯಿಂದ ಇದನ್ನು ಮಾಡಲು ಯತ್ನಿಸಿದಿರಿ! ತಂದೇ ನೀವು ಗುರುಗಳೆಂದು ತಿಳಿದಿದ್ದೆ. ತಾಯಿ ಎಂದು ತಿಳಿದಿದ್ದೆ. ನನ್ನ ಆದರ್ಶ, ಪರದೈವ ನೀವೇ ಎಂದು ತಿಳಿದಿದ್ದೆ. ಆದರೆ ಆ ಸದ್ಭಾವನೆಗಳಿಗೆ ಈಗ ಸ್ಥಾನವೆಲ್ಲಿ? ಏನೆಂದು ನಂಬಲಿ? ಯಾವ ಮಾತಿನ ಮೇಲೆ, ಯಾವ ಕೃತಿಯ ಮೇಲೆ ನಂಬಲಿ? ಹೃದಯದಲ್ಲಿ ಇಷ್ಟೊಂದು ವಿಷವನ್ನಿಟ್ಟುಕೊಂಡು ನನ್ನನ್ನು ಕೃತಕ ವಾತ್ಸಲ್ಯದಿಂದ ರಕ್ಷಿಸಿ ತಂದಿರಾ? ನೀವು ಅಟ್ಟು ಹಾಕಿದ ವಿಷಾನ್ನವನ್ನು ಈವರೆಗೆ ಉಂಡೆನಲ್ಲ! ಇನ್ನು ಮುಂದೆ........

ಕಲ್ಯಾಣಿ, ನೀನು ನನ್ನ ಮಡದಿಯಾಗಲಿರುವೆಯೆಂದು ತಿಳಿದಿದ್ದೆ. ಈಗ ತಂದೆಯ ಹೆಂಡತಿಯಾಗಿ ಮನೆಗೆ ಬಂದಿರುವೆ. ತಾಯಿಯೆಂದು ಕರೆಯ ಬೇಕೇ? ನಿನ್ನ ಮೂಗು, ಕಣ್ಣು, ತುಟಿ, ಕೆನ್ನೆ ಮುಂತಾದ ಅಂಗ ಉಪಾಂಗ ಗಳ ಸೌಂದರ್ಯವನ್ನು ನೋಡಿ ಮೆಚ್ಚಿಕೊಂಡು ಸಂತೋಷಪಟ್ಟ ನನ್ನ ಮನದ ಉಲ್ಬಣಾವಸ್ಥೆಗೆ ಏನೆಂದು ಸಮಾಧಾನವನ್ನು ಹೇಳಬೇಕು. ನೀನು ನಿಂತ ಮನೆಯಲ್ಲಿ ನಾನು ಹೇಗೆ ನಿಲ್ಲಲಿ? ಹೆಂಡತಿಯೆಂದು ಬರಲಿರುವವಳು ತಾಯಿಯಾಗಿ ಬಂದರೆ ಗಂಡಸು ಹೇಗೆ ನಡೆಯಬೇಕು? ಜೀವನವನ್ನು ಹೇಗೆ ಒಪ್ಪಿಸಲಿ? ಭಾವನೆಗಳನ್ನು ಹೇಗೆ ಸಮುದಾಯಿಸಲಿ? ಕಲ್ಯಾಣೀ, ಈ

ಭಯಂಕರವಾದ ಸಮಸ್ಯೆಗೆ ಏನೆಂದು ಪರಿಹಾರವನ್ನು ಮಾಡಿಕೊಳ್ಳಲಿ ?

ಇಂಥ ಸಾವಿರಾರು ತರ್ಕ, ವಿತರ್ಕ, ಕುತರ್ಕಗಳ ಜಂಜಾಟದಲ್ಲಿ ಕರುಣನು ವಿಹ್ವಲಗೊಂಡನು. ಸಮಸ್ಯೆ ತೀರ ಜಟಿಲವಾಯಿತು. ಬುದ್ಧಿ ವಿಚಾರಿಸಿ ವಿಚಾರಿಸಿ ಮೊಟಕಾಯಿತು, ಮಂಕಾಯಿತು, ಮೊಂಡವಾಯಿತು. ತಲೆಯಿಂದ ದೂರಾಗಲಿಲ್ಲ. ಅದು ಹಗಲು-ರಾತ್ರಿ ನೆಲಮುಗಿಲು ವ್ಯಾಪಿಸಿ ಎದುರು ನಿಂತು ಏನು ? ಏನು ? ಎಂದು ಕೇಳಿದಂತೆ ಎನಿಸುತ್ತಿದ್ದಿತು. ಇವುಗಳಿಂದ ಅವನ ವ್ಯಕ್ತಿತ್ವವೇ ಬೇರಾಯಿತು. ಇರುವಿಕೆಯೇ ಬೇರಾಯಿತು.

ಕಲ್ಯಾಣಿಯು ಕೊಲ್ಲಾಪುರದಿಂದ ಗಂಡನ ಸಂಗಡ ಬೆನ್ನು ಹತ್ತಿ ಕಣ್ಣೀರು ಸುರಿಸುತ್ತ ಊರಿಗೆ ಬಂದ ಸಮಯದಲ್ಲಿ ಕರುಣನು ಮಿತಭಾಷಿ, ನಿರಾಶಾಶಿರೋಮಣಿ, ದುಃಖದ ಪ್ರತಿಮೆಯಾಗಿದ್ದನು. ಕಲ್ಯಾಣಿ ಇದನ್ನು ಸ್ಪಷ್ಟವಾಗಿ ಅರಿತಳು. ಲೋಕಕ್ಕೇ ಶಿಕ್ಷಣವನ್ನು ಕೊಡುವ ಗುರುಗಳೂ ಒಂದಿಷ್ಟು ತಿಳಿದರು.

ಆದರೂ ಮೂರು ವಿಭಿನ್ನ ಪ್ರಕೃತಿಯ ವ್ಯಕ್ತಿಗಳು ಲೌಕಿಕರ ಕಣ್ಣಲ್ಲಿ ತಂದೆ, ಹೆಂಡತಿ, ಮಲಮಗ ಎಂಬ ಹೆಸರಿನಿಂದ ಒಂದೇ ಮನೆಯಲ್ಲಿ ವಾಸಿಸ ಹತ್ತಿದರು.

೯

ಕಲ್ಯಾಣಿಯ ಸಂಗಡ ೪—೫ ದಿನಗಳ ವರೆಗೆ ನಿಲ್ಲಲು ಅವಳ ತಾಯಿ ಗೌರಮ್ಮ, ಇನ್ನೊಬ್ಬ ದೂರದ ಆಪ್ತಳು ಸೀತಮ್ಮ ಬಂದಿದ್ದರು. ಇಷ್ಟು ದಿನಗಳಲ್ಲಿ ಗುರುಗಳ ಮನೆಯ ಸ್ಥಿತಿಗತಿ, ಊರಲ್ಲಿ ಅವರ ಪ್ರತಿಷ್ಠೆಗಳನ್ನು ಅರಿತರು. ಗುರುಗಳಿಗೆ ಸಂಬಳವು ಸಾಕಷ್ಟಿದ್ದಿತು. ಮಕ್ಕಳಿಗೂ ಮನೆಯಲ್ಲಿ ಓದು ಹೇಳುತ್ತಿದ್ದರು. ಅವರ ಪಾಲಕರು ಹಣವನ್ನು ಕೊಟ್ಟೋ, ಕಾಳು-ಕಡ್ಡಿಗಳನ್ನು ಒದಗಿಸಿಯೋ ಸಹಾಯವನ್ನು ಮಾಡುತ್ತಿದ್ದರು. ಆದರಿಂದ ಪ್ರಪಂಚಕ್ಕೆ ಕೊರತೆಯಿರಲಿಲ್ಲ. ಮನೆಯೂ ದೊಡ್ಡದಿದ್ದಿತು. ಬಚ್ಚಲ ಮನೆ, ಅಡಿಗೆಯ ಮನೆ, ಅದರ ಮುಂದೆ ನಡುಮನೆ, ಪಕ್ಕದಲ್ಲಿ ಒಂದು ಕೋಣೆ, ಮುಂದುಗಡೆ ವಿಸ್ತಾರವಾದ ಪಡಸಾಲೆ, ಹೊರಗೆ ಎತ್ತರವಾದ ಕಟ್ಟೆ, ಅರ್ಧ ಗೋಡೆ ನಿಂತು ಕೂಡಲು ಹರಟೆ ಹೊಡಯಲು ಅನುಕೂಲವಿದ್ದಿತು. ಮನೆಯ ತಲೆಬಾಗಿಲನ್ನು ಅದಕ್ಕೆ ಕೂಡಿಸಿದ್ದರು. ಅರ್ಧಗೋಡೆಯ ಮೇಲುಗಡೆ ಕಬ್ಬಿಣ ಪಟ್ಟಿಗಳನ್ನು ಕೂಡಿಸಿ ಮರೆಮಾಡಿಕೊಂಡಿದ್ದರು. ಪರಿಚಿತರು, ಅಪ ರಿಚಿತರು ಸಹಸಾಲಲ್ಲಿಯೇ ಕುಳಿತು ಹರಟೆಯನ್ನು ಹೊಡೆಯುತ್ತಿದ್ದರು. ಕರುಣನು ಒಂದು ಪಕ್ಕದಲ್ಲಿ ತನ್ನ ಓದು, ಬರಹ, ಮಲಗುವುದನ್ನು ಮಾಡಿ ಕೊಂಡಿದ್ದನು. ಕಟ್ಟಿಗೆಯ ಫಳಿಗಳನ್ನು ಜೋಡಿಸಿ ಒಂದು ಕೋಣೆಯಾಗಿಯೇ ಮಾಡಿಕೊಂಡಿದ್ದನು. ಮನೆಯು ಒಳ್ಳೆಯದಾಗಿ ಕಂಡಿತು.

ಗೌರಮ್ಮ-ಸೀತಮ್ಮನು ನೆರಮನೆಯ ಹೆಣ್ಣುಮಕ್ಕಳ ಪರಿಚಯವನ್ನು ಮಾಡಿಕೊಂಡರು. ಕಲ್ಯಾಣಿಗೂ ಪರಿಚಯ ಮಾಡಿಸಿದರು. ಓರಗೆಯ ಒಬ್ಬಿಬ್ಬ ಸುಮಂಗಲೆಯರು ಬಂದು ಹೋಗಿ ಮಾಡಹತ್ತಿದರು. ಇಷ್ಟು ಪರಿಚಯವಾದರೂ ಕಲ್ಯಾಣಿಯ ಸಂಕೋಚವು ಹೋಗಿರಲಿಲ್ಲ. ಮನದ ಬೇಗುದಿ ಕಡಿಮೆಯಾಗಿರಲಿಲ್ಲ. ಒಂದು ಬಗೆಯ ವಿಚಾರದ ತಂದ್ರಿಯಲ್ಲಿಯೇ ಇರುತ್ತಿದ್ದಳು.

ನಾಲ್ಕಾರು ದಿನಗಳ ವಾಸದಿಂದ ಮಗಳಲ್ಲಿ ಪ್ರಗತಿಯು ಕಂಡುಬರಲಿಲ್ಲ. ಹೇಳಿದ ಕೆಲಸಗಳನ್ನು ಮಾಡುತ್ತಿದ್ದಳು. ಹಸಿವೆ ಎನಿಸದಷ್ಟು ಉಣ್ಣುತ್ತಿ

ದ್ದಳು. ಹರಟೆಯಲ್ಲಿ ತಾನೂ ಹೋಗಿ ಕೂಡುತ್ತಿದ್ದಳು. ಆದರೆ ಹೊಲಿದ ಬಾಯನ್ನು ಬಿಚ್ಚುತ್ತಿರಲಿಲ್ಲ. ನಗುವ ಸಮಯದಲ್ಲಿಯೂ ಅದೇ, ಬಿಸಿಯುಸಿರು ಬಿಡುವ ಸಮಯದಲ್ಲಿಯೂ ಅದೇ! ಮುಖದ ವಿಕಾರವಾಗಲಿ, ಕಣ್ಣಿನ ಸಂಕೋಚವಾಗಲಿ ಯಾವುದನ್ನೂ ವ್ಯಕ್ತಪಡಿಸುತ್ತಿರಲಿಲ್ಲ. ತಲೆಯನ್ನು ಬಗ್ಗಿಸಿ ಯಾವುದೇ ಹೆಣಿಕೆಯನ್ನು ಹಾಕುತ್ತ ಸುಮ್ಮನಿರುತ್ತಿದ್ದಳು. ಬೆರಳಿಗೆ ಸೂಜಿ ಚುಚ್ಚಿದರೆ, ಕೆಳಗೆ ಜಾರಿ ಸೂಜಿ ಬಿದ್ದರೆ ಹಾಹೂಗಳನ್ನು ಸಹ ಮೆಲ್ಲಗೆ ನುಡಿಯುತ್ತಿದ್ದಳು. ಆಗ ನಗುವು ಇದ್ದರೂ ಎಚ್ಚರಿಲ್ಲ, ಆಶ್ಚರ್ಯಪಡುವ ಸಂಗತಿಯಿದ್ದರೂ ಎಚ್ಚರಿಲ್ಲ.

ಊರಿಗೆ ಬಂದ ದಿವಸವೇ ಮನೆಯಲ್ಲಿ ಒಂದು ವಿಚಿತ್ರ ಘಟನೆ ನಡೆಯಿತು.

ಅಂದು ರಾತ್ರಿ ಊಟವಾದ ಮೇಲೆ ಒಂದಿಷ್ಟು ಹರಟೆಯಾಯಿತು. ಗೌರಮ್ಮ, ಸೀತಮ್ಮನು ಅಡಿಗೆಯ ಮನೆಯಲ್ಲಿ ತಮ್ಮ ಹಾಸಿಗೆಯನ್ನು ಬಿಚ್ಚಿದರು. ನಡುಮನೆಯ ಪಕ್ಕದ ಕೋಣೆಯಲ್ಲಿ ಗುರುಗಳ ಸಾಲಂಕೃತ ಹಾಸಿಗೆಯಾಯಿತು. ಹತ್ತಿರವೇ ಕಲ್ಯಾಣಿಯ ಹಾಸಿಗೆ ಸುರುಳಿಯಾಗಿ ನಿಂತಿದ್ದಿತು. ಕಲ್ಯಾಣಿ ನಾನೊಲ್ಲೆನೆಂದು ಎಷ್ಟು ಆಕ್ರೋಶ ಮಾಡಿದರೂ ತಾಯಿ ಮತ್ತು ಸೀತಮ್ಮ ಕೇಳಲಿಲ್ಲ. ಛೀ ಥೂ ಹಾಕಿ ಅವಳನ್ನು ಎಳೆದು ಒಂದು ಪಕ್ಕಕ್ಕೆ ನಿಲ್ಲಿಸಿ ಹಾಸಿಗೆಯನ್ನು ಹಾಸಿದರು. ಕರುಣನು ಹೊರಗೆ ಹಾಸಿಕೊಂಡನು. ಮಲಗುವ ಸಮಯವಾಯಿತು ಕರುಣನು ಕೋಣೆಗೆ ಹೋಗಿ ದೇವರನ್ನು ನೆನೆಯುತ್ತ ಹಾಸಿಗೆಯ ಮೇಲೆ ಅಡ್ಡಾದನು. ತಾಯಿ, ಸೀತಮ್ಮ ತಮ್ಮ ಹಾಸಿಗೆಯ ಮೇಲೆ ಕುಳಿತರು. ಎದುರಿನ ಗೋಡೆಗೆ ಕಲ್ಯಾಣಿಯು ನಿಂತಿದ್ದಳು. ಗುರುಗಳು ಕೋಣೆಯಲ್ಲಿ ಕುಳಿತು ಭಗವದ್ಗೀತೆಯನ್ನು ನುಡಿಯುತ್ತಿದ್ದರು. ಆಗಾಗ ಬಾಗಿಲ ಕಡೆಗೆ ನೋಡುತ್ತಿದ್ದರು. ನಾಲ್ಕೈದು ಸಾರೆ ನೋಡಿ ನಿರಾಶರಾಗಿ ತಮ್ಮ ಓದನ್ನು ಮುಂದೆ ಸಾಗಿಸಿದ್ದರು. ಅಡಿಗೆಯ ಮನೆಯಲ್ಲಿ ಪಿಸುಮಾತುಗಳು ನಡೆದಿದ್ದವು.

" ಹೋಗು ಕಲ್ಯಾಣಿ ! ಇದೇನು ಹುಡುಗಾಟಿಕೆ ! " ತಾಯಿಯು ಒಂದೇ ಸಮನೆ ನುಡಿಯುತ್ತಿದ್ದಳು.

ಕಲ್ಯಾಣಿಯು ಕಣ್ಣೀರು ಉದಿರಿಸುತ್ತ ಹಾಗೇ ನಿಂತಿದ್ದಳು.

ಸೀತಮ್ಮ ಎದ್ದು ಬಂದು ತನ್ನ ಸೆರಗಿನಿಂದ ಒರಸುತ್ತ "ಹೀಗೆ ಮಾಡ ಬಾರದು ಕಲ್ಯಾಣಿ! ಜನರಿಗೆ ತಿಳಿದರೆ ಏನೆಂದಾರು! ಹೋಗು" ಎಂದು ಗದ್ದ–ತುಟಿಗಳನ್ನು ಹಿಡಿದು ಹೇಳಿದರು.

ಕಲ್ಯಾಣಿಯು ಇನ್ನೂ ಅಳುತ್ತಿದ್ದಳು.

"ಕಲ್ಯಾಣಿ, ನೀನು ಒಪ್ಪಿದ ಮೇಲೆಯೇ ನಾವು ಮದುವೆಯನ್ನು ಮಾಡಿರುವೆವು. ನಿನ್ನನ್ನು ಕಂಬಕ್ಕೆ ಕಟ್ಟಿ ಮಾಡಿಲ್ಲ. ನಿನಗೆ ಬೇಡಾಗಿದ್ದರೆ ನಾವು ಒತ್ತಾಯ ಮಾಡುತ್ತಿರಲಿಲ್ಲ. ಈಗ ಹೀಗೆ ಮಾಡಿದರೆ ಸರಿಯಾದೀತೇ? ಹೋಗು ..." ಎಂದು ನುಡಿದು ಗೌರಮ್ಮ ಸುಮ್ಮನಾದಳು.

ಕಲ್ಯಾಣಿ ಬಿಕ್ಕುತ್ತಿದ್ದಳು.

"ಹೋಗು" ಸೀತಮ್ಮನೆಂದಳು.

"ಈ ಸಂಗತಿ ಜನರಿಗೆ ತಿಳಿದರೆ ನಮ್ಮ ಅವಸ್ಥೆ ಏನಾದೀತು! ಅವರು ಎದೆಯೊಡೆದುಕೊಂಡು ಸಾಯಬಹುದು. ಆಮೇಲೆ ನಾನು ಹೇಗೆ ಬದುಕಿ ಉಳಿಯಲಿ? ಎಲ್ಲರಲ್ಲಿ ಅವಮಾನ, ನಿಂದೆ, ಹೀಗೆ ಛೀ ಥೂಗಳಿಂದ ನಾವು ಬದುಕಬಹುದೇ? ನೀನು ತಿಳಿದವಳು. ಎಲ್ಲವನ್ನು ಬಲ್ಲೆ. ಹೋಗು. ನಮ್ಮ ಮಾತು ಅವರ ಕಿವಿಗೆ ಬಿದ್ದರೆ ಏನೆಂದಾರು! ಹೋಗು" ಎಂದು ನುಡಿದಳು.

ಕಲ್ಯಾಣಿಯು ಇನ್ನೂ ಮೋನಿಯಾಗಿದ್ದಳು.

"ಹೋಗಬೇಕು ಮಗಳೇ! ಯಾರೇನು ಮಾಡುವುದು! ಬ್ರಹ್ಮಸಂಕಲ್ಪ ವಿದ್ದರೆ ಬಿಡಿಸಬಹುದೇ? ನೀನು ಅಲ್ಲಿಯೇ ಮಾಲೆಯನ್ನು ಹಿಡಿದು ನಿಂತಿದ್ದೆ. ಅದು ದೇವರಿಗೂ ಬಿಡಿಸಲು ಸಾಧ್ಯವಿರಲಿಲ್ಲ, ಹೋಗು. ಎರಡು ದಿನ ದುಃಖ ವೆನಿಸುವುದು. ಮುಂದೆ ಎಲ್ಲವೂ ಸರಿಹೊಂದುವುದು. ಆ ಭಗವಂತನು ಒಂದೆರಡು ಮಕ್ಕಳನ್ನು ಕೊಟ್ಟರೆ ಇದೇ ಮನೆಯು ನಿನಗೆ ಸ್ವರ್ಗವಾಗುವುದು ಹೋಗು. ನೀನು ಹೆಚ್ಚು ಹೊತ್ತು ನಿಲ್ಲುವುದು, ನಾವು ಹೆಚ್ಚು ಸಾರೆ ಹೇಳು ವುದು ಸರಿಯಾದುದಲ್ಲ ಹೋಗು" ಎಂದು ಬೆನ್ನಮೇಲೆ ಕೈ ಎಳೆಯುತ್ತ ಸೀತಮ್ಮ ನುಡಿದಳು.

ಕಲ್ಯಾಣಿಯು ಒಂದು ಹೆಜ್ಜೆಯನ್ನು ಕಿತ್ತು ಮುಂದೆ ಇಡಲಿಲ್ಲ.

ಗೌರಮ್ಮನಿಗೆ ಸಿಟ್ಟು ಬಂದಿತು. ಆ ಸಿಟ್ಟಿನ ಆವೇಗದಲ್ಲಿ—

"ದೇವರು ನನಗೆ ನಾಲ್ಕಾರು ಮಕ್ಕಳನ್ನು ಕೊಟ್ಟಿದ್ದನು. ಎಲ್ಲವನ್ನು

ಕಸಿದುಕೊಂಡು ಹೋದನು. ದೊಡ್ಡ ದೊಡ್ಡ ಮಕ್ಕಳನ್ನು ಕಳೆದುಕೊಂಡು ನಾನು ಮುದಿಗೂಬೆಯಾಗಿ ಇನ್ನೂ ಕಣ್ಣು ಬಿಡುತ್ತಿರುವೆ. ಮಕ್ಕಳನ್ನು ಬದುಕಿಸಿಕೊಳ್ಳಬೇಕೆಂದು ಅವರು ಹೊಲಗಳನ್ನು ಕಳೆದುಕೊಂಡರು. ಮನೆಯನ್ನು ಕಳೆದುಕೊಂಡರು. ಬಂಗಾರ ಹೋಯಿತು. ಬೆಳ್ಳಿ ಹೋಯಿತು. ಆ ದುಃಖದ ಭಾರದಿಂದ ಧನುರ್ವಾತವಾಗಿ ಬಲಗಡೆಯ ಭಾಗವೇ ಸತ್ತು ಹೋಗಿದೆ. ಏನೋ ನಮ್ಮ ಹಿರಿಯರ ಪುಣ್ಯದಿಂದ ಈಕೆಯೊಬ್ಬಳು ಉಳಿದಳು. ಇದ್ದಷ್ಟರಲ್ಲಿ ಬಡತನದಿಂದ ಇವಳನ್ನು ರಕ್ಷಿಸಿ ತಂದೆವು. ಇವಳನ್ನು ಒಳ್ಳೆಯ ಮನೆಗೇ ಕೊಡಬೇಕೆಂದು ಸಂಕಲ್ಪಿಸಿದ್ದೆವು. ಅದರಂತೆ ಕೊಟ್ಟಿರುವೆವು. ಈ ಮನೆಯನ್ನು ನೋಡಿ ನನಗಂತೂ ಸಂತೋಷವಾಗಿದೆ. ಅಳಿಯನೂ ಒಳ್ಳೆಯವನು. ಸಜ್ಜನನು. ೮–೧೦ ವರುಷ ದೊಡ್ಡವನಿರಬೇಕು. ಅದರಿಂದೇನು? ಹೆಂಗಸು ಒಂದೆರಡು ಮಕ್ಕಳ ತಾಯಿಯಾದರೆ ಜನ್ಮ ಸಾರ್ಥಕವಾಯಿತೆಂದು ತಿಳಿಯಬೇಕು. ತಾನೂ ಮುದುಕಿಯಾಗುವಳು. ಇದ್ದ ಗಂಡು ಮಕ್ಕಳನ್ನು ಕಟ್ಟಿಕೊಂಡು ರಾಮರಾಮ! ಎಂದು ಇದ್ದುಬಿಟ್ಟರಾಯಿತು. ಹೆಂಗಸಿಗೆ ಇದಕ್ಕೂ ಹೆಚ್ಚಿನದು ಮತ್ತೇನು ಬೇಕು? ಅದೆಲ್ಲವನ್ನು ಬಿಟ್ಟು ಇದೆಂತಹ ಹಟ! ಇದರಿಂದ ಏನಾಗಬೇಕು! ತನಗೂ ಸುಖವಿಲ್ಲ. ನಮಗಂತೂ ಇಲ್ಲವೇ ಇಲ್ಲ" ಎಂದು ನುಡಿದು ಉಸಿರು ಆರಿಸಿಕೊಂಡಳು.

ಮತ್ತೆ "ಸೀತಾಬಾಯಿ ಇದೆಲ್ಲ ರಂಬಾಟ ಅವರಿಗೆ ತಿಳಿದರೆ ಏನಾದೀತು? ನನಗೆ ಗೊತ್ತು. ಅವರಿಗೆ ಒಂದಿಷ್ಟು ದುಃಖ, ಸಂತಾಪ, ಸಿಟ್ಟು ಬಂದರೆ ಸಾಕು ಬದುಕಲಾರರು. ಮೊದಲೇ ಮೈಯಲ್ಲಿ ಏನಿಲ್ಲ. ಆ ಸುಟ್ಟ ಬೇನೆಯು ಇನ್ನೊಮ್ಮೆ ಬಂದಿತೆಂದರೆ ಉಳಿಯಲಾರರು. ದೇವರ ಸಂಕಲ್ಪ ಹಾಗೇ ಇದ್ದರೆ ಯಾರು ಬದುಕಿಸುವವರು. ನನ್ನ ಹಣೆಯ ಬರೆಹದಲ್ಲಿ ಏನೇನು ಬರೆದಿದೆಯೋ ಯಾರು ಬಲ್ಲರು! ಈವರೆಗೆ ಉಂಡದ್ದೇ ಹೆಚ್ಚೆಂದು ತಿಳಿದಿರುವೆ. ಇನ್ನೂ ಕಟ್ಟಿಟ್ಟದ್ದರೆ ಉಣ್ಣಬೇಕಲ್ಲ" ಎಂದು ಮೆಲ್ಲಗೆ ಅಳುತ್ತ ಹಿಂದೆ ಸರಿದ ಮಂಗಳ ಸೂತ್ರವನ್ನು ಮುಂದೆ ಮಾಡಿಕೊಂಡರು.

ಸೀತಮ್ಮನಿಗೂ ದುಃಖವಾಯಿತು. ಒಂದಿಷ್ಟು ಸಿಟ್ಟೂ ಬಂದಿತು. ಆದರೆ ಅದನ್ನು ಹೊರಪಡಿಸುವಂತಿರಲಿಲ್ಲ. ಎದ್ದು ಮೆಲ್ಲಗೆ ಕಲ್ಯಾಣಿಯನ್ನು ಹಿಡಿದುಕೊಂಡು "ನಡೆ ಕಲ್ಯಾಣಿ. ನೀನು ಹೋಗದಿರುವುದು ಸರಿಯಿಲ್ಲ.

ನಿನ್ನ ತಾಯಿಗೆ ಎಷ್ಟು ದುಃಖವಾಗುವುದು ವಿಚಾರಿಸು? ಹೋಗಬೇಕು" ಎಂದು ಎಳೆದುಕೊಂಡು ಮುಂದೆ ಸಾಗಿದಳು. ಕಲ್ಯಾಣಿಯು ಅಳುತ್ತ ನಡೆದಳು. ಬಾಗಿಲನ್ನು ದಾಟಿಸಿ "ಇನ್ನು ಹೋಗು. ಕೋಣೆಯಲ್ಲಿ ದೀಪವು ಉರಿಯುತ್ತಿದೆ" ಎನ್ನುತ್ತ ಮತ್ತೆ ನಾಲ್ಕಾರು ಹೆಜ್ಜೆ ಮುಂದೆ ಕಳಿಸಿದಳು. ತಿರುಗಿ ಬಂದು ಅಡಿಗೆಯ ಮನೆಯ ಬಾಗಿಲನ್ನು ಇಕ್ಕಿಕೊಂಡು ಹಾಸಿಗೆಯ ಮೇಲೆ ಕುಳಿತಳು.

"ಹೋದಳೇ?" ಗೌರಮ್ಮ ಕೇಳಿದಳು.

"ಹ! ಇನ್ನು ನಮಗೆ ಮಲಗಲು ಅಪ್ಪಣೆಯಾಯಿತು" ಎಂದು ಮುಸುಕು ಎಳೆದುಕೊಂಡು ಅಡ್ಡಾದಳು.

ಸೀತಮ್ಮ ಕೈಬಿಟ್ಟು ಹೋದ ಸ್ಥಳದಲ್ಲಿಯೇ ಕಲ್ಯಾಣಿಯು ನಿಂತಿದ್ದಳು. ಅಡವಿಯಲ್ಲಿ ಸ್ವಚ್ಛಂದವಾಗಿ ಹುಲ್ಲು ತಿಂದು, ಹರಿವ ಹಳ್ಳದ ನೀರು ಕುಡಿದು, ಹೊಂಗೇಮರದ ದಟ್ಟ ನೆರಳಲ್ಲಿ ಮಲಗಿ ಮೆಲುಕಾಡಿಸುವ ಎರಳೆಯನ್ನು ಎಳೆದು ತಂದು ಹುಲಿಯ ಗವಿಯ ಮುಂದೆ ನಿಲ್ಲಿಸಿದಂತೆ ಕಲ್ಯಾಣಿಯು ಭಯ-ವಿಹ್ವಲಳಾಗಿದ್ದಳು. ಕಣ್ಣೀರು ಧಾರಾಕಾರವಾಗಿ ಉಬ್ಬುಗಲ್ಲದ ಅಂಚಿನಿಂದ ಇಳಿಯುತ್ತಿದ್ದುವು. ಎದೆಯು ಒಂದೇ ಸಮನೆ ಹೊಡೆದುಕೊಳ್ಳುತ್ತಿದ್ದಿತು. ಕೈಕಾಲುಗಳು ಕಂಪಿಸುತ್ತ ಬೆವರಿಟ್ಟಿದ್ದುವು. ಎಳೆದು ತರುವ ಮುಂದೆ ಸೀರೆಯ ಸೆರಗು ಜಾರಿದ್ದಿತು. ಪ್ರತಿಶ್ವಾಸಕ್ಕೂ ಮೊಳೆಗಳು ಏರಿ–ಇಳಿದು ತಿದಿಯೂದಿದಂತಾಗುತ್ತಿದ್ದುವು. ಕಣ್ಣಿಗೆ ಮಂಜು ಕವಿದಿದ್ದಿತು. ನಡುಮನೆಯಲ್ಲಿ ತಿಳಿಗತ್ತಲೆಯು ತುಂಬಿ ಒಂದು ಬಗೆಯ ಗಂಭೀರ ವಾತಾವರಣವು ಹರಡಿದ್ದಿತು. ಕಲ್ಯಾಣಿಯು ಸುತ್ತಲೆ ನೋಡಿದಳು. ಗೋಡೆಗೆ ತೂಗು ಹಾಕಿದ ಗುರುಗಳ ತೈಲಚಿತ್ರ ಕಣ್ಣಿಗೆ ಬಿದ್ದಿತು. ಗಕ್ಕನೆ ಕಣ್ಣು ಮುಚ್ಚಿದಳು. ಒಂದೆರಡು ನಿಮಿಷ ಕಳೆದುವು. ಮತ್ತೆ ಕಣ್ಣು ಬಿಟ್ಟಳು. ಗುರುಗಳ ಚಿತ್ರದ ಪಕ್ಕದಲ್ಲಿ ಮಹಾಲಕ್ಷ್ಮಿಯ ಚಿತ್ರ ಕಣ್ಣಿಗೆ ಬಿದ್ದಿತು. ಕಣ್ಣೊರಸಿಕೊಂಡು ನೋಡಿದಳು. ಆ ಮಹಾಸಾಧ್ವಿಯ ಆಕೃತಿ ಅಚ್ಚಳಿಯದೆ ಕಂಡಿತು. ತಿಳಿಗತ್ತಲೆಯಲ್ಲಿಯೂ ಸುಸ್ಪಷ್ಟವಾಗಿ ಕಂಡಿತು ಎಂಥ ರೂಪು! ಎಂಥ ಚೆಲುವು! ದುಂಡನ್ನ ಕರಿಯ ಕೂದಲಿನ ತಲೆ. ಹೆರಳಲ್ಲಿ ಕಟ್ಟಿಕೊಂಡ ಮಲ್ಲಿಗೆಯ ದಂಡೆ ಇನ್ನೂ ಬಾಡಿರಲಿಲ್ಲ. ಬೆಳ್ಳಿಯ ಚೂರುಗಳಂತೆ ಹೊಳೆಯು

ವುವು. ಕಿವಿಯಲ್ಲಿ ಮುತ್ತಿನ ಬೆಂಡೋಲೆ ಬೆಳಕಿನ ಗುಳ್ಳೆಗಳಂತೆ ಮಿಂಚುತ್ತವೆ. ಹಣೆಯ ಮೇಲೆ ಎದ್ದು ನಿಂತ ಉದ್ದ ಕುಂಕುಮಬಟ್ಟು. ಮೂಗಿನಲ್ಲಿ ಮೂಗು ಬಟ್ಟು. ಕೊರಳೊಳಗೆ ಮಂಗಳಸೂತ್ರ ಚಿಕ್ಕಸರ, ಶಹಪೂರ ಗೇಣಂಚಿನ ಸೀರೆ ಅಚ್ಚಳಿಯದೆ ಇವೆ. ಇವುಗಳ ಪ್ರಭಾವಳಯದಲ್ಲಿ ಅವಳ ತುಟಿ, ಮೂಗು, ಕಣ್ಣು, ಹಣೆ ಸೌಂದರ್ಯ ಪ್ರದರ್ಶನದ ತುಣುಕುಗಳಾಗಿ ಕಂಡುವು. ಈ ಮಹಾತಾಯಿಯ ಹೊಟ್ಟೆಯಿಂದಲೇ ಕರುಣನು ಹುಟ್ಟಿರುವನು. ಅವನ ಜನ್ಮದಾತೆ ಇವಳೇ ! ತಾಯಿಗೆ ಯೋಗ್ಯ ಮಗನು ! ಕರುಣನ ಕೆನ್ನೆ, ಮೂಗು ಗಳು ಈ ತಾಯಿಯವೇ ! ತುಟಿಗಳು ಇವಳವೇ ! ಆ ದುಂಡನ್ನ ಮುಖವು ಇವಳದೇ ! ತಮ್ಮ ಬಾಲ್ಯದ ಹೆಣ್ಣು ರೂಪಕ್ಕೆ ಗಂಡುತನವನ್ನು ತುಂಬಿರುವರು, ಆಹುದು, ಕರುಣನು ಅಂಥವನು. ತಾಯೀ, ಇಂಥವನನ್ನು ಬಿಟ್ಟು ಏಕೆ ಹೋದೆ ? ನೀನು ಹೋದ ಮೇಲೆ ಅವನು ತಬ್ಬಲಿಯಲ್ಲವೇ ? ಅವನನ್ನು ರಕ್ಷಿಸಲು ನಾನು ಬರಲೆಂದು ಆಶಿಸಿದೆಯಾ ? ಆದರೆ ನಿನ್ನ ಹೃದಯವನ್ನು ಒಂದಿಷ್ಟು ನನಗೆ ಕೊಡು, ರಕ್ಷಿಸುವೆ. ಎಂದು ಹಲವು ಬಗೆಯಿಂದ ಮನದಲ್ಲಿ ಹಲುಬುತ್ತ ನಿಂತಳು. ಮಹಾಲಕ್ಷ್ಮಿ ಚಿತ್ರದಲ್ಲಿದ್ದಳು. ಕಲ್ಯಾಣಿ ಎದುರು ಗೋಡೆಗೆ ಹತ್ತಿ ನಿಂತಿದ್ದಳು. ಮಹಾಲಕ್ಷ್ಮಿ ಬಾಯಿ ತೆರೆದಂತಾಯಿತು. ಕಲ್ಯಾಣಿ ಕಣ್ಣರಳಿಸಿ, ಕಿವಿಯಗಲಿಸಿ ನಿಂತಳು. ಚಿತ್ರ ಏನೋ ಮಾತಾಡಿ ದಂತಾಯಿತು. ಅದನ್ನು ಕಲ್ಯಾಣಿ ಕೇಳಿದಳು. ಮತ್ತೆ ಕೇಳಿದಳು. ಉತ್ತರಿ ಸುವಂತೆ ಹ....ಹ....ಎಂದಳು.

ಗುರುಗಳ ಕಣ್ಣು, ಕಿವಿಗಳು ಬಾಗಿಲ ಕಡೆಗೇ ಇದ್ದುವು. ಬಂದಳೇ ! ಎಂದು ನೋಡಿದರು. ಮಾತುಗಳು ಮುಗಿದುವೇ ! ಎಂದು ಕೇಳಿದರು. ದೀಪ ಸಣ್ಣದಾಯಿತೇ ಎಂದು ಹಣಿಕಿಕ್ಕಿದರು. ಬಾಗಿಲನ್ನು ನೂಕಿದರೇ ಎಂದರು. ವೇಳೆಯಾಯಿತಲ್ಲ ! ಎಂದು ಮನದಲ್ಲಿ ಗುಣಿಸಿದರು. ಈಗ ಬಂದಾಳು, ಈಗ ಬಂದಿರಬೇಕು ಎಂದು ನಿರ್ಧರಿಸಿದರು. ಕೊನೆಯ ಸಾರೆ ನೋಡಿದರು. ದೀಪ ಕಾಣಿಸಲಿಲ್ಲ. ಮಾತು ಕೇಳಿಸಲಿಲ್ಲ. ಕೋಣೆಯ ಹೊರಗೆ ಹ...ಹ....ಎಂಬ ಸಪ್ಪಳವಾಯಿತು. ಬಂದಿರಬೇಕು. ಹ... ಬಂದಳು ಎಂದು ತೆರೆದು ಪುಸ್ತಕವನ್ನು ಮುಚ್ಚುತ್ತ ಯತ್ರಯೋಗೇಶ್ವರ ಕೃಷ್ಣ ಯತ್ರ ಪಾರ್ಥೋ ಧನುರ್ಧರ....ಎಂಬ ಮಂತ್ರವನ್ನು ಮೆಲ್ಲಗೆ ನುಡಿಯುತ್ತ ಮೇಲ್ಲೆ

ದ್ದರು. ಮೈಮೇಲಿನ ಬಟ್ಟೆಗಳನ್ನು ಸಾವರಿಸಿಕೊಂಡರು. ಗಾದಿಯ ಮೇಲೆ ಮೆಲ್ಲಗೆ ಹೆಜ್ಜೆಗಳನ್ನು ಇಡುತ್ತ ಬಾಗಿಲಿಗೆ ಬಂದರು. ಬಾಗಿಲಿನ ಎರಡೂ ತೋಳುಗಳನ್ನು ಕೈಯಿಂದ ಹಿಡಿದರು. ಬಗ್ಗಿಸಿ ತಲೆಯನ್ನು ಮುಂದೆ ಚಾಚಿದರು. ಉಸಿರನ್ನು ಗಟ್ಟಿಯಾಗಿ ಹಿಡಿದು ಸಾವಕಾಶವಾಗಿ ಬಿಡಹತ್ತಿದರು. ಅಡಿಗೆಯ ಮನೆಯ ಕಡೆಗೆ ನೋಡಿದರು. ಬಾಗಿಲನ್ನು ಇಕ್ಕಲಾಗಿದ್ದಿತು. ಹ! ಅವರು ಮಲಗಿದರು ಇವಳು? ಅಲ್ಲಿಯೇ ಮಲಗಿದಳೇನು? ಏನಿದು! ಎನ್ನುತ್ತ ಹೊರಗೆ ಬಂದರು. ಪಕ್ಕದಲ್ಲಿ ಕಲ್ಯಾಣಿ ನಿಂತಿದ್ದಳು. ಕಣ್ಣು ಬಿಟ್ಟು ನೋಡಿದರು. ಅಹುದು ಕಲ್ಯಾಣಿ! ತಮ್ಮ ಹೊಸ ಹೆಂಡತಿ! ಗೋಡೆಯ ಕಡೆಗೆ ಮುಖಮಾಡಿ ನಿಂತಿರುವಳು. ಕಡೆಗೆ ಬಂದಳು! ಬಂದಳು. ಗುರುಗಳ ರೋಮರೋಮದಲ್ಲಿ ಶೇಷ ತಾರುಣ್ಯದ ಸುಪ್ತ ಜ್ವಾಲೆಯು ಚಿಮ್ಮಿತು. ಕೂದಲುಗಳು ಮೈತುಂಬ ಎದ್ದು ನಿಂತುವು. ಕೊನೆಗೆ ನನ್ನವಳು ಬಂದಳು! ಎಂದು ಹರ್ಷಾತಿರೇಕದಿಂದ ಬಳಿಗೆ ನಡೆದರು.

ಯಾವುದೋ ಮನೆತನದ ತಂದೆ–ತಾಯಂದಿರು ಜನ್ಮ ಕೊಡುವರು. ಉಣಿಸಿ–ತಿನಿಸಿ–ಲಾಲಿಸಿ–ಪಾಲಿಸುವರು. ಒಂದು ಹೆಜ್ಜೆ ಇಟ್ಟರು.

ಕಾಡಿ–ಕಲಿಸಿ ಬೆಳೆಸುವರು. ಗೃಹಕೃತ್ಯಗಳ ಶಿಕ್ಷಣವನ್ನು ಕೊಡುವರು. ರೀತಿನೀತಿಗಳನ್ನು ಕಲಿಸುವರು. ಒಲವು–ನಿಲುವುಗಳನ್ನು ತಿಳಿಯಪಡಿಸುವರು. ಎರಡು ಹೆಜ್ಜೆ ಇಟ್ಟರು.

ಲಗ್ನದ ವಯಸ್ಸಿಗೆ ಬಂದಳೆಂದು ವರನನ್ನು ಹುಡುಕುವರು. ಯೋಗ್ಯನನ್ನು ಆರಿಸುವರು. ಧರ್ಮಶಾಸನದಿಂದ ಅವನಿಗೆ ಮದುವೆ ಮಾಡಿಕೊಡುವರು. ಗಂಡನ ಬೆನ್ನಿಗೆ ಕಟ್ಟುವರು. ಅವನ ಸಂಗಡ ಕಳಿಸುವರು. ಹದಿನಾರು ಹದಿನೇಳು ವರುಷದ ಆತ್ಮೀಯ ಸಂಬಂಧವನ್ನು ಹರಿದು ಇನ್ನೊಬ್ಬನಿಗೆ ಹೊರಿಸುವರು. ಮೂರು ಹೆಜ್ಜೆ ಇಟ್ಟರು.

ಅವಳು ಒಬ್ಬ ಅಪರಿಚಿತನ ಮನೆಗೆ ಬರುವಳು. ಭಯದಿಂದಲೇ ಬರುವಳು. ನಡುಗುತ್ತಲೇ ಬರುವಳು. ಸರ್ವಾಪಣೆಯ ಸಿದ್ಧತೆಯಲ್ಲಿಯೇ ಬರುವಳು. ಎಂಥ ಚಮತ್ಕಾರ! ಎಂಥ ದಿವ್ಯಸಾಕ್ಷಾತ್ಕಾರ! ಅಂಥವಳನ್ನು ನಾವು ಎತ್ತಿಹಿಡಿಯಬೇಕು. ಅಂಥವಳಿಗೆ ಧೈರ್ಯವನ್ನು ಕೊಡಬೇಕು. ರಕ್ಷಿಸಬೇಕು. ಇದು ನಮ್ಮ ಧರ್ಮ. ನಾಲ್ಕು ಹೆಜ್ಜೆ ಇಟ್ಟರು.

ಐದನೆಯ ಹೆಜ್ಜೆಯನ್ನೂ ಇಟ್ಟರು. ಮನಸಿನ ಆಂತರಿಕ ವಿಚಾರಗಳು ನಿಂತುವು. ಕೈಎತ್ತಿ ಕಲ್ಯಾಣಿಯ ಭುಜದ ಮೇಲಿಟ್ಟರು. ಅವಳು ಗಕ್ಕನೆ ತಿರುಗಿ ನಿಂತಳು. ಕಣ್ಣು ಬಿಟ್ಟಳು ಎದುರು ಗಂಡ! ತನ್ನನ್ನು ಧರ್ಮದಿಂದ ಕಟ್ಟಿಹಾಕಿದ ಗಂಡ! ಕೈಗಳಿಂದ ಮುಖವನ್ನು ಮುಚ್ಚಿಕೊಂಡಳು.

ಕೈಹಿಡಿದು "ನಡೆ" ಎಂದು ಗುರುಗಳು ನುಡಿದರು. ದನಿಯು ಒಂದಿಷ್ಟು ಕಂಪಿಸುತ್ತಿದ್ದಿತು.

ಕಲ್ಯಾಣಿಯು ಕಣ್ಣು ಬಿಡಲಿಲ್ಲ.

"ನಡೆ. ಬಹಳ ರಾತ್ರಿಯಾಗಿದೆ" ಎಂದು ಬೆರಳು ಹಿಡಿದರು.

ಕಲ್ಯಾಣಿ ಮೌನಗೌರಿಯಾಗಿ ಹಾಗೇ ನಿಂತಿದ್ದಳು.

"ನಾನು ಭೂತವಲ್ಲ. ಪಿಶಾಚಿಯಲ್ಲ. ನಿನ್ನ ಪತಿ. ನಡೆ" ಎಂದು ಕೈ ಹಿಡಿದು ನಡಿಸಿಕೊಂಡು ಕೋಣೆಯ ವರೆಗೆ ಬಂದರು. ಒಳಗೆ ಕರೆದುಕೊಂಡು ಹೋದರು. ಬಾಗಿಲನ್ನು ಇಕ್ಕಿದರು. ದೀಪವನ್ನು ಒಂದಿಷ್ಟು ಚಿಕ್ಕದನ್ನಾಗಿ ಮಾಡಿದರು. ಹಾಸಿಗೆಯ ಮೇಲೆ ಕೂಡಿಸಿದರು. ತಾವೂ ಪಕ್ಕದಲ್ಲಿ ಕುಳಿತರು.

"ಏಕೆ ಕಲ್ಯಾಣಿ? ಕಣ್ಣುಬಿಟ್ಟು ನೋಡು–ಕಣ್ಣು ತೆರೆ" ಎಂದು ಕೆನ್ನೆಯ ಮೇಲೆ ಕೈಯಾಡಿಸಿದರು.

ಕಲ್ಯಾಣಿಯು ಕಣ್ಣು ಬಿಡಲಿಲ್ಲ.

ಇನ್ನಷ್ಟು ಹತ್ತಿರ ಸರಿದರು. ಎದುರು ಕುಳಿತು "ಏಕೆ? ಏನಾಯಿತು ಕಲ್ಯಾಣಿ?" ಎಂದು ಮಮತೆಯಿಂದ ತಲೆಯಮೇಲೆ ಕೈಎಳೆದರು.

ಕಲ್ಯಾಣಿಯು ಸಂತಾಪದಿಂದ ದೀರ್ಘಶ್ವಾಸಗಳನ್ನು ಎಳೆಯುತ್ತಿದ್ದಳು.

"ನಿಮ್ಮ ತಾಯಿಯವರು ಏನೆಂದರು? ಆಗಿನಿಂದ ಮಾತಾಡುತ್ತಿದ್ದರು. ಕಲ್ಯಾಣಿ ಕಣ್ಣುಬಿಡು" ಎಂದು ಕಣ್ಣು ತೆರೆಯಲು ಪ್ರಯತ್ನಿಸಹತ್ತಿದರು.

ಕಲ್ಯಾಣಿ ಇನ್ನೂ ಗಟ್ಟಿಯಾಗಿ ಕಣ್ಣು ಹಿಡಿದುಕೊಂಡಳು.

ಗುರುಗಳಿಗೆ ಒಂದಿಷ್ಟು ಕೋಪ ಬಂದಂತಾಯಿತು. ಅದೇ ಆವೇಗದಲ್ಲಿ "ನನ್ನ ಮೊದಲಿನ ಹೆಂಡತಿಯು ಹೀಗಿರಲಿಲ್ಲ. ನಿನ್ನಂತೆ ಒಂದು ದಿನ ಮಾಡಿದಂತಿಲ್ಲ. ನನಗೆ ನೆನಪೂ ಇಲ್ಲ. ನಗುತ್ತ ನನ್ನನ್ನು ಕಾಣುತ್ತಿದ್ದಳು. ಅವಳ ಚಿತ್ರದಲ್ಲಿ ನೀನು ಅವಳ ನಗುಮುಖವನ್ನು ನೋಡಬಹುದು. ಇದೇನು ನಿನ್ನ ಆಟ! ಕಣ್ಣುಬಿಡು. ಹುಚ್ಚಿಯಂತೆ ಮಾಡಬೇಡ" ಎಂದು ರೆಪ್ಪೆಗಳನ್ನು

ಆಗಲಿಸಿದರು.

ಕಲ್ಯಾಣಿಯು ಕಣ್ಣುಗಳನ್ನು ತೆರೆಯಲೇಬೇಕಾಯಿತು. ತೆರೆದಳು. ತುಂಬುಗಣ್ಣು ಬಿಟ್ಟು ನೋಡಿದಳು. ಗುರುಗಳು ಅವಳ ಮುಖವನ್ನು ತಮ್ಮ ಕಡೆಗೆ ತಿರುಗಿಸಿಕೊಳ್ಳಬೇಕೆಂದರು. ಆದರೆ ಕಲ್ಯಾಣಿ ಉಕ್ಕೃತ ಸ್ವರದಿಂದ "ಯಾರು? ಯಾರೋ ಅಲ್ಲಿ ಬಂದಿರುವರು" ಎಂದು ಚಿಟ್ಟನೆ ಚೀರಿದಳು.

"ಎಲ್ಲಿ? ಎಲ್ಲಿ?" ಗುರುಗಳು ಗಾಬರಿಯಿಂದ ಕೇಳಿದರು.

"ಅಲ್ಲಿ. ಆ ಗೋಡೆಗೆ ನಿಂತಿರುವರು. ಹಸಿರು ಸೀರೆ. ದುಂಡನ್ನ ಮುಖ. ತಲೆಯಲ್ಲಿ ಮಲ್ಲಿಗೆಯ ದಂಡೆ. ನಿಮ್ಮ....ನಿಮ್ಮ...ಹೊರಗಿನ 'ಚಿತ್ರದಂತೆ ಇರುವರು. ಅಯ್ಯೋ!" ಎಂದು ಚೀರಿ ಹಾಸಿಗೆಯ ಮೇಲೆ ಬೋರಲಾಗಿ ಮಲಗಿದಳು.

ಗುರುಗಳು ದಿಗ್ಭ್ರಾಂತರಾಗಿ ಅತ್ತಿತ್ತ ನೋಡಿದರು. ಹುಡುಕಾಡಿದರು. ಆದರೆ ಯಾರೂ ಇರಲಿಲ್ಲ. ಕಲ್ಯಾಣಿ ಮತ್ತೆ ಮತ್ತೆ ಅದನ್ನೇ ಅನ್ನಹತ್ತಿದಳು. ಗುರುಗಳ ಮುಖವು ಕಪ್ಪಿಟ್ಟಿತು. ಎದೆಯು ಡವಡವಿಸಹತ್ತಿತು. "ಎಲ್ಲಿ, ಎಲ್ಲಿ!" ಎಂದು ಕೈಯೊಳಗೆ ಕೋಲು ಹಿಡಿದುಕೊಂಡು ಸುತ್ತಲೆಲ್ಲ ತಿರುಗುತ್ತ ಹೆಂಡತಿಗೆ ಸಮಾಧಾನವನ್ನು ಹೇಳಹತ್ತಿದರು.

ಸೀತಮ್ಮ—ಗೌರಮ್ಮ ಓಡುತ್ತ ಎದ್ದುಬಂದು "ಏನಾಯಿತು? ಏನಾಯಿತು?" ಎಂದು ಬಾಗಿಲ ಹೊರಗೆ ನಿಂತು ಕೂಗಹತ್ತಿದರು. ಗುರುಗಳು ಬಾಗಿಲನ್ನು ತೆರೆದು—

"ಯಾರೋ ಕಂಡರಂತೆ. ಇಲ್ಲಿ ಯಾರೂ ಇಲ್ಲ" ಎಂದು ನಡುಗುತ್ತ ನುಡಿದರು.

ಗೌರಮ್ಮ ಮಗಳನ್ನು ಎಬ್ಬಿಸುತ್ತ "ಯಾರಮ್ಮ? ಯಾರು ಮಗು?" ಎಂದು ಬೆನ್ನಮೇಲೆ ಕೈಯಾಡಿಸುತ್ತ ಕೇಳಿದಳು.

ಆದರೆ ಕಲ್ಯಾಣಿಯು ಕಳವಳಿಯ ಹಣ್ಣಿನಂತಹ ಕಣ್ಣುಗಳನ್ನು ಬಿಡುತ್ತ ಎಲ್ಲರನ್ನು ನೋಡಹತ್ತಿದಳು. ಮಾತು ಎಷ್ಟು ಮಾಡಿದರೂ ಬಾಯಿಂದ ಹೊರಡಲಿಲ್ಲ. ಎಲ್ಲರನ್ನು ಹರಿದು ತಿನ್ನುವಂತೆ ನೋಡಹತ್ತಿದಳು. ಆ ಇಬ್ಬರು ಹೆಂಗಸರು ಅವಳನ್ನು ಮೆಲ್ಲಗೆ ತಮ್ಮ ಹಾಸಿಗೆಗೆ ಕರೆದುಕೊಂಡು ಹೋದರು.

ಕೋಣೆಯಲ್ಲಿ ಗುರುಗಳು ಒಬ್ಬರೇ ಗೂಡುಗಾಲು ಕಟ್ಟಿಕೊಂಡು ನಾನಾ ಬಗೆಯಾಗಿ ವಿಚಾರಿಸುತ್ತ ಮಲಗಿದರು.

# ೧೦

ಮರುದಿನ ಊರಿಗೆ ಹೊರಡಬೇಕೆಂದು ಗೊತ್ತು ಮಾಡಿದ ಗೌರಮ್ಮ-ಸೀತಮ್ಮನು ಮತ್ತೆ ನಾಲ್ಕು ದಿನ ನಿಲ್ಲಬೇಕಾಯಿತು. ಸೀತಮ್ಮನು ನಿಲ್ಲಲು ಅಡ್ಡಿ-ಆತಂಕಗಳು ಇರಲಿಲ್ಲ. ಮನೆಯಲ್ಲಿ ಮಕ್ಕಳು ದೊಡ್ಡವರಾಗಿದ್ದರು. ಎಲ್ಲ ವ್ಯವಹಾರವನ್ನು ಮಾಡಿಕೊಂಡು ಹೋಗುತ್ತಿದ್ದರು. ಮೇಲೆ ಬಡತನ. ನಾಲ್ಕು ದಿನ ಊಟವು ಹೊರಗೆ ಹೋದರೆ ಹಿತವೇ ಎಂದು ತಿಳಿಯುತ್ತಿದ್ದಳು. ಗಂಡನು ತೀರ ಮುದುಕನಿದ್ದನು. ಮನೆಯ ಮೂಲೆಯನ್ನು ಹಿಡಿದು ಮಕ್ಕಳ ಪರಾಮರ್ಶೆ ಸಾಕಾಗುತ್ತಿದ್ದಿತು. ಗೌರಮ್ಮನ ಸ್ಥಿತಿಯು ಹಾಗಿರಲಿಲ್ಲ. ಗಂಡನೊಬ್ಬನೇ ಮನೆಯಲ್ಲಿ. ಮೇಲೆ ಪಂಗು! ಹೆಂಡತಿಯ ಸಹಾಯ ಅವಶ್ಯವಿದ್ದಿತು. ಆದರೂ ಗೌರಮ್ಮ ನೆರೆಮನೆಯ ಗೆಳತಿಯರಿಗೆ ಹೇಳಿ ಒಂದೆರಡು ದಿನ ನೋಡಿಕ್ಕೊಲು ತಿಳಿಸಿದ್ದಳು. ಆದರೆ ಮತ್ತೆ ನಾಲ್ಕು ದಿನ ನಿಲ್ಲಬೇಕಾಯಿತು. ಇಲ್ಲಿ ಕಲ್ಯಾಣಿಯ ಬಾಳುವೆಯು ಒಂದು ಮಟ್ಟಕ್ಕೆ ಬರಬೇಕಾಗಿದ್ದಿತು. ಆದರೆ ಕಳೆದ ರಾತ್ರಿ ಒಂದು ಹೊಸ ಪ್ರಕರಣವು ಉದ್ಭವಿಸಿತು. ಅದು ಭಯಾನಕವೂ ಎನಿಸಹತ್ತಿತು. ಇಂಥ ಸಮಯದಲ್ಲಿ ಏನಾದರೊಂದು ಗಟ್ಟಿ ಮಾಡಿಕೊಳ್ಳಬೇಕಷ್ಟೇ! ನಾಲ್ಕು ದಿನಗಳ ಮಟ್ಟಿಗೆ ಮಗಳನ್ನು ಕಳಿಸಿಕೊಡಿರೆಂದು ಗುರುಗಳಲ್ಲಿ ವಿಜ್ಞಾಪಿಸಿಕೊಂಡಳು. ಆದರೆ ಅವರು ಒಪ್ಪುವಂತೆ ಕಾಣಲಿಲ್ಲ. ಮತ್ತು ಈ ಅವಸ್ಥೆಯಲ್ಲಿ ಮಗಳನ್ನು ಜುಲುಮೆಯಿಂದ ಕರದುಕೊಂಡು ಹೋಗುವಂತೆಯೂ ಇರಲಿಲ್ಲ. ಗೌರಮ್ಮನ ಜೀವನವು ಗೊಂದಲದಲ್ಲಿ ಸಿಕ್ಕು ತೊಳಲಾಡ ಹತ್ತಿತು. ಆ ವೃದ್ಧೆ ಏನನ್ನು ನಂಬಿ ಮಗಳನ್ನು ಮದುವೆ ಮಾಡಿಕೊಟ್ಟಿದ್ದಳೋ ಅದೆಲ್ಲ ತಲೆ ಕೆಳಗೆ ಆಗುವ ಹೊತ್ತು ಬಂದಿತು. ಏನು ಮಾಡಲಿ? ಯಾರನ್ನು ಮೊರೆಹೋಗಲಿ? ಎಂದು ಚಡಪಡಿಸಿದಳು. ಮಗಳು ಬಾಳುವೆಗೆ ಹತ್ತಲಿ, ಸುಖದಿಂದ ಬಾಳಲಿ ಎಂದು ದೇವರಿಗೆ ಹರಕೆ ಹೊತ್ತಳು. ಕಿವಿಯೊಳಗಿನ ಬೆಂಡೋಲೆಗಳನ್ನು ಬಿಚ್ಚಿ ತೆಗೆದು ಇಟ್ಟಳು. ಗುಡ್ಡದ ಎಲ್ಲಮ್ಮನಿಗೆ ನೈವೇದ್ಯವನ್ನು ಮಾಡುವ ವರೆಗೆ ಅನ್ನವನ್ನು ತಿನ್ನುವುದಿಲ್ಲವೆಂದು ವ್ರತ ಹಿಡಿದಳು. ಇದೆಲ್ಲವನ್ನು ತನ್ನಷ್ಟಕ್ಕೇ

ಮಾಡಿಕೊಂಡಿದ್ದರೂ ಎಲ್ಲರಿಗೆ ತಿಳಿಯಲು ತಡವಾಗಲಿಲ್ಲ. ಅದೇ ದಿನ ಊಟಕ್ಕೆ ಕುಳಿತ ಸಮಯದಲ್ಲಿ ಗೌರಮ್ಮ ಎಲೆಯಲ್ಲಿ ಎರಡು ರೊಟ್ಟಿಗಳನ್ನು ಹಾಕಿಕೊಂಡಳು. ಸೀತಮ್ಮ ಆಶ್ಚರ್ಯದಿಂದ—

"ಅನ್ನ ಬೇಡವೇ ?" ಎಂದು ಕೇಳಿದಳು.

"ಬೇಡ. ಕೇವಲ ರೊಟ್ಟಿಯನ್ನೇ ತಿನ್ನುವೆ." ಎಂದಳು.

"ಅದೇಕೆ ಗೌರಮ್ಮ. ನೀನು ಅನ್ನವನ್ನು ತಿನ್ನದಿದ್ದರೆ ನಾನು ಹೇಗೆ ತಿನ್ನಲಿ ?" ಸೀತಮ್ಮ ಶಂಕಿಸಿದಳು.

"ಇಲ್ಲ ಸೀತಮ್ಮ, ನೀನು ತಿನ್ನು. ಅದರಿಂದ ಬಾಧಕವಿಲ್ಲ. ಊಟಕ್ಕೆ ಕೂಡು." ಎಂದು ಆಪೋಷಣ ಬಿಟ್ಟಂತೆ ನುಡಿದಳು.

"ನೀನಿಲ್ಲ. ನಾನೂ ಒಲ್ಲೆ." ಎಂದು ಎಲೆಯಲ್ಲಿ ಹಾಕಿದ ಅನ್ನವನ್ನು ತೆಗೆದಿಡಲು ಎದ್ದಳು.

ಗೌರಮ್ಮ ನಿರ್ವಾಹವಿಲ್ಲದೆ ತನ್ನ ಪ್ರತಿಜ್ಞೆಯನ್ನು ಹೇಳಿದಳು.

"ಇದಕ್ಕೆ ಇಂಥ ಪ್ರತಿಜ್ಞೆಯನ್ನು ಮಾಡುವುದೇ ಗೌರಮ್ಮ! ಎರಡು ದಿನ ಆದೀತು. ಮುಂದೆ ತಾನೇ ನೆಟ್ಟಗಾಗುವುದು." ಎಂದು ಕಲ್ಯಾಣಿಯ ಮುಖವನ್ನು ನೋಡಿದಳು.

ಕಲ್ಯಾಣಿಯು ಕೆಳಗೆ ಮುಖವನ್ನು ಹಾಕಿಕೊಂಡು ಎಲೆಯ ಮುಂದೆ ಕುಳಿತಿದ್ದಳು.

ಊಟ ನಡೆಯಿತು.

ರಾತ್ರಿ ಕಲ್ಯಾಣಿಯು ತಾಯಿಯ ಬಳಿಯಲ್ಲಿಯೇ ಮಲಗಿದಳು. ಅಂದು ಆ ಹೆಂಗಸು ಕಲ್ಯಾಣಿಯ ಭೇಟಿಗೆ ಬರಲಿಲ್ಲ. ಕಣ್ಣಿಗೆ ಬೀಳಲಿಲ್ಲ. ಕೋಣೆಯಲ್ಲಿ ಗುರುಗಳು ಹಳೆಯ ಹೆಂಡತಿಯ ದರ್ಶನವಿಲ್ಲದೆ, ಹೊಸ ಹೆಂಡತಿಯ ಸಹವಾಸವಿಲ್ಲದೆ ರಾತ್ರಿಯನ್ನು ಕಳೆಯಬೇಕಾಯಿತು.

ಇದಿಷ್ಟು ವ್ಯವಹಾರ ನಡೆದರೂ ಕರುಣನು ಎಲ್ಲರ ಅಲಕ್ಷಿತ ಪ್ರಾಣಿಯಾದುದು ಆಶ್ಚರ್ಯದ ಸಂಗತಿಯು! ಅವನು ಊಟ ಮಾಡಿದನೇ? ಸ್ನಾನವಾಯಿತೇ ? ಎಲ್ಲಿ ಮಲಗಿದನು ? ಅವನ ಆಶೆ ಏನು ? ಆಕಾಂಕ್ಷೆ ಏನು ? ಯಾರೂ ವಿಚಾರಿಸಲಿಲ್ಲ. ವಿಚಾರಿಸಬೇಕೆಂದು ಪ್ರಯತ್ನಿಸಲಿಲ್ಲ. ಎಲ್ಲರ ವಿಸ್ಮರಣೆಯಲ್ಲಿಯೇ ಅವನು ಉಳಿದನು. ಪ್ರೀತಿಯ ಮಗನನ್ನು ದತ್ತ

ಗುರುಗಳು ಮರೆತುದು ಎಂಥ ಚೋದ್ಯ! ಗುರುಗಳು ಮರೆಯಲು ಒಂದೆರಡು ಕಾರಣಗಳಿದ್ದುವು. ಒಂದು— ಹೊಸ ಹೆಂಡತಿಯನ್ನು ಮನೆಗೆ ತಂದಿದ್ದರು. ಅವಳ ರೂಪಕ್ಕೆ ಮರುಳಾಗಿದ್ದರು. ದೇಹ ಸೌಷ್ಠವಕ್ಕೆ ಮಾರು ಹೋಗಿದ್ದರು ಅಂಥ ಸೌಂದರ್ಯ ಸಂಪನ್ನ ಹೆಂಡತಿಯಿಂದ ಸುಖ ಪಡೆಯಬೇಕು, ತಮ್ಮ ಉನ್ಮಾದದ ಕಾವನ್ನು ಕಡಿಮೆ ಮಾಡಿಕೊಳ್ಳಬೇಕು, ಬಾಳಿನ ರುಚಿ ರುಚಿಯಾದ ಫಲವನ್ನು ತಿನ್ನಬೇಕು, ಕಳೆದ ೮-೧೦ ವರುಷಗಳಿಂದ ಸ್ತ್ರೀ ಸ್ಪರ್ಶವಿಲ್ಲದ ಶರೀರಕ್ಕೆ ಕನ್ನಿಕಾಜಲದಿಂದ ಅಭಿಷೇಕ ಮಾಡಿಸಿಕೊಳ್ಳಬೇಕು ಎಂಬ ಕಲ್ಪನೆ, ಸಂಕಲ್ಪಗಳ ತಲಕು ಮಲಕುಗಳಲ್ಲಿ ಕರುಣನು ಕಣ್ಣಿಂದ ಮರೆಯಾಗಿದ್ದನು. ಅದೇ ಆ ವಿಚಾರದ ಎಳೆಗಳೆಲ್ಲ ಮುಂದೆ ತುಂಡುತುಂಡಾದುವು. ಕಲ್ಯಾಣಿಯ ಮೇಲೆ ದ್ವೇಷಾಗ್ನಿಯು ಕುದಿಯ ಹತ್ತಿತು. ತಮ್ಮ ಕಲ್ಪನೆಗಳು ಸುಟ್ಟು ಹೋದುವು. ತಲೆಯೂ ಕಾವೇರಿ ಬಿಟ್ಟಿತು. ಆಗ ಕಳೆದುದನ್ನು ಹೇಗೆ ಮರಳಿ ಪಡೆಯಬೇಕು? ಏನುಮಾಡಬೇಕು, ಹೇಗೆ ಸಾಧಿಸಬೇಕು ಎಂಬ ತರ್ಕಚಕ್ರದಲ್ಲಿ ತಲೆಯ ರಕ್ತವೆಲ್ಲ ಕುದಿಯ ಹತ್ತಿತು. ಎದ್ದರೆ ಅದೇ! ಕುಳಿತರೆ ಅದೇ! ಇದರಿಂದ ಕರುಣನ ಅಸ್ತಿತ್ವದ ಎಳೆಯೇ ಮರೆತು ಹೋಯಿತು. ಕರುಣನು ಮನೆಯಲ್ಲಿ ಇರುವನೋ, ಇಲ್ಲವೋ ಇದು ಸಹ ತಿಳಿಯದ ಸಂಗತಿಯಾಯಿತು.

ಆದರೆ ಅವನನ್ನು ಮರೆಯದಿದ್ದ ವ್ಯಕ್ತಿ ಕಲ್ಯಾಣಿ. ಕಲ್ಯಾಣಿಯೊಬ್ಬಳೇ ಆತನನ್ನು ಮರೆತಿರಲಿಲ್ಲ. ತಾನು ಮದುವೆಯನ್ನು ಮಾಡಿಕೊಂಡು ಮನೆಗೆ ಬಂದ ಮೇಲೆ ಅವನು ಮನೆಯಲ್ಲಿ ಎಷ್ಟು ದಿವಸ ಇದ್ದನು? ಊಟವನ್ನು ಎಷ್ಟು ದಿನ ಮಾಡಿದನು? ಯಾವ ದಿನ ಮಧ್ಯಾಹ್ನದ ಊಟವನ್ನು ತಪ್ಪಿಸಿದನು? ಯಾವ ದಿನ ಸಂಜೆಗೆ ಮನೆಗೆ ಮಲಗಲು ಬರಲಿಲ್ಲ? ಚಹಕ್ಕೆ ಇದ್ದನೆ? ಸ್ನಾನ ಮಾಡಿದನೇ? ತಣ್ಣೀರಿನ ಸ್ನಾನ ಮಾಡಿದ ದಿನಗಳೆಷ್ಟು? ಇತ್ಯಾದಿಗಳನ್ನು ಬರೆದು ಇಟ್ಟುಕೊಂಡಂತೆ ಜ್ಞಾಪಕದಲ್ಲಿ ಇಟ್ಟುಕೊಂಡಿದ್ದಳು. ಬಂದ ದಿನ ಸಂತೋಷಪಟ್ಟುದನ್ನು, ಬಾರದ ದಿನ ವಿಷಾದಪಟ್ಟುದನ್ನು ಬಲ್ಲಳು. ಅವನು ಎಲ್ಲರ ಜತೆಗೆ ಊಟಕ್ಕೆ ಬರಬೇಕು, ಎಲ್ಲರ ಸಂಗಡ ಚಹಕ್ಕೆ ಬರಬೇಕು, ಉಳಿದ ಸಮಯದಲ್ಲಿ ಮನೆಯಲ್ಲಿರ ಬೇಕು, ಮಾತಾಡಬೇಕು, ನಗೆಯಾಡಬೇಕು, ತನ್ನಿಂದ ಕೆಲಸಗಳನ್ನು ಮಾಡಿಸಿಕೊಳ್ಳಬೇಕು. ತನ್ನ ಕೆಲಸಗಳಲ್ಲಿ ನೆರವಾಗಬೇಕು, ಕಾಡಬೇಕು. ಅವ್ಯವಹಾರದಲ್ಲಿ ಛೀ ಹಾಕಿಸಿಕೊಳ್ಳ

ಬೇಕು. ಇತ್ಯಾದಿಗಳನ್ನು ಅವಳ ಜೀವನವು ಬಯಸುತ್ತಿದ್ದಿತು. ಆದರೆ ಕರುಣನು ಬಂದ, ಬಂದ ಎನ್ನುವಷ್ಟರಲ್ಲಿ ಮನೆಯಿಂದ ಮಾಯವಾಗಿ ಬಿಡುತ್ತಿದ್ದನು. ತನ್ನ ಆಂತರಿಕ ಭಾವನೆಗಳನ್ನು, ಬಯಕೆಗಳನ್ನು ಯಾರ ಮುಂದೂ ಹೇಳುವಂತಿರಲಿಲ್ಲ. ಅಲ್ಲದೆ ಅವನನ್ನು ಕಂಡು ಸಂತೋಷದಿಂದ ಮುಖವನ್ನು ಹಿಗ್ಗಿಸುವುದಾಗಲಿ ಇಲ್ಲದ ಸಮಯದಲ್ಲಿ ಮುದುಡಿಸುವುದಾಗಲಿ ಅವ್ಯವಹಾರವೆನಿಸುತ್ತಿದ್ದಿತು. ಈ ಮಾನಸಿಕ ಗೊಂದಲದಿಂದ ಬುದ್ಧಿ ಶೂನ್ಯಳಾಗಿ ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ. ಮೋನಿಯಾಗಿ ಮೌನ ಗೌರಿಯಾಗಿ ಬಾಯಿ ಹೊಲಿದುಕೊಂಡು ಸುಮ್ಮನೆ ಒಂದು ಕುಳಿತಿರುತ್ತಿದ್ದಳು. ಈ ಕ್ರಿಯಾಶೂನ್ಯತೆ ಉಳಿದವರಿಗೆ ಒಂದು ಜಟಿಲ ಸಮಸ್ಯೆಯಾಗಿದ್ದಿತು.

ಒಂದು ದಿನ ಬೆಕ್ಕು ಹಾಲು ಕುಡಿಯುತ್ತಿದ್ದರೂ ಅಡಿಗೆಯ ಮನೆಯಲ್ಲಿ ಸುಮ್ಮನೆ ಕುಳಿತಿದ್ದಳು. ಉಸ್ ಎಂದಿರಲಿಲ್ಲ. ಎನ್ನುವ ಭಾವನೆಯೇ ಇರಲಿಲ್ಲ. ಮುಖವು ಆ ಕಡೆಗೇ ಇದ್ದಿತು. ಬೆಕ್ಕು ಮತ್ತು ಹಾಲು ಅವಳ ಕಣ್ಣಗೊಂಬೆಯಲ್ಲಿ ಮೂಡಿದುವುಗಳೆಂದೇ ಅವಳನ್ನು ನೋಡಿದವರಿಗೆ ಭಾಸ. ಆದರೆ ನಿಜವಾಗಿ ಅವಳಿಗೆ ಬೆಕ್ಕೂ ಕಾಣಿಸದು, ಹಾಲೂ ಕಾಣಿಸದು. ತಾಯಿಯು ಬಂದು ಬೆಕ್ಕನ್ನು ಹೊಡೆದು ಮಗಳಿಗೆ ಛೀ ಹಾಕಿದಳು.

ಇನ್ನೊಂದು ದಿನ ಕತ್ತಲಾದರೂ ದೀಪವನ್ನು ಹಚ್ಚಿರಲಿಲ್ಲ. ಗುಡಿಯಿಂದ ಗೌರಮ್ಮ, ಸೀತಮ್ಮನು ಬಂದು—ಕಲ್ಯಾಣೀ! ಎಂದು ಕರೆದ ಮೇಲೆಯೇ ಅವಳಿಗೆ ಎಚ್ಚರಾದುದು.

"ಕತ್ತಲೆಯಾಗಿದೆ. ದೀಪವನ್ನು ಹಚ್ಚಬಾರದೇ?" ತಾಯಿ ಕೇಳಿದಳು.

"ಇನ್ನೂ ಸಾಕಷ್ಟು ಬೆಳಕಿದೆ."

"ಬೆಳಕು."

"ಹ! ಕತ್ತಲಾಗಿದೆ." ಎಂದು ಎದ್ದು ಕಡ್ಡಿಯ ಪೆಟ್ಟಿಗೆಯನ್ನು ಹುಡುಕಾಡಹತ್ತಿದಳು.

"ಕತ್ತಲಾದುದು ನಿನಗೆ ತಿಳಿಯದಿದ್ದರೆ ಹೇಗೆ ಕಲ್ಯಾಣಿ!" ಎಂದು ತುಂಬಿ ಬಂದ ದುಃಖವನ್ನು ನುಂಗಿ ತಾಯಿ ನುಡಿದಳು.

"ನನಗೆ ತಿಳಿಯದು. ಕಣ್ಣಿಗೆ ಬೆಳಕೇ ಇದ್ದಂತೆ ಕಂಡಿತು." ಎಂದು ದೀಪವನ್ನು ಹಚ್ಚಿ ನಮಸ್ಕರಿಸಿದಳು.

ಮಗಳ ಈ ಮಾತು ತಾಯಿ ಮತ್ತು ಸೀತಮ್ಮನ ಚಿಂತೆಗೆ ಕಾರಣ ವಾಯಿತು.—"ಇದೇನು ದೆವ್ವಿನ ಆಟವಿರಬೇಕೇ?" ಎಂದು ವಿಚಾರಿಸಿದರು. "ಮಗಳನ್ನು ಸವತಿಯು ಹಿಡಿದುಕೊಂಡಿರುವಳು." ಎಂದು ನುಡಿಯುವುದು ಸಂಕಟದ ವಿಷಯವಿದ್ದಿತು. ಸುಮ್ಮನಾಗಿ ಬಿಟ್ಟರು.

ಇನ್ನೊಂದು ದಿನ ಪಡಸಾಲೆಯಲ್ಲಿ ಗೌರಮ್ಮ, ಸೀತಮ್ಮ ಮತ್ತು ಕಲ್ಯಾಣಿ ಮಾತಾಡುತ್ತ ಕುಳಿತಿದ್ದರು. ಗುರುಗಳು ನೆರೆಹಳ್ಳಿಗೆ ಒಂದು ಕೆಲಸದ ಸಲುವಾಗಿ ಹೋಗಿದ್ದರು. ರಾತ್ರಿಯಾಗುವ ವರೆಗೆ ಅವರು ಮನೆಗೆ ಬರುವಂತಿರಲಿಲ್ಲ. ಕರುಣನು ಊಟಕ್ಕೆ ಬಂದಿರಲಿಲ್ಲ. ಯಾರ ಹೆದರಿಕೆ ಯಿಲ್ಲದೆ ಬಿಚ್ಚು ಮನಸಿನಿಂದ ಹರಟೆಯನ್ನು ಹೊಡೆಯುತ್ತಿದ್ದರು. ಕಲ್ಯಾ ಣಿಯೂ ನಡುನಡುವೆ ಒಂದೆರಡು ಮಾತುಗಳನ್ನು ಹೇಳುತ್ತಿದ್ದಳು.

"ಸೀತಮ್ಮ, ನಾವು ಬಂದು ಬಹಳ ದಿನಗಳಾದುವು. ಮನೆಯಲ್ಲಿ ಅವರು ಹೇಗಿರುವರೋ ಯಾರು ಬಲ್ಲರು? ಮೊದಲೇ ಅವರು ಮುದುಕರು. ಮೇಲೆ ಶರೀರದಿಂದ ದುರ್ಬಲರು. ಅರ್ಧಾಂಗ ವಾಯುವಿನಿಂದ ಇನ್ನಷ್ಟು ಪರಾಧೀನರಾಗಿರುವರು. ನಾನು ಮನೆಯಲ್ಲಿದ್ದು ಹಗಲು-ರಾತ್ರಿ ಅವರ ಆರಯಿಕೆಯನ್ನು ಮಾಡಿದರೂ ಅದು ನಿಲುಕಲಾರದೆ ಹೋಗುವುದು. ಈಗ ನೆರೆಮನೆಯವರ ಕಣ್ಣರಿಕೆಯಲ್ಲ ಇರಬೇಕು. ಏನಾಗಿದೆಯೋ ಯಾರು ಬಲ್ಲರು. ಜೀವ ಆ ಕಡೆಗೇ ಹರಿಯುವುದು. ಇಲ್ಲಿ ಸಿಕ್ಕಿಕೊಂಡು ಬಿಡಲಾರದಂತಾಗಿದೆ ಹೆಣ್ಣು ಜನ್ಮಕ್ಕೆ ಬಂದು ಎಷ್ಟು ಚಿಂತೆಯನ್ನು ಮಾಡಬೇಕು!" ಎಂದು ಗೌರಮ್ಮ ಹರಟೆಯ ಓಲಾಪದಲ್ಲಿ ಎರಡು ಮಾತು ಹೆಚ್ಚಾಗಿ ನುಡಿದಳು.

"ಅಹುದು ಗೌರಮ್ಮ ಹೀಗಾಗುವುದು ನಿಜ. ನನ್ನ ಜೀವವು ಆ ಕಡೆಗೇ ಓಡುವುದು. ನಾವು ಇಲ್ಲಿ ಇದ್ದುದು ಕಾರ್ಯದ ಮಹತ್ವಕ್ಕಾಗಿ ಯಲ್ಲವೇ? ಇಲ್ಲಿಯದು ಸಮನಾದರೆ ನಮಗೆ ಹೋಗಲು ಸಂತೋಷ. ನಮ್ಮ ಮನೆ, ನಮ್ಮ ಮಕ್ಕಳು, ನಮ್ಮ ಸಂಸಾರ ನಮಗೆ ಹತ್ತಿದ್ದೇ!" ಎಂದು ಸೀತಮ್ಮ ನುಡಿದಳು.

"ಕಲ್ಯಾಣಿ ನಮಗೆ ಎಂದು ಅಪ್ಪಣೆಯನ್ನು ಕೊಡುವಳೋ?" ಎಂದು ಚೇಷ್ಟೆಯ ಭಾವನೆಯಿಂದ ಗೌರಮ್ಮ ಮಾತಾಡಿದಳು.

"ನಾನೇಕೆ ಅಪ್ಪಣೆಯನ್ನು ಕೊಡಬೇಕು....?" ಇನ್ನೂ ಒಂದೆರಡು

ಮಾತುಗಳನ್ನು ಆಡಬೇಕೆಂದು ಬಾಯಿ ತೆರೆದಿದ್ದಳು. ಕರುಣನು ಬಂದುದು ಕಂಡಿತು.

ಕರುಣನು ನೇರವಾಗಿ ತನ್ನ ಕೋಣೆಗೆ ಹೋಗಿ ಬಟ್ಟೆಗಳನ್ನು ಕಳೆದು ಕಾಲು ತೊಳೆಯಲು ಬಾಗಿಲಿಗೆ ಬಂದನು. ಒಳಗಿನ ಹೊಸತಿಲ ಹತ್ತಿರ ಹೆಂಗಸರು ಕುಳಿತಿದ್ದರು. ಸಂಕೋಚವೆನಿಸಿ ತಿರುಗಿದನು. ಇದನ್ನು ಕಲ್ಯಾಣಿಯು ನೋಡಿದಳು. ಅವನು ಒಳಗೆ ಬಾರದಿರಲು ಕಾರಣವು ತಿಳಿಯಿತು. ಗೌರಮ್ಮ, ಸೀತಮ್ಮರು ಸುಮ್ಮನೇ ಕುಳಿತರು. ಅವನು ಬಂದುದು, ತಿರುಗಿ ಹೋದುದು ಬೇರಾವ ಬಗೆಯ ಭಾವನೆಯನ್ನು ಹುಟ್ಟಿಸಲಿಲ್ಲ. ತನ್ನ ಯಾವುದೇ ಕೆಲಸಕ್ಕೆ ತಿರುಗಿ ಹೋದನೆಂದು ಗ್ರಹಿಸಿ ಹರಟೆಯ ಭಾಗವನ್ನು ಮುಂದುವರಿಸುವಂತೆ—

" ಆದೇಕೆ ನಿನ್ನ ಅಪ್ಪಣೆ.... ! " ಎಂಬ ಸೀತಮ್ಮನ ಉದ್ಗಾರ ಸೂಚಕ ಮಾತನ್ನು ಕಲ್ಯಾಣಿಯು ತಡೆಯುತ್ತ—

" ತಾಯೀ, ಅವನನ್ನು ಕರೆ." ಎಂದು ಹೇಳಿದಳು.

ಗೌರಮ್ಮನು ಎದ್ದು ಹೋಗಿ—" ಬಾರಪ್ಪ ಕರುಣ. ಏನು ಬೇಕು ? ಒಳಗೆ ಬಾ." ಎಂದು ಕರೆದಳು.

" ಏನಿಲ್ಲ. ಕಾಲು ತೊಳೆಯ ಬೇಕೆಂದಿದ್ದೆ. ಬರುವೆ." ಎಂದನು.

ಕರುಣನು ತಲೆ ಬಗ್ಗಿಸಿಕೊಂಡು ಒಳಗೆ ಬಂದನು. ಕಲ್ಯಾಣಿಯು ನೀರು ತುಂಬಿ ಇಟ್ಟಳು. ಕಾಲು ತೊಳೆದುಕೊಂಡು ಒಳಗೆ ಬಂದನು. ಒರಸಿ ಕೊಳ್ಳಲು ಪಂಚೆಯನ್ನು ಕೊಟ್ಟಳು. ಕರುಣನು ಕಾಲು ಒರಸಿಕೊಂಡು ಹೊರಬಿದ್ದನು.

" ತಾಯೀ, ಅವನನ್ನು ಕರೆ." ಕಲ್ಯಾಣಿ ಮತ್ತೆ ನುಡಿದಳು.

ಮಗಳು ತನಗೆ ಹೀಗೆ ಹೇಳುವುದರ ಭಾವವನ್ನು ತಾಯಿಯು ಅರಿತು ಕೊಂಡಳು. ಅವಳಿಗೆ ಸಂತೋಷವೆನಿಸಿತು.—ವ್ಯಾವಹಾರಿಕ ಒಂದು ಪ್ರಶ್ನೆವನ್ನು ಆರಂಭಿಸಲು ಕರುಣನನ್ನು ಆಹ್ವಾನಿಸುವಳು. ಆನಂದದ ಸಂಗತಿಯು ಎಂದು ಕಲ್ಪಿಸುತ್ತ ಕರುಣನನ್ನು ಕರೆದಳು. ಅವನು ಒಳಗೆ ಬಂದು ನಡುಮನೆಯಲ್ಲಿ ನಿಂತನು.

" ಅಲ್ಲಿ ಏಕೆ ಕರುಣ. ಒಳಗೆ ಬಾ. ಮಣೆಯನ್ನು ಕೊಡು ಕಲ್ಯಾಣಿ

ಅಲ್ಲಿ ಕೂಡಲಿ. ನಾಳೆ ಇಲ್ಲವೆ ನಾಡಿದು ನಾವು ಊರಿಗೆ ಹೋಗುವವರು. ನೀನು ಹೀಗೆ ಅಪರಿಚಿತರಂತೆ ನಡೆದರೆ ಹೇಗೆ? ಒಳಗೆ ಬಾ." ಎಂದು ಆಗ್ರಹ ಮಾಡಿದಳು.

ಕಲ್ಯಾಣಿಯು ತಾಯಿಯ ಈ ಮಾತುಗಳಿಗೆ ಬಹಳ ಸಂತೋಷಪಟ್ಟಳು. ಇಷ್ಟೊಂದು ದೂರದೃಷ್ಟಿ, ವ್ಯಾವಹಾರಿಕ ಜ್ಞಾನ ತನ್ನ ತಾಯಿಗೆ ಇರುವುದೆಂದು ಅರಿತಿರಲಿಲ್ಲ. ಆ ಸಂತೋಷದ ಭರದಲ್ಲಿಯೆ ಎದ್ದು ಮಣೆಯನ್ನು ಹಾಕಿದಳು. ಗೋಡೆಗೆ ಒಂದು ಮಣೆಯನ್ನು ನೆಂಬಲು ನಿಲ್ಲಿಸಿದಳು. ಆದರೆ ಕರುಣನು ಒಳಗೆ ಬರಲಿಲ್ಲ.

"ಏನು ಹೇಳಿರಿ. ಇಲ್ಲೇ ಕೂಡುವೆ." ಎಂದು ನುಡಿದು ನೆಲದ ಮೇಲೆ ಕುಳಿತನು.

"ಇದೇನಪ್ಪ? ಒಳಗೆ ಬಾ. ನಾವು ಇಬ್ಬರು ಮುದುವರು. ಅವಳು ನಿನ್ನ ತಾಯಿ. ತಾಯಿಯ ಮುಂದೆ ಸಂಕೋಚವೇ? ಒಳಗೆ ಬಾ." ಎಂದು ಮುಗುಳು ನಗೆಯಿಂದ ಸ್ವಾಗತಿಸಿದಳು.

ಸೀತಮ್ಮನು ನಕ್ಕಳು.

ಕಲ್ಯಾಣಿಗೆ ಪರಮಾನಂದವಾಯಿತು. ಮುಖದ ಮೇಲಿನ ನೈರಾಶ್ಯ, ಆತ್ಮಗ್ಲಾನಿ, ಚಿಂತೆಗಳನ್ನು ಒರಸಿ ತೆಗೆದಂತೆ ನಿಚ್ಚಳವಾಯಿತು. ಹಣೆಯ ಮೇಲಿನ ದುಃಖದ ಹತ್ತಿಪ್ಪತ್ತು ಗೆರೆಗಳಲ್ಲಿ ರಕ್ತ ತುಂಬಿ ಹರಿದಾಡಿತು.

"ಒಳಗೆ ಬಾ ಕರುಣ. ಸಂಕೋಚವೇಕೆ?" ಕಲ್ಯಾಣಿ ಕರೆದಳು.

ಕರುಣನು ನಿರ್ವಾಹವಿಲ್ಲದೆ ಒಳಗೆ ಬಂದನು.

"ತಾಯಿಯು ಕರೆದ ಮೇಲೆಯೇ ಬರಬೇಕೆಂದು ಮಾಡಿದ್ದೆಯಾ? ನಮ್ಮಂತಹ ಹಿರಿಯರ ಮಾತಿಗಿಂತಲೂ ತಾಯಿಯ ಆಜ್ಞೆ ಹೆಚ್ಚಾಯಿತೇ? ಇದರಿಂದ ನಮಗೂ ಸಂತೋಷ." ಸೀತಮ್ಮನು ಮುಂದಿನ ಹಲ್ಲು ಬಿದ್ದ ಬಾಯಿಯಿಂದ ಪಕಪಕನೆ ನಗುತ್ತ ಚೇಷ್ಟೆ ಮಾಡಿದಳು.

ಕರುಣನ ಪಕ್ಕೆಯಲ್ಲಿ ಬೆರಳಿಟ್ಟು ಚಕ್ಕಳಿಗುಟ್ಟಿದಂತಾಯಿತು. ಜೀವನದಲ್ಲಿಯೇ ಇಂಥ ರಮ್ಯ ಮಾತುಗಳನ್ನು ಕೇಳಿರಲಿಲ್ಲ. ಆ ಸಂತೋಷದಲ್ಲಿಯೇ —"ನಿಮ್ಮ ಮಾತನ್ನು ಕೇಳುತ್ತೇನೆ, ತಾಯಿಯ ಮಾತನ್ನೂ ಕೇಳುತ್ತೇನೆ. ನನಗೆ ನೀವೆಲ್ಲರೂ ಹಿರಿಯರಲ್ಲವೇ?" ಎಂದು ನುಡಿದನು.

ಈ ಎರಡು ಮಾತಿನಿಂದ ಅವನ ಸ್ವಭಾವವನ್ನು ಅರಿತುಕೊಂಡರು. ಒಂದು ಕ್ಷಣವು ಕಳೆದ ಮೇಲೆ—ಇಂದು ಮುಂಜಾನೆ ಊಟಕ್ಕೆ ಬಂದಿರಲಿಲ್ಲ. ಎಲ್ಲಿ ಹೋಗಿದ್ದೆ ?" ಕಲ್ಯಾಣಿ ಕೇಳಿದಳು.

"ನಾನು ಗೆಳೆಯನ ಮನೆಯಲ್ಲಿ ಊಟ ಮಾಡಿದೆ."

"ನಿನ್ನ ಊಟ ಆಯಿತೋ, ಇಲ್ಲವೋ ಇದು ನಮಗೆ ತಿಳಿಯಬಾರದೇ?"

ಕರುಣನು ಮಾತಾಡಲಿಲ್ಲ.

"ನಿನ್ನ ತಾಯಿ ಜೀವದಿಂದಿದ್ದರೆ ನೀನು ಮನೆಗೆ ಊಟಕ್ಕೆ ಬಾರದಿದ್ದುದಕ್ಕೆ ತಾನು ಊಟವನ್ನು ಮಾಡುತ್ತಿದ್ದಳೋ ಇಲ್ಲವೋ ನನಗೆ ತಿಳಿಯದು. ನಾನು ಮಾತ್ರ ಊಟಮಾಡಿರುವೆ." ಎಂದು ಕಲ್ಯಾಣಿ ನುಡಿದಳು.

"ಮಾಡುತ್ತಿದ್ದಳು. ನನಗೆ ಗೊತ್ತು. ಆದರೆ ತಾನು ಊಟ ಮಾಡಿ ನನ್ನನ್ನು ಹುಡುಕಿ, ಕಿವಿಯನ್ನು ಹಿಂಡಿ, ಸಾಧ್ಯವಾದರೆ ಒಂದೆರಡು ಬಡಿದು, ಎಳೆದು ತಂದು ಉಣಬಡಿಸಿದುದನ್ನು ನಾನು ಇನ್ನೂ ಜ್ಞಾಪಿಸಿಕೊಳ್ಳಬಲ್ಲೆ. ಇದು ನಿಜವಾದುದು.

"ಅದು ನನ್ನ ಕೈಯಿಂದ ಆಗದು. ಅದಕ್ಕಾಗಿ ಒಂದೆರಡು ವರುಷದಲ್ಲಿ ಒಬ್ಬಳನ್ನು ನಿಯಮಿಸುವೆ. ಅವಳೇ ನಿನ್ನನ್ನು ಹುಡುಕುವಳು. ಕಿವಿಯನ್ನು ಹಿಂಡುವಳು. ಮನೆಗೆ ಎಳೆದು ತರುವಳು. ಊಟಕ್ಕೆ ಹಾಕುವಳು. ಕೊನೆಗೆ ತಾನು ಉಣ್ಣುವಳು. ಅಂಥವಳನ್ನು ತಂದು ಆ ಕೆಲಸವನ್ನು ಅವಳಿಗೆ ಒಪ್ಪಿಸುವೆ. ನನ್ನಿಂದ ಸಾಧ್ಯವಿಲ್ಲ." ಎಂದು ನಗುತ್ತ ನುಡಿದಳು.

"ಅಹುದು, ಅಹುದು. ಇದೇ ಒಳ್ಳೆಯದು." ಸೀತಮ್ಮನೆಂದಳು.

ಎಲ್ಲರೂ ನಗಹತ್ತಿದರು.

ಕರುಣನು ನಕ್ಕುದನ್ನು ಕಲ್ಯಾಣಿ ಕಂಡುದು ಇದೇ ಮೊದಲು.

"ಅವಳು ಬರುವ ವರೆಗೆ ನೀವು ಕಿವಿ ಹಿಂಡಿದರೂ ನಡೆದೀತು." ಕಲ್ಯಾಣಿಯನ್ನು ನೋಡಿ ನಗುತ್ತ ಕರುಣನು ನುಡಿದನು.

ಮತ್ತೊಮ್ಮೆ ಎಲ್ಲರು ನಕ್ಕರು.

ಆದರೆ ಆ ಮಾತಿನ ಅರ್ಥವನ್ನು ದೇವರೇ ಮಾಡಿರಬೇಕು.

ಕಲ್ಯಾಣಿಗೆ ನಗುನಗುತ್ತಲೇ ವಿಷಾದದ ಕಾರ್ಮೋಡ ಮುಖದ ಮೇಲೆ ಮೂಡಿ ತೇಲಿಕೊಂಡು ಹೋಯಿತು. ಕರುಣನು ತಲೆಯನ್ನು ಕೆಳಗೆ ಹಾಕಿ

ನಗುತ್ತ ನೆಲವನ್ನು ಕೆದರ ಹತ್ತಿದನು. ಸೀತಮ್ಮ ಗೌರಮ್ಮರ ಮುಖದಲ್ಲಿ ನಗೆಯ ಕೊನೆಯ ಒಂದೆರಡು ಗೆರೆಗಳು ಇನ್ನೂ ಕಂಡು ಬರುತ್ತಿದ್ದುವು.

ಕಲ್ಯಾಣಿಯು ಉಗುಳು ನುಂಗಿ—“ ಕಳೆದ ನಾಲ್ಕಾರು ದಿನಗಳಲ್ಲಿ ನೀನು ಮನೆಯಲ್ಲಿ ಎಷ್ಟು ಸಾರೆ ಉಂಡಿರುವೆ? ” ಎಂದು ಪ್ರಶ್ನಿಸಿದಳು.

“ ನನಗೆ ಚೆನ್ನಾಗಿ ಗೊತ್ತಿಲ್ಲ.”

“ ಒಂದು ದಿನ ಸಂಜೆಯ ಊಟ ಮಾಡಲಿಲ್ಲ. ಮರುದಿನ ಮನೆಯಲ್ಲಿಯೇ ಇರಲಿಲ್ಲ. ಆ ಮುಂದೆ ಬುಧವಾರ ಒಂದು ಹೊತ್ತು ಉಂಡಿರುವೆ. ಎರಡು ದಿನ ಮನೆಯ ಕಡೆಗೆ ಬರಲಿಲ್ಲ. ಈಗ ಬಂದಿರುವೆ. ಚಹ–ತಿನಿಸಿಗೆ ಒಂದು ದಿನ ಹಾಜರಿಲ್ಲ. ನಿದ್ರೆಯನ್ನು ಎಲ್ಲಿ ಮಾಡುವೆಯೋ? ” ಎಂದು ಕೇಳಿದಳು.

“ ನಾವು ಇಷ್ಟೆಲ್ಲವನ್ನು ನೆನಪಿನಲ್ಲಿ ಇಟ್ಟಿಲ್ಲ ಬಿಡು.” ಗೌರಮ್ಮ ನುಡಿದಳು.

“ ಹಡೆದ ತಂದೆಯ ನೆನಪಿನಲ್ಲಾದರು ಇದೆಯೋ ಇಲ್ಲವೋ? ” ಕಲ್ಯಾಣಿ ಬಿರುಸಾಗಿ ಮಾತಾಡಿದಳು.

“ ಅಹುದು. ಅವರು ಸಹ ಒಂದು ದಿನ ಕೂಡ ನಿನ್ನನ್ನು ಸ್ಮರಿಸಿದಂತಿಲ್ಲ.” ಗೌರಮ್ಮನೆಂದರು.

“ ಮುಂಜಾನೆ ಎಷ್ಟು ಹೊತ್ತಿಗೆ ಊಟ ಮಾಡಿರುವೆ? ” ಕಲ್ಯಾಣಿ ಪ್ರಶ್ನಿಸಿದಳು.

“ ೧೦–೧೧ ಗಂಟೆಗೆ ಮಾಡಿರಬೇಕು.”

“ ಚಹ ಆಗಿದೆಯೇ? ”

“ ಇಲ್ಲ.”

“ ತಾಯೀ, ನನಗೂ ಹಸಿವೆಯಾಗಿದೆ. ಒಂದಿಷ್ಟು ಏನನ್ನಾದರೂ ಮಾಡು.” ಕಲ್ಯಾಣಿಯು ತಾಯಿಗೆ ಹೇಳಿದಳು.

ಗೌರಮ್ಮ ಎದ್ದು ಒಲೆಯನ್ನು ಹೊತ್ತಿಸಿದಳು. ಅಲ್ಪೋಪಹಾರವನ್ನು ಮಾಡಲು ತೊಡಗಿದಳು.

ಸೀತಮ್ಮನೂ ಒಳಗೆ ಹೋದಳು:

“ ಕರುಣ, ಇಷ್ಟು ದಿನಗಳ ವರೆಗೆ ನೀನು ಎಲ್ಲಿ ಮಲಗಿದೆ? ” ಕಲ್ಯಾಣಿ

ಕೇಳಿದಳು.

" ಗೆಳೆಯರ ಮನೆಯಲ್ಲಿ,"

" ಧರ್ಮಶಾಲೆಯಲ್ಲಿ ಮಲಗಲಿಲ್ಲ. ಸಂತೋಷ." ಅಣಕವಾಡಿದಳು.

" ನಾನು ಅನಾಥನೂ ಅಲ್ಲ. ಸನ್ಯಾಸಿಯೂ ಅಲ್ಲ. ಧರ್ಮಶಾಲೆಯಲ್ಲಿ ಏಕೆ ಮಲಗಬೇಕು ? " ತಿರುಗಿ ಕೇಳಿದನು.

" ಇಷ್ಟನ್ನು ತಿಳಿದುಕೊಂಡುದಕ್ಕೆ ನನಗೆ ಸಂತೋಷವೆನಿಸುವುದು." ಕಲ್ಯಾಣಿ ಹುಸಿನಕ್ಕು ಹೇಳಿದಳು.

ಕರುಣನ ಉತ್ತರದಿಂದ ಕಲ್ಯಾಣಿಗೆ ಆನಂದವಾಗಿದ್ದಿತು. ಅವನು ಹೇಳಿದ ಮಾತುಗಳಲ್ಲಿ ಎರಡು ಸಂಗತಿಗಳು ಮುಖ್ಯವಾಗಿದ್ದುವು. ಅವನು ಅನಾಥನಲ್ಲ. ನನ್ನವರೆಂಬುವವರು ಇರುವರು. ಅವರ ಮೇಲೆ ಅಭಿಮಾನ ವಿದೆ. ವ್ಯಕ್ತಿತ್ವದ ಲಕ್ಷಣವಿದೆ. ತಾನು ಸನ್ಯಾಸಿಯಲ್ಲ. ಇನ್ನೂ ಬ್ರಹ್ಮಚಾರಿ ಇರುವನು. ಗೃಹಸ್ಥನಾಗುವ ಬಯಕೆ ಇದೆ. ಇವುಗಳಿಂದ ಇನ್ನೂ ಬದುಕುವ ಹಂಬಲವಿದೆ. ಹೃದಯದ ನುಡಿಯೇ, ಜೀವಾತ್ಮನ ನುಡಿಯೇ ಮಾನವನ ಸ್ವಭಾವ, ಬಾಳು, ಇರುವಿಕೆ, ಕರುಣನ ನುಡಿಯಲ್ಲಿ ಅವು ಇವೆ. ಅದನ್ನೇ ನುಡಿದನು. ಅವನ ಆಶಾವಾದಿತ್ವದ ಜೀವನದ ಸಂಗಡ ನನ್ನ ಬಾಳ್ ಬಳ್ಳಿ ಯನ್ನು ಹಬ್ಬಿಸಿದರೆ ಸಾಕಲ್ಲವೇ ! ಎಂಬ ಕಲ್ಪನೆಯಿಂದ ಅವಳಿಗೆ ಎಂಥ ಸಂತಸ ! ಎಂಥ ಚೆಲುವು !! ಕಲ್ಯಾಣಿಗೆ ಇಂದು ಹೊಸ ಬಗೆಯ ಚೈತನ್ಯ ಅವರಿಸಿದಂತಾಯಿತು. ಹುಮ್ಮಸ್ಸು ಸೇರಿದಂತಾಯಿತು. ಮುಖಕ್ಕೆ ಸಂತೋಷದ ಕೆನೆಯನ್ನು ತೀಡಿದಂತಾಯಿತು.

" ತಾಯೀ, ಆಯಿತೇ ? " ಎಂದು ಕೇಳಿದಳು.

" ಆಯಿತು. ತಂದೆ." ಎಂದು ಸಿರಾ, ಅವಲಕ್ಕಿಗಳನ್ನು ಎರಡೆರಡು ತಟ್ಟೆ ಗಳಲ್ಲಿ ತುಂಬಿ ಉಭಯತರ ಮುಂದೆ ಇಟ್ಟಳು. —" ಚಹ ಸೋಸಿ ತರುವೆ, ತಿನ್ನಿರಿ." ಎಂದು ಒಳಗೆ ಹೋದಳು.

" ಕರುಣ, ತೆಗೆದುಕೋ ! " ಎಂದು ಕಲ್ಯಾಣಿ ನುಡಿದಳು.

" ನನಗೆ ಹಸಿವೆ ಇಷ್ಟಿಲ್ಲ." ಸಂಕೋಚದಿಂದ ನುಡಿದನು.

" ನಿನ್ನ ಹಸಿವೆ ಎಷ್ಟು ? ಹೊಟ್ಟೆ ಎಷ್ಟು ? ನಾನು ಅಳತೆಯನ್ನು ಮಾಡಿ ಕೊಳ್ಳಬೇಕಾಗಿದೆ ತಿನ್ನು." ಎನ್ನುತ್ತ ತಾನೂ ತಿನ್ನ ಹತ್ತಿದಳು.

ಕರುಣನು ತಿನ್ನ ಹತ್ತಿದನು.

ಗೌರಮ್ಮ ಚಹ ತಂದಿಟ್ಟಳು. ಅದನ್ನು ಕುಡಿದರು. ಕೈ ತೊಳೆದುಕೊಂಡರು.

"ತಾಯೀ, ನೀನು ಮತ್ತು ಸೀತಮ್ಮ ತೆಗೆದುಕೊಳ್ಳುವುದಿಲ್ಲವೇ?" ಕಲ್ಯಾಣಿ ಕೇಳಿದಳು.

"ನಮಗೆ ಬೇಡಮ್ಮ. ಮಧ್ಯಾಹ್ನದ ಅನ್ನ ಇನ್ನೂ ಹೊಟ್ಟೆಯಲ್ಲಿ ಕುಳಿತಿದೆ. ತಿಂದರೆ ವಿಪಚನವಾದೀತು." ಎಂದರು.

"ಚಹವನ್ನಾದರೂ ಕುಡಿಯಿರಿ."

ಗೌರಮ್ಮ ಎರಡು ಕಪ್ಪು ಚಹ ತಂದಿಟ್ಟುಕೊಂಡಳು. —"ಇಷ್ಟು ನಮಗೆ ಸಾಕು. ಬಾ ಸೀತಮ್ಮ." ಎಂದು ಕರೆದಳು.

ಸೀತಮ್ಮನು ಒಂದು ಕಪ್ಪಿನ ಮುಂದೆ ಕುಳಿತಳು.

ಕಲ್ಯಾಣಿ ಗಂಡನ ಮನೆಗೆ ಬಂದ ಮೇಲೆ ಇಷ್ಟು ಬಿಚ್ಚುಮನಸಿನಿಂದ ಮಾತಾಡಿದುದು, ಇಷ್ಟು ತೀವ್ರ ಭಾವನೆಯ ಹಸಿವೆಯಿಂದ ತಿಂದುದು ಗೌರಮ್ಮ ಮತ್ತು ಸೀತಮ್ಮರ ಕಣ್ಣಲ್ಲಿ ಇದೇ ಮೊದಲನೆಯ ಸಾರೆ ಕಂಡುದು. ಅವರಿಗೆ ಮಗಳ ಮನಸು ಸುಧಾರಿಸ ಹತ್ತಿದ ಲಕ್ಷಣಗಳು ಕಂಡುಬರಹತ್ತಿದುವು. ಗೌರಮ್ಮನಂತೂ ಎಲ್ಲಮ್ಮನೇ ಒಲಿದಳೆಂದು ತಿಳಿದಳು

ಕಲ್ಯಾಣಿಯು ಎದ್ದು ಅಡಿಕೆಯನ್ನು ಕರುಣನಿಗೆ ಕೊಡುತ್ತ—

"ಸಂಜೆಗೆ ಊಟಕ್ಕೆ ಮರೆಯದೆ ಬಾ. ನಾನು ನಿನ್ನ ದಾರಿಯನ್ನು ನೋಡುವೆನು. ಮತ್ತು ಇಂದಿನಿಂದ ನೀನು ಇಲ್ಲಿಯೇ ಮಲಗು. ನಿನ್ನ ಕೋಣೆಯು ಕಳೆದ ಐದಾರು ದಿನಗಳಿಂದ ದೀಪವನ್ನು ಕಂಡಿಲ್ಲ. ಇಂದು ದೀಪವನ್ನು ಹಚ್ಚಿ ಇಲ್ಲಿಯೇ ಓದು. ಮಲಗು."

"ಆಗಬಹುದು. ತಾಯಿಯ ಅಪ್ಪಣೆ." ನಗಹತ್ತಿದನು.

"ಹೋಗು. ಒಂದಿಷ್ಟು ತಿರುಗಾಡಿಕೊಂಡು ಬಾ."

ಕರುಣನು ನಗುತ್ತ—"ಇದೂ ಅಪ್ಪಣೆ." ಎಂದು ಹೊರಬಿದ್ದನು.

ಗುರುಗಳು ಊರಿಂದ ಎದುರಿಗೆ ಬಂದರು.

## ೧೧

ಕರುಣನು ಮನೆಯಲ್ಲಿ ಬಂದು ನಿಂತಮೇಲೆ ಮನೆಯು ಮಂಗಲಧಾಮ ವಾಯಿತು. ಕಲ್ಯಾಣಿಯು ಎಲ್ಲರ ಸಂಗಡ ಬಿಚ್ಚುಮನಸಿನಿಂದ ಮಾತಾಡ ಹತ್ತಿದಳು. ನಗೆಯ ಪ್ರಸಂಗದಲ್ಲಿ ನಗಹತ್ತಿದಳು. ದುಃಖದ ಸಮಯದಲ್ಲಿ ತಾನೂ ಬಿಸಿಯುಸಿರುಗರೆಯಹತ್ತಿದಳು. ಆನಂದದ ವೇಳೆಯಲ್ಲಿ ಮೆಲ್ಲಗೆ ರಾಗವನ್ನು ಎಳೆಯಹತ್ತಿದಳು. ಕಣ್ಣು ಚಿವುಟುವುದು, ಮೂಗು ಏರಿಸುವುದು, ಹುಬ್ಬು ಕುಣಿಸುವುದು ಇತ್ಯಾದಿ ಮನೋಭಾವನೆಗಳನ್ನು ಆಯಾ ಪ್ರಸಂಗ ಗಳಿಗೆ ಉಚಿತವಾಗಿ ತೋರ್ಪಡಿಸಹತ್ತಿದಳು. ಊಟಕ್ಕೆ ಕುಳಿತಾಗ ಅದನ್ನು ಇನ್ನಷ್ಟು ಹಾಕು, ಇದು ಸಾಕು, ಇದಕ್ಕೆ ಉಪ್ಪು ಹೆಚ್ಚು, ಅದಕ್ಕೆ ಹುಳಿ ಕಡಿಮೆ ಎಂದು ರುಚಿಯ ತಾರತಮ್ಯಗಳನ್ನು ಹೇಳಹತ್ತಿದಳು. ವೈತಿಕ್ಕೆ ಜಳಕಮಾಡುವುದು, ಓರಣದಿಂದ ಬಟ್ಟೆ ತೊಡುವುದು, ಮೂರು ಸಂಜೆಗೆ ಮುಖವನ್ನು ಶೃಂಗರಿಸಿಕೊಳ್ಳುವುದು, ಕರುಣನು ತಂದುಕೊಟ್ಟ ಮಾಲೆಗಳನ್ನು ಧರಿಸುವುದು ಇತ್ಯಾದಿಗಳನ್ನು ಮಾಡುತ್ತ ಶರೀರದ ಅಲಂಕಾರದ ಜೊತೆಗೆ ಮುಖವನ್ನು ಅರಳಿಸಿಕೊಂಡು ಎಲ್ಲರ ಮುಂದೆ ಮುಗುಳನಗೆಯು ಬಾಯಿಂದ ಒಡಾಡಹತ್ತಿದಳು. ಕರುಣನು ತಿರುಗಾಡಲು ಹೊರಗೆ ಹೋಗಲು ತಾಯಿಯ ಜೊತೆಗೆ ತಾನೂ ಗುಡಿಗೆ ಹೋಗಿ ದೇವರಿಗೆ ಪ್ರದಕ್ಷಿಣೆಯನ್ನು ಹಾಕಿ ನಮಸ್ಕರಿ ಸುವ ರೂಢಿಯನ್ನಿಟ್ಟುಕೊಂಡಳು ಇದೆಲ್ಲವನ್ನು ನೋಡಿ ಗೌರಮ್ಮ-ಸೀತಮ್ಮ ರಿಗೆ ಸಂತೋಷವಾಯಿತು. ಮಗಳು ಹತ್ತು ಜನರಂತೆ ಇರಹತ್ತಿದಳು. ಮೊದಲಿನಂತೆ ಊಟಮಾಡಹತ್ತಿದಳು, ನಗಹತ್ತಿದಳು, ಹಾಡಹತ್ತಿದಳು ಎಂದು ಆನಂದಭರಿತರಾದರು. ನಾಲ್ಕೇ ದಿನಗಳಲ್ಲಿ ಕಲ್ಯಾಣಿಯ ಮುಖದ ಮೇಲೆ ಮಿಂಚಿನ ಹುಡಿಯನ್ನು ತೀಡಿದಂತೆ ಸೌಂದರ್ಯಶಾಲಿನಿಯಾಗಿ ಕಾಣ ಹತ್ತಿದಳು. ಆದರೆ ಒಂದು ವಿಷಯದ ಸಂಬಂಧ ಇನ್ನೂ ಸಂಶಯ!

ನಿತ್ಯ ಅವಳು ತಮ್ಮ ಹತ್ತಿರವೇ ಮಲಗುತ್ತಿದ್ದಳು. ಒಂದೆರಡು ಸಾರೆ ಸೀತಮ್ಮ ಅವಾಂತರವಾಗಿ ನುಡಿದಿದ್ದಳು. ಅದನ್ನು ಕಲ್ಯಾಣಿಯು ಕೇಳಿಯೂ ಕೇಳದಂತೆ ಮಾಡಿದ್ದಳು. ಇದಕ್ಕೆ ತಾಯಿಯು ಇನ್ನೊಂದು ಅರ್ಥವನ್ನು

ಕಲ್ಪಿಸಿದ್ದಳು " ಮಗಳು ಒಂದಿಷ್ಟು ನಾಚುಗುಳಿ. ನಾವಿರುವ ವರೆಗೆ ಅದು ಸಾಧ್ಯವಿಲ್ಲ. ಹೋದ ಮೇಲೆ ಎಲ್ಲವೂ ಹೊಂದಿಕೆಯಾಗುವುದು. ಅವಳೂ ಹೆಂಗಸು. ಎಲ್ಲವನ್ನು ಬಲ್ಲಳು. ಇಷ್ಟೊಂದು ಪ್ರಗತಿಯಾದ ಮೇಲೆ ಆದಾಗ ಮುಂಟೇ ! " ಎಂಬ ಸಮಾಧಾನದಿಂದ ಇದ್ದಳು.

ಕಲ್ಯಾಣಿಯು ತನಗಾಗಿ ಕೆಲವು ಕೆಲಸಗಳನ್ನು ಇಟ್ಟುಕೊಂಡಿದ್ದಳು. ಗಂಡನು ಎದ್ದ ಕೂಡಲೆ ಮುಖಕ್ಕೆ ನೀರು ಕೊಡುತ್ತಿದ್ದಳು. ಶೌಚ ತೀರಿಸಿ ಕೊಂಡು ಬರಲು ಸ್ನಾನಕ್ಕೆ ನೀರು ತೋಡಿಕೊಡುತ್ತಿದ್ದಳು. ದೋತರಕ್ಕೆ ನೀರಿಗೆಯನ್ನು ಹಾಕಿಡುತ್ತಿದ್ದಳು. ಸಂಧ್ಯಾನದ ಸಾಮುಗ್ರಿಗಳನ್ನು ಅಣಿ ಮಾಡಿಡುತ್ತಿದ್ದಳು. ಊಟದ ಸಮಯಕ್ಕೆ ತಾಟು–ಮಣೆಗಳನ್ನು ಹಾಕುತ್ತಿದ್ದಳು. ರಾತ್ರಿಯಲ್ಲಿ ಅವರ ಹಾಸಿಗೆಯನ್ನು ಓರಣದಿಂದ ಹಾಸುತ್ತಿದ್ದಳು. ಆಯಿತು. ಗಂಡನ ಸಲುವಾಗಿ ಮಾಡುವ ಕೆಲಸಗಳು ಮುಗಿದುವು. ಆದರೆ ಈ ಎಲ್ಲ ಕೆಲಸಗಳಲ್ಲಿ ಮಾತಿಲ್ಲ, ಎದುರೆದುರು ದರ್ಶನವಿಲ್ಲ. ಅವರ ಅಪರೋಕ್ಷದಲ್ಲಿ ಇವೆಲ್ಲ ಮುಗಿದು ಬಿಡುತ್ತಿದ್ದುವು. ಪ್ರಸಂಗವಶಾತ್ ಎದುರು ಬಂದರೆ ಮುಖವನ್ನು ಒರೆಮಾಡಿ ಮರೆಯಾಗುತ್ತಿದ್ದಳು ಗುರುಗಳು ಹೆಂಡತಿಯ ಮುಖವನ್ನು ನೋಡಿಯೇಬಿಡುವೆ, ಮಾತಾಡಿಸಿಯೇ ತೀರುವೆ ಎಂದು ಹಟ ಹಿಡಿದು ನಿಂತರೆ ಊಟದ ಸಮಯಕ್ಕೆ ತಾಟು-ಮಣೆಗಳು ಬೀಳುತ್ತಿರಲಿಲ್ಲ. ನಿದ್ರೆಯ ಸಮಯಕ್ಕೆ ಸುತ್ತಿದ ಹಾಸಿಗೆ ಬಿಚ್ಚುತ್ತಿರಲಿಲ್ಲ. ಕೋಣೆಯ ದೀಪವನ್ನು ಸಹ ಕಾಣುತ್ತಿರಲಿಲ್ಲ. ತಮ್ಮ ಉತ್ಕಟ ಆಕಾಂಕ್ಷೆಯನ್ನು ಹತ್ತಿಕ್ಕಿಕೊಂಡು, ಇದೆಲ್ಲವನ್ನು ತಾಳಿಕೊಂಡು ನಡೆದಿದ್ದರು.

ಕರುಣನ ಬಗ್ಗೆ ವ್ಯವಸ್ಥಾಕ್ರಮವು ಬೇರೆ ಇದ್ದಿತು.

ಒಂದೊಂದು ದಿನ ಗುರುಗಳು ಬೇಗನೆದ್ದು ತಮ್ಮ ಸ್ನಾನ–ಸಂಧ್ಯಾದಿಗಳನ್ನು ತೀರಿಸಿ, ಮುಂಜಾನೆಯ ಅಲ್ಪೋಪಹಾರವನ್ನು ಮುಗಿಸಿ ಸಾಲೆಗೆ ಹೋದರೂ ಕರುಣನು ಎದ್ದಿರುತ್ತಿರಲಿಲ್ಲ. ಆಗ ಕಲ್ಯಾಣಿ ಅವನ ಕೋಣೆಗೆ ಹೋಗಿ ಬಾಗಿಲು ಬಡಿದು ಎಬ್ಬಿಸುತ್ತಿದ್ದಳು. ಏಳದಿದ್ದರೆ ಬಾಗಿಲ ಸಂದಿಯೊಳಗಿಂದ ಕೈಹಾಕಿ ಚಿಲುಕ ತೆಗೆದು ಒಳಗೆ ಹೋಗುತ್ತಿದ್ದಳು. ಅವನ ಸೊಳ್ಳೆಯ ಪರದೆಯನ್ನು ಮೇಲೇರಿಸಿ ಮುಸುಕು ತೆಗೆಯುತ್ತಿದ್ದಳು. ಅಷ್ಟಕ್ಕೂ ಏಳದಿದ್ದರೆ ಮುಖಕ್ಕೆ ನೀರು ಚಿಮುಕಿಸುತ್ತಿದ್ದಳು. ಕರುಣನು ಗಾಬರಿಯಿಂದ

ಎದ್ದು ಕುಳಿತು ಕಣ್ಣುಜ್ಜುತ್ತ ಕಲ್ಯಾಣಿಯನ್ನು ನೋಡಿ—

"ಇದೇನು ಮಾಡಿದಿರಿ. ಹಾಸಿಗೆಯೆಲ್ಲ ತೊಯಿದುಬಿಟ್ಟಿತು."

"ನಾನು ಒಣಗಿಸಿ ಕೊಡುವೆ. ನೋಡು ಹೊತ್ತೇರಿದೆ. ಅವರು ಸಾಲೆಗೆ ಹೋದರು ಏಳು" ಎಂದು ಉಳಿದ ಮುಸುಕು ಎಳೆದುಬಿಡುತ್ತಿದ್ದಳು.

"ಬಾಗಿಲನ್ನು ಯಾರು ತೆರೆದರು ?"

"ದೆವ್ವ !"

"ನಮ್ಮ ಮನೆಯಲ್ಲಿ ದೇವ್ವುಗಳಿಲ್ಲ."

"ಇವೆ."

"ನೀವು ಇನ್ನಷ್ಟು ಕೂಗಿದ್ದರೆ ಏಳುತ್ತಿದ್ದೆ."

"ಇನ್ನಷ್ಟು ಕೂಗಿದ್ದರೆ ನೆರೆಮನೆಯವರು ಓಡಿಬರುತ್ತಿದ್ದರು."

"ಹಾಗಾದರೆ ನಾನು ಕಲಿಯುಗದ ಕುಂಭಕರ್ಣನೇ ಸರಿ !"

ಮಾತು ಕಲ್ಯಾಣಿಯ ಮೇಲೆ ತಿರುಗಿದಂತಾಯಿತು. ಕರುಣನನ್ನು ಕುಂಭಕರ್ಣನೆಂದು ಸಂಬೋಧಿಸುವುದು ಸರಿಬರಲಿಲ್ಲ. ಆದರೆ ಮಾತಿನ ಓಟದಲ್ಲಿ ಕರುಣನು ಅದನ್ನು ಹೊತ್ತುಕೊಂಡು ನಿಂತನು.

"ನನಗೂ ಬೇರಾವ ಚಿಂತೆಯಿರದಿದ್ದರೆ ಈವರೆಗೂ ಮಲಗುತ್ತಿದ್ದೆ. ಆದರೆ ಕೆಲಸದ ಕೂಗು ನನ್ನನ್ನು ಎಬ್ಬಿಸುವುದು. ನೀನು ಸುಖಿಯೆಂದು ಹೇಳಿದರೆ ಕುಂಭಕರ್ಣನ ಹೆಸರನ್ನು ಹಚ್ಚಿಕೊಳ್ಳುವೆ. ನನ್ನ ಮಾತಿನಲ್ಲಿ ಆ ಅರ್ಥವಿರಲಿಲ್ಲ" ಎಂದು ಸುತ್ತಿ ಸುತ್ತಿ ನುಡಿಯುತ್ತಿದ್ದಳು.

"ಹೋಗಲಿ ಬಿಡಿರಿ. ಏನು ಅವಸರ."

"ಅವಸರವೇನು ! ಹೊತ್ತೇರಿದೆ. ಚಹ ಆರುವುದು ಏಳು."

"ಆಗಲಿ !" ಎಂದು ಏಳುತ್ತಿದ್ದನು.

ಕಲ್ಯಾಣಿಯು ಮುಖವನ್ನು ತೊಳೆಯಲು ನೀರು ಕೊಡುತ್ತಿದ್ದಳು. ಶೌಚಕ್ಕೆ ತಣ್ಣೀರು ಕೊಡುತ್ತಿದ್ದಳು. ಬರುವಷ್ಟರಲ್ಲಿ ಉಗುರುಬೆಚ್ಚನ್ನ ನೀರು ತೋಡಿಡುತ್ತಿದ್ದಳು. ತನ್ನ ಮೈಗೆ ಹಚ್ಚಿಕೊಳ್ಳುವ ಸಬಕಾರವನ್ನು ಇಡುತ್ತಿದ್ದಳು. ಧೋತರಕ್ಕೆ ನೀಲಿಗೆಯನ್ನು ಹಾಕಿ ಮಣೆಯ ಮೇಲಿಡುತ್ತಿದ್ದಳು. ಮುಗಿಯುವಷ್ಟರಲ್ಲಿ ಮಣೆಯನ್ನು ಹಾಕಿ ಎರಡು ತಟ್ಟೆಗಳಲ್ಲಿ ಉಂಡಿ, ಅವಲಕ್ಕಿಯನ್ನು ಸೇರಿಸಿ ಚಹ ತುಂಬಿಟ್ಟುಕೊಂಡು ಕುಳಿತಿರುತ್ತಿದ್ದಳು.

ಕರುಣನು ಮೈ ಒರಸಿಕೊಂಡು ಬಂದು ಮಣೆಯ ಮೇಲೆ ಕುಳಿತಿರುತ್ತಿದ್ದನು. ಕಲ್ಯಾಣಿ ಇನ್ನೊಂದು ಮಣೆಯ ಮೇಲೆ ಆವನೆದುರು ಒಂದಿಷ್ಟು ದೂರದಲ್ಲಿ ಕುಳಿತು "ಇನ್ನು ಬಾದ್ಯಪೇಯವಾಗಲಿ!" ಎಂದು ಆಜ್ಞಾಪಿಸುತ್ತಿದ್ದಳು.

ಕರುಣನು ನಗುತ್ತ ಸ್ವೀಕರಿಸುತ್ತಿದ್ದನು.

ನಡುನಡುವೆ ಮಾತುಗಳೂ ಸಾಗುತ್ತಿದ್ದುವು.

ಇನ್ನೊಮ್ಮೆ ಇಂಥದೇ ಸಮಯದಲ್ಲಿ "ಸಂಧ್ಯಾಹ್ನವನ್ನು ಬಿಟ್ಟು ಎಷ್ಟು ವರುಷವಾಯಿತು?" ಎಂದು ಕೇಳಿದಳು.

"ನಿಶ್ಚಿತವಾಗಿ ನೆನಪಿಲ್ಲ."

"ಹಾಗಾದರೆ ಮರೆತಿರಬೇಕು?"

"ಕೇಶವ, ನಾರಾಯಣ ಇಷ್ಟು ಉಳಿದಿವೆ."

"ಮಾಧವ?"

"ಅದು ನೆನಪಿದೆ."

"ಗೋವಿಂದ?"

"ಗೋವಿಂದ...." ಎಂದು ಎಳೆದು ನುಡಿದನು.

ಇಬ್ಬರೂ ನಗಹತ್ತಿದರು.

ಚಹ ಕುಡಿಯುವುದು ಮುಗಿಯಿತು.

"ಇನ್ನು ಮನೆಗೆ ಯಾವಾಗ್ಗೆ ಬರುವುದು?" ಎಂದು ಕೇಳಿದಳು.

"ದಿನದಷ್ಟು ವೇಳೆಗೆ" ಕೈ ಒರಸುತ್ತ ನುಡಿದನು.

"ಊಟದ ಸಮಯದ ಮೊದಲು ಬಾ. ನಿನಗಾಗಿ ಎಲ್ಲರು ಎಷ್ಟು ದಾರಿಯನ್ನು ನೋಡಬೇಕು!"

"ಆಗಬಹುದು."

"ಕೇವಲ ಆಗಬಹುದಲ್ಲ!"

"ಒಳ್ಳೇದು ಅಪ್ಪಣೆ" ಎಂದು ಎದ್ದು ನಿಂತನು.

ಕರುಣನನ್ನು ಅಪಾದ ಮಸ್ತಕದವರೆಗೆ ನೋಡಿ ಕಲ್ಯಾಣಿಯು "ಮೈ ಮೇಲಿನ ಅಂಗಿಯು ಹೊಲಸಾದುದು ತಿಳಿಯುವುದಿಲ್ಲವೇ? ಅದನ್ನು ಕಳೆದು ಹೋಗು. ಒಗೆದ ಅಂಗಿಯನ್ನು ಹಾಸಿಗೆಯ ಮೇಲೆ ಇಟ್ಟಿರುವೆ" ಎಂದಳು.

"ಒಳ್ಳೇದು" ಎಂದು ಕೋಣೆಯವರೆಗೆ ಹೋಗಿ ಒಗೆದ ಅಂಗಿಯನ್ನು

ತೊಟ್ಟುಕೊಂಡು ತಿರುಗಿ ಅಡಿಗೆಯ ಮನೆಗೆ ಬಂದು " ನಾಳೆ ಕೂದಲು ಕತ್ತರಿಸಿ ಕೊಳ್ಳಬಹುದೇ ? " ಎಂದು ಗುಂಡಿಗಳನ್ನು ತೊಡುತ್ತ ಕೇಳಿದನು.

" ಏಕೆ ? " ಕುತುಹಲದಿಂದ ಕೇಳಿದಳು.

" ಏಕಾದಶಿ, ದ್ವಾದಶಿ ಏನಾದರು ? "

" ಏನಿಲ್ಲ."

" ಆಗಲಿ. ನಾಳೆ ಕತ್ತರಿಸಿಕೊಳ್ಳುವೆ " ಕೋಣೆಗೆ ನಡೆದನು.

ಈ ಮಾತನ್ನೇಕೆ ಕೇಳಿದನೆಂಬುದು ಕಲ್ಯಾಣಿಗೆ ತಿಳಿಯುಲಿಲ್ಲ. ವಿಚಿತ್ರ ವೆನಿಸಿತು. ಎಂದೂ ಕೇಳದವ ಇಂದು ಹೀಗೇಕೆ ಕೇಳಿದನು ? ಎಷ್ಟು ವಿಚಾರಿಸಿದರೂ ಅರ್ಥವಾಗಲಿಲ್ಲ. ಮಾನಸಿಕ ಸಂಶಯ, ಕುತುಹಲ ಸುಮ್ಮ ನಿರದೆ " ಕರುಣ ! " ಎಂದು ಕೂಗಿ ಕರೆದಳು.

ತಿರುಗಿ ಬಂದು " ಏನು ? " ಎಂದು ಕೇಳಿದನು.

" ಕೂದಲು ಕತ್ತರಿಸಿಕೊಳ್ಳುವದನ್ನು ಏಕೆ ಕೇಳಿದೆ ? ಹಾಗೆ ಎಂದೂ ಕೇಳಿಲ್ಲ."

" ನನ್ನ ಅಂಗಿ ಹೊಲಸಾದುದಕ್ಕೆ ನಿಮ್ಮಿಂದ ಎಚ್ಚರಿಸಿಕೊಳ್ಳಬೇಕಾ ಯಿತು. ನಾಳೆ ತಲೆಯ ಕೂದಲು ಉದ್ದವಾಗಿ, ಸೀಳುಕಾಲಿನ ಹಳಲು ಹಾಕುವೆ ಬಾ ! ಎಂದು ಎಳೆದು ತಂದು ಕೂಡಿಸಿಕೊಂಡರೆ ನನ್ನ ಗತಿಯು ಏನಾದೀತು ! ಎಂದು ಕೇಳಿದೆ."

" ಏ ಉಚ್ಚಾ ! "

ಇಬ್ಬರೂ ಬಿದ್ದು ಬಿದ್ದು ನಕ್ಕರು.

ಕರುಣನು ನಗುತ್ತಲೇ ಹೊರಗೆ ಹೋದನು. ಕಲ್ಯಾಣಿಗೆ ನಕ್ಕು ನಕ್ಕು ಹೊಟ್ಟೆ ಹುಣ್ಣಾಯಿತು. ಎಂಥ ಸುಂದರವಾದ ಮಾತು ! ಎಂಥ ಕೋಮಲ ವಾದ ಅಣಕವಾಕು ! ಈ ಮಾತುಗಳಿಂದಲೇ ಹಸಿವೆ ನೀರಡಿಕೆ, ಕಷ್ಟಕಾರ್ಪಣ್ಯ ಹೋಗಬೇಕು ! ಎಂದೆನ್ನುತ್ತ ಅವನು ಹೋದ ಕಡೆಗೇ ನೋಡುತ್ತ ನಿಂತಳು.

ಕರುಣನು ಬಟ್ಟೆ ತೊಟ್ಟುಕೊಂಡು ತಲೆಬಾಗಿಲಿಗೆ ನಿಂತು "ಹೋಗುವೆ" ಎಂದು ಕೇಳಿದನು.

" ಹ ! " ಕಲ್ಯಾಣಿ ಮುಗುಳುನಗೆಯಿಂದ ಅಪ್ಪಣೆಯಿತ್ತಳು.

ತಾಯಿ—ಮಗನ ಇಂಥ ಹರಟೆಗಳು ನಿತ್ಯ ನಡೆಯುತ್ತಿದ್ದುವು. ಅವುಗಳಿಗೆ

ತುದಿ ಮೊದಲಿರಲಿಲ್ಲ. ಎಲ್ಲಿಂದಲೋ ಹೊರಟು, ಎಲ್ಲಿಗೋ ಬಂದುಬಿಡುತ್ತಿದ್ದುವು. ಮಾತು ಮಾತಿಗೊಮ್ಮೆ ಅವರ ಅಣಕ ನುಡಿ ನಗೆಯನ್ನು ತರುತ್ತಿದ್ದಿತು ಅವರ ನಗೆ, ನಗೆಮಾತು ಕಿವಿಗೆ ಬಿದ್ದರೆ ಗೌರಮ್ಮ ಸೀತಮ್ಮರೂ ಪಾಲುಗಾರರಾಗುತ್ತಿದ್ದರು. ಕಲ್ಯಾಣಿಯು ಮನೆಯನ್ನು ಆನಂದದಿಂದ ತುಂಬಿದಳು ಎಂಬ ಭಾವನೆ ಆ ಇಬ್ಬರಲ್ಲಿ ದೃಢವಾಯಿತು. ಕರುಣನು ಆ ಆನಂದ ವೃಕ್ಷದ ಬೇರೆಂದೇ ತಿಳಿದರು. ಏನೇ ಆಗಲಿ! ಸವತಿಯ ಮಗನಾದರೂ ತನ್ನ ಹೊಟ್ಟೆಯ ಮಗನಂತೆ ನೋಡುವಳು. ಆರಯಿಕೆ ಮಾಡುವಳು. ಪ್ರೀತಿಸುವಳು. ಅವನು ಬಾಳುವಂತೆ ಮಾಡುವಳು. ತಾನೂ ಬದುಕುವಳು. ಇದು ಒಳ್ಳೆಯದಲ್ಲವೇ ? ಸ್ತ್ರೀಗೆ ಜೀವನಧರ್ಮಕ್ಕೆ ಒಂದು ಆಧಾರ, ಒಂದಿಷ್ಟು ನೀರು, ಒಂದಿಷ್ಟು ಮಣ್ಣು ಸಿಕ್ಕರೆ ಹೇಗೋ ಬದುಕುವಳು. ಕಲ್ಯಾಣಿಗೆ ಕರುಣನು ಸಿಕ್ಕಿರುವನು. ಈ ಜನ್ಮದಲ್ಲಿ ಮಲಮಗನಾದರೂ ಹೋದ ಜನ್ಮದಲ್ಲಿ ನಿಜವಾದ ಮಗನಿರಬೇಕು. ಅಂತಲೇ ಇಷ್ಟು ತುಸುದಿನಗಳಲ್ಲಿ ಇಂಥ ಸಲಿಗೆ! ಇಷ್ಟು ಮಮತೆ! ಇದೆಲ್ಲ ದೇವರಾಟ! ಎಂದು ಸಂತಸ ಹೊಂದುತ್ತಿದ್ದರು.

ಮರುದಿನ ಕರುಣನು ಮಧ್ಯಾಹ್ನದ ಊಟಕ್ಕೆ ಬೇಗನೆ ಬರಲಿಲ್ಲ. ಗುರುಗಳು ಊಟ ಮಾಡಿಕೊಂಡು ಸಾಲೆಗೆ ಹೋಗಿದ್ದರು. ಗೌರಮ್ಮ ಅಡಿಗೆಯನ್ನು ತೀರಿಸಿ, ಕೈ ತೊಳೆದುಕೊಂಡು ಹಾಯಾಗಿ ದೇವರ ಮುಂದೆ ಕುಳಿತಿದ್ದಳು. ಸೀತಮ್ಮನು ಹತ್ತಿರವೇ ಕುಳಿತು " ಊರಿಗೆ ಎಂದು ಹೋಗುವುದು ?" ಎಂಬ ಮಾತಿನ ಚರ್ಚೆಯನ್ನು ನಡಿಸಿದ್ದಳು. ಕಲ್ಯಾಣಿಯು ಒಳಗಿನಿಂದ ಹೊರಗೆ, ಹೊರಗಿನಿಂದ ಒಳಗೆ ಮೂರು–ನಾಲ್ಕು ಸಾರೆ ಎಡತಾಕಿದಳು. ಆದರೆ ಊಟಕ್ಕೆ ಎಲೆಯನ್ನೇ ಹಾಕಲಿಲ್ಲ. ಮಧ್ಯಾಹ್ನವು ಸರಿದುಹೋಗಿದ್ದಿತು. ಮಗಳನ್ನು ಗೌರಮ್ಮ ಒಂದೆರಡು ಸಾರೆ ಒಳಗೆ ಕರೆದಳು. " ಎಲೆ ಹಾಕಮ್ಮ ಅಡಿಗೆ ಮುಗಿಯಿತು ! " ಎಂದಳು.

" ಹೊಗೆ ಕಡಿಮೆಯಾಗಲಿ, ಒಂದಿಷ್ಟು ನಿಲ್ಲು " ಎಂದು ಮೊದಲನೆಯ ಸಾರೆ ನುಡಿದಳು.

" ಮನೆಯ ಜಳವು ಕಡಿಮೆಯಾಗಲಿ ನಿಲ್ಲು " ಎರಡನೆಯ ಸಾರೆ ನುಡಿದಳು.

" ಕರುಣನು ಇನ್ನೂ ಬರಲಿಲ್ಲ " ಮೂರನೆಯ ಸಾರೆ ನುಡಿದಳು.

" ಈಗ ಬಂದಾನು ಎಲೆಯನ್ನಾದರು ಹಾಕು " ಗೌರಮ್ಮನೆಂದಳು.

" ಎಲೆ ಹಾಕಲು ಎಷ್ಟು ವೇಳೆ! ನಿಲ್ಲು " ಎಂದು ಮುಂದಿನ ಬಾಗಿಲಿಗೆ ಬಂದಳು.

ಒಬ್ಬ ಅಂಚೆಯಾಳು ಕರುಣನ ಹೆಸರಿನಿಂದ ಒಂದು ಪಾಕೀಟು ಚೆಲ್ಲಿ ಹೋಗಿದ್ದನು. ಗುರುಗಳು ಅದರ ಮೇಲಿನ ವಿಳಾಸವನ್ನು ಓದಿ, ತಮ್ಮದಲ್ಲ ವೆಂದು ಬಾಗಿಲ ಹತ್ತಿರದ ಮಾಡದಲ್ಲಿ ಇಟ್ಟಿದ್ದರು. ಕಲ್ಯಾಣಿಯ ಕಣ್ಣಿಗೆ ಆಕಸ್ಮಾತ್ ಬಿದ್ದಿತು. ಮೇಲಿನ ವಿಳಾಸವನ್ನು ಪ್ರಯಾಸದಿಂದ ಓದಿಗೊಂಡಳು. ಅದು ಕರುಣನದೆಂದು ನಿರ್ಧರಿಸಿದಳು. ತೆಗೆದುಕೊಂಡು ಒಳಗೆ ಬಂದು—

" ಮಾಡದಲ್ಲಿ ಪತ್ರವನ್ನು ನೀನಿಟ್ಟಿದ್ದೆಯಾ ? " ತಾಯಿಯನ್ನು ಕೇಳಿದಳು.

ತಾಯಿಯು ಇಲ್ಲೆಂದು ನುಡಿದಳು.

ಸೀತಮ್ಮನನ್ನು ಕೇಳಿದಳು.

ಅವಳೂ ಇಲ್ಲೆಂದು ಹೇಳಿದಳು. ಮುಂದೆ ಹೆಚ್ಚು ವಿಚಾರಿಸಲಿಲ್ಲ. ಪತ್ರದೊಳಗಿನ ಸಂಗತಿಯನ್ನು ತಿಳಿಯಬೇಕೆಂದು ಲವಲವಿಕೆಯಾಯಿತು. ಕೂಡಲೆ ಪಾಕೀಟು ಹರಿದು ಪತ್ರವನ್ನು ತೆಗೆದಳು. ಆದರೆ ಅದರ ಬರೆಹವೆಲ್ಲ ಹಿಂದಿಯಲ್ಲಿದ್ದಿತು. ತಿಳಿಯಲಿಲ್ಲ. ಪುನಃ ಮಡಿಚಿ ಪಾಕೀಟಿನಲ್ಲಿ ಸೇರಿಸಿದಳು. ತನ್ನ ಕುಂಕುಮದ ಕರಂಡಕದಲ್ಲಿ ಇಟ್ಟಳು.

ಅಡಿಗೆಯ ಮನೆಯಲ್ಲಿ ತಾಯಿ–ಸೀತಮ್ಮರು ಹಸಿವೆಯಿಂದ ಕಣ್ಣು ಬಿಡುತ್ತ ಕುಳಿತಿದ್ದರು. ಎಲೆಯನ್ನು ಹಾಕುವಷ್ಟರಲ್ಲಿ ಕರುಣನು ಬರಬಹುದು. ಇಲ್ಲದಿದ್ದರೆ ಅವರಾದರು ಊಟ ಮಾಡಲಿ! ಎಂಬ ಭಾವನೆಯಿಂದ ತಾಯಿ ಮತ್ತು ಸೀತಮ್ಮ ಇವರಿಗೆ ಎರಡು ಎಲೆಗಳನ್ನು ತನಗೆ ಮತ್ತು ಕರುಣನಿಗೆ ಎರಡು ತಾಟುಗಳನ್ನು ಹಾಕಿದಳು. ತಂಬಿಗೆ, ತಾಲಿ, ಬಟ್ಟಲು, ಉಪ್ಪು, ನೀರು ಅಣಿಗೊಳಿಸಿದಳು. ಕರುಣನಿಗೆ ಒಂದು ಮಣೆ, ಅದರ ಮೇಲೆ ಒಂದು ಪಂಚೆಯನ್ನು ಇಟ್ಟಳು. ತಲೆಬಾಗಿಲಿನಿಂದ ಒಂದು ನೆರಳು ಕಂಡಿತು. ಧಾವಿಸಿ ಹೊರಗೆ ಬಂದು ನೋಡುವಷ್ಟರಲ್ಲಿ ಕರುಣನು ಕಂಡನು. ಮುಖವು ಬೆವರು ಗಟ್ಟಿ ಕೆಂಪಾಗಿದ್ದಿತು.

" ಏನಪ್ಪಾ, ಮುಂಜಾನೆಯ ಊಟಕ್ಕೆ ಇಷ್ಟು ಹೊತ್ತು ಮಾಡಿ ಬರು

ವುದೇ? ನಿನ್ನ ಸಲುವಾಗಿ ಎಷ್ಟು ಜನರು ಉಪವಾಸ ಕೂಡಬೇಕು!" ಎಂದು ಬಿರುಸಾಗಿ ನುಡಿದಳು.

ಕರುಣನು ಬಟ್ಟೆಗಳನ್ನು ಕಳೆದು, ಕೈಕಾಲು ತೊಳೆದುಕೊಂಡು ಮಣೆಯ ಮೇಲೆ ಬಂದು ಕುಳಿತು "ಹ! ಇನ್ನು ಬಡಿಸಿರಿ" ಎಂದು ಗೌರಮ್ಮನ ಕಡೆಗೆ ಮುಖಮಾಡಿ ನುಡಿದನು.

ಕಲ್ಯಾಣಿಯು ಸುಮ್ಮನೆ ನಿಂತಿದ್ದಳು. ಅವಳ ಮುಖದ ಮೇಲಿನ ಹುರಿಗಟ್ಟಿದ ಸ್ನಾಯುಗಳು ಇನ್ನೂ ಸಡಿಲಾಗಿರಲಿಲ್ಲ. ಅದನ್ನು ಕರುಣನು ನೋಡಿಕೊಂಡು "ತಾಯೀ ನಾನು ಬೇಕೆಂತಲೇ ತಡಮಾಡಲಿಲ್ಲ. ಒಂದು ಅವಶ್ಯದ ಕೆಲಸದ ಸಲುವಾಗಿ ನಿಂತಿದ್ದೆ. ಅದನ್ನು ನಿಮಗೆ ತಿಳಿಸಿ ಹೋಗಲು ವೇಳೆಯಿರಲಿಲ್ಲ. ತಪ್ಪಾಗಿದ್ದರೆ ಕ್ಷಮಿಸಬೇಕು" ಎಂದು ನುಡಿದನು.

"ನೀನು ಕೆಲಸಕ್ಕೆ ಹೋಗಲು ನನ್ನ ಆಕ್ಷೇಪವಿಲ್ಲ. ತಿಳಿಸಿ ಹೋಗಿದ್ದರೆ ಎಲ್ಲರಿಗೂ ಒಳ್ಳೆಯದಲ್ಲವೇ?" ಕಲ್ಯಾಣಿ ಎಂದಳು.

"ತಿಳಿಸಿ ಹೋಗಲು ವೇಳೆಯಿರಲಿಲ್ಲ."

"ಅದಾವ ಕೆಲಸ?"

ಕರುಣನು ಹೇಳಲಿಕ್ಕೆ ಅನುಮಾದಿಸಹತ್ತಿದನು.

"ನಾನು ಕೇಳದಂತಹದಿದ್ದರೆ ಹೇಳಬೇಡ, ಅನ್ನ ಆರುತ್ತದೆ ಇನ್ನು ಉಣ್ಣು."

"ಇಂದು ನನ್ನ ಗೆಳೆಯನ ಪರೀಕ್ಷೆಯ ಪರಿಣಾಮವಿದ್ದಿತು. ಬರಲು ತಡವಾಯಿತು. ಅವನ ಆನಂದದಲ್ಲಿ ನಾನೂ ಪಾಲುಗಾರನಾಗಿ ಒಂದಿಷ್ಟು ತಿರುಗಾಡಿದೆ. ಸಂತೋಷವನ್ನು ಪಡೆದ ದೇಹಕ್ಕೆ ಸಿಮ್ಮಿಂದ ಎರಡು ಬೈಗಳನ್ನು ತಿಂದರೂ ಮೂಡವು ಎಂಬ ವಿಶ್ವಾಸದಿಂದ ತಡಮಾಡಿದೆ ಇಷ್ಟೇ!" ಊಟವನ್ನು ಸಾಗಿಸುತ್ತ ನುಡಿದನು.

"ತಾಯೀ ಅವನಿಗೆ ಇನ್ನೊಂದು ರೊಟ್ಟಿಯನ್ನು ಹಾಕು" ಎಂದು ಕಲ್ಯಾಣಿ ನುಡಿದಳು.

"ನನಗೆ ಬೇಡ."

ರೊಟ್ಟಿಯನ್ನು ಕೈಯಲ್ಲಿ ಹಿಡಿದುಕೊಂಡು ತಾಯಿ ನಿಂತಳು.

"ಹಾಕಮ್ಮ.... ಹಾಕು."

" ನನಗೆ ಬೇಡ. ಹೊಟ್ಟೆ ತುಂಬಿದೆ."

" ತುಂಬಿದೆಯೋ ಇಲ್ಲವೋ ನನಗೆ ಗೊತ್ತು. ಹಾಕು."

" ಅದನ್ನೆಂದು ಅಳೆದಿರುವಿರಿ."

" ಅಳೆಯಲು ದಾರ, ಅಳತೆಯ ಕಟ್ಟಿಗೆ ಬೇಕಿಲ್ಲ. ಈ ದೇಹದ ಉದ್ದ, ಎತ್ತರ, ಎದೆಯ ಅಗಲ, ರಟ್ಟೆಯ ದಪ್ಪ ಇವುಗಳಿಂದ ನಿರ್ಧರಿಸಬಲ್ಲೆ. ಹಾಕಮ್ಮ ಹಾಕು " ಎಂದಳು.

ತಾಯಿಯು ರೊಟ್ಟಿಯನ್ನು ಹಾಕಿದಳು.

ಕರುಣನು ಆಶ್ಚರ್ಯದಿಂದ ರೊಟ್ಟಿಯನ್ನು ನೋಡುತ್ತ ಕುಳಿತನು.

" ಏನು ವಿಚಾರಿಸುತ್ತಿರುವೆ ? " ಕಲ್ಯಾಣಿ ಕೇಳಿದಳು.

" ಇದರ ಮೇಲೆ ನನ್ನ ಹೆಸರು ಬರೆದಿದೆಯೇ ಎಂದು ನೋಡಿಕೊಳ್ಳುತ್ತಿರುವೆ ? " ಎಂದನು.

" ಅದೇಕೆ ? " ಕಲ್ಯಾಣಿ ಕುತುಹಲದಿಂದ ಪ್ರಶ್ನಿಸಿದಳು.

" ಅದರ ಮೇಲೆ ನನ್ನ ಹೆಸರಿದ್ದರೆ ಅದು ನನ್ನ ಹೊಟ್ಟೆಯನ್ನು ಸೇರುವುದು. ಇಲ್ಲದಿದ್ದರೆ ಇಲ್ಲ. ದೇವರು ಅವರವರ ಪಾಲಿನದನ್ನು ಆ ಆ ವಸ್ತುಗಳ ಮೇಲೆ ಹೆಸರು ಬರೆದು ಭೂಮಿಗೆ ಚೆಲ್ಲಿರುವನಂತೆ ! ನಾನು ಈಗ ಉಂಡ ಅನ್ನದ ಪ್ರತಿಯೊಂದು ಅಕ್ಕಿಯ ಕಾಳಿನ ಮೇಲೆ ನನ್ನ ಹೆಸರಿದ್ದುದಕ್ಕೆ ನನ್ನ ತಾಟಿನಲ್ಲಿ ಬಿದ್ದುವು. ನಾನು ಉಂಡೆನು. ದಂಡೆಯಲ್ಲಿ ಬಿದ್ದ ಅಕ್ಕಿಯ ಕಾಳಿನ ಮೇಲೆ ನನ್ನ ಹೆಸರು ಇರಲಿಲ್ಲ. ನನ್ನ ಕೈತಪ್ಪಿ, ಹೊಟ್ಟೆಯಲ್ಲಿ ಹೋಗದೆ ಕೆಳಗೆ ಬಿದ್ದಿವೆ. ಅವು ಇನ್ನಾವದೋ ಪ್ರಾಣಿಯವು ಇರಬೇಕು. ಈ ರೊಟ್ಟಿಯ ಮೇಲೆ ನನ್ನ ಹೆಸರಿಲ್ಲ ನಮ್ಮ ಮನೆಯ ಆಕಳಕರು ನಂದಿನಿಯ ಹೆಸರಿದ್ದಂತೆ ಕಾಣುವುದು. ನಾನು ಹೇಗೆ ತಿನ್ನಲಿ ? ತಿಂದರೂ ಹೊಟ್ಟೆಯೊಳಗೆ ಹೋದೀತೇ? ಅನ್ನ ಹಾಕಿರಿ " ಎಂದು ಗೌರಮ್ಮನಿಗೆ ಹೇಳಿದನು.

ಕಲ್ಯಾಣಿ ಅವನ ಮಾತಿಗೆ ಬೆಕ್ಕಸಬೆರಗಾದಳು. ಮಗನು ತಿನ್ನಲಿ ! ಎಂಬ ಲವಲಿಕೆಯಿಂದ ಹಾಕಿಸಿದ್ದಳು. ಆದರೆ ಅವನು " ಹೊಟ್ಟೆ ತುಂಬಿದೆ ಹಿಡಿಸಲಾರದು " ಎಂಬ ಮಾತನ್ನೇ ಒಂದು ಸುಂದರ ದೃಷ್ಟಾಂತದಿಂದ ಹೇಳಿ ಮುಗ್ಧಳನ್ನಾಗಿ ಮಾಡಿದನು. ಎವೆಯಾಡಿಸದೆ ಕರುಣನನ್ನು ನೋಡುತ್ತ ನಿಂತಳು. ಕರುಣನೂ ಕಲ್ಯಾಣಿಯನ್ನು ನೋಡಿದನು. ಮಗನ ಹೊಟ್ಟೆ

ತುಂಬಿದೆ ಎಂಬ ತೃಪ್ತಿಯ ಭಾವನೆಯ ಕಿರಣವೊಂದು ಕಲ್ಯಾಣಿಯನ್ನು ತಟ್ಟಿತು.

"ಹೊಟ್ಟೆ ತುಂಬಿದ್ದರೆ ಬಿಡು, ಚೆಲ್ಲುವೆಯೆಂದು ದುಃಖವಿಲ್ಲ. ಹೊಟ್ಟೆ ತುಂಬಿದೆ ಎಂಬ ಮಾತೇ ನನಗೆ ಸಂತೋಷ. ಆದರಿಂದ ನನ್ನ ಹೊಟ್ಟೆಯೂ ತುಂಬಿದಂತೆ. ತಾಯೀ ಅನ್ನ ಹಾಕು" ಎಂದಳು.

ಗೌರಮ್ಮ ಅನ್ನವನ್ನು ಬಡಿಸಿದಳು. ಕೈತೊಳೆದುಕೊಂಡು ಎಲ್ಲರ ಜೊತೆಗೆ ಮಜ್ಜಿಗೆಯನ್ನು ಹಾಕಹೋದಳು.

"ತಾಯೀ ಕರುಣನಿಗಾಗಿ ಒಂದು ಬಟ್ಟಲಲ್ಲಿ ಹೆಪ್ಪು ಹಾಕಿ ಇಟ್ಟಿರುವೆ. ಅದನ್ನು ಹಾಕು. ಅವನಿಗೆ ಮಜ್ಜಿಗೆಗಿಂತ ಮೊಸರಿನ ಮೇಲೆ ಪ್ರೀತಿ ಹೆಚ್ಚು. ನಮಗೆ ಮಜ್ಜಿಗೆ ಇರಲಿ" ಕಲ್ಯಾಣಿ ನುಡಿದಳು.

"ಮಜ್ಜಿಗೆಯನ್ನು ತಿನ್ನುವೆ ಹಾಕಿರಿ."

"ಮಜ್ಜಿಗೆಯನ್ನೂ ಕೊಡುವೆ. ಊಟವಾದ ಮೇಲೆ ಮಜ್ಜಿಗೆಯನ್ನು ಕುಡಿಯಲು ಕೊಡುವೆ. ಮಜ್ಜಿಗೆಗೆ ಕೊರತೆ ಇಲ್ಲ. ಅವನಿಗೆ ಮೊಸರು ಹಾಕು."

ತಾಯಿಯು ಜಾಳಿಗೆಯ ಕಪಾಟನಿಂದ ಮೊಸರಿನ ಬಟ್ಟಲವನ್ನು ತಂದು ಅವನ ಮುಂದಿಟ್ಟಳು.

ಕಲ್ಯಾಣಿ ಮತ್ತು ಕರುಣರ ಊಟವಾಯಿತು. ತಾಯಿ, ಸೀತಮ್ಮರು ತಾವೂ ಬಡಿಸಿಕೊಂಡು ಕುಳಿತರು.

ಕರುಣನು ಕೈತೊಳೆದುಕೊಂಡು ಕೋಣೆಗೆ ಹೋದನು. ಕಲ್ಯಾಣಿಯು ಅಡಿಕೆ, ಏಲಕ್ಕಿ, ಲವಂಗದ ತಟ್ಟೆಯನ್ನು ತೆಗೆದುಕೊಂಡು ಹೋಗಿ ಅವನ ಕೋಣೆಯಲ್ಲಿಟ್ಟು ತಾಯಿಯ ಎದುರಿಗೆ ಬಂದು ಕುಳಿತಳು.

"ಏಕೆ ಕುಳಿತೆ ?" ತಾಯಿ ಕಲ್ಯಾಣಿಯನ್ನು ಕೇಳಿದಳು.

"ಏನಾದರು ಬೇಕಾಗಲಿ!" ಎಂದು ಕುಳಿತಿರುವೆ.

"ಬೇಕಾದರೆ ಕರೆಯುತ್ತೇನೆ. ಒಂದಿಷ್ಟು ವಿಶ್ರಮಿಸು" ಎಂದು ಊಟ ಮಾಡಹತ್ತಿದಳು.

ಕಲ್ಯಾಣಿ ತುಸು ಹೊತ್ತು ಕುಳಿತು ಕರುಣನ ಕೋಣೆಗೆ ಬಂದಳು. ಅವನು ಅಡಿಕೆಯನ್ನು ಬಾಯಿಗೆ ಹಾಕಿಕೊಂಡು ಒಂದಿಷ್ಟು ಅಡ್ಡಾಗಿದ್ದನು.

ತಟ್ಟೆಯಲ್ಲಿಯ ಒಂದೆರಡು ಅಡಿಕೆಯ ಹೋಳುಗಳನ್ನು ಬಾಯಿಗೆ ಹಾಕಿಕೊಂಡು ಸುತ್ತಲೆ ನೋಡಿದಳು. ಕೋಣೆಯು ಅಸ್ತವ್ಯಸ್ತವಾಗಿ ಕಂಡಿತು.

"ನಾನು ಎಷ್ಟು ವ್ಯವಸ್ಥಿತವಾಗಿ ಇಟ್ಟಿರುವೆ. ನೀನು ಎಳ್ಳಷ್ಟೂ ಕಾಯ್ದುಕೊಳ್ಳುವುದಿಲ್ಲ. ನನ್ನ ಇದ್ದ ವೇಳೆಯೆಲ್ಲ ನಿನ್ನ ಕೋಣೆಯ ವ್ಯವಸ್ಥೆಯಲ್ಲಿಯೇ ಕಳೆದುಹೋಗುವುದು. ಮನೆಯೆಂದ ಮೇಲೆ ನನಗೆ ಬೇರೆ ಕೆಲಸಗಳು ಇರುವುವು" ಎಂದು ಅವನು ಕೆಳಗೆ-ಮೇಲೆ ಇಟ್ಟ ಪುಸ್ತಕಗಳನ್ನು ಓರಣದಿಂದ ಇಡಹತ್ತಿದಳು.

"ಓದುವ ಮುಂದೆ ಪುಸ್ತಕಗಳನ್ನು ಹೊರಗೆ ತೆಗೆಯಲೇ ಬೇಕಾಗುವುದು. ಒಂದು ಪುಸ್ತಕವನ್ನು ಒಂದು ಕ್ಷಣದಲ್ಲಿ ಓದಿ ಮುಗಿಸಲು ಆದೀತೇ? ಅದನ್ನು ಹಾಗೆಯೇ ತೆರೆದಿಟ್ಟು ಉಳಿದುದನ್ನು ಒಂದಿಷ್ಟು ನೋಡಬೇಕಾಗುವುದು. ಅದು ಅಸ್ತವ್ಯಸ್ತವೆಂದು ನುಡಿದರೆ ಏನು ಹೇಳುವುದು?"

"ಇದು ನೋಡು! ಟೇಬಲ್ಲಿಗೆ ಹಾಕಿದ ಈ ಅರಿವೆಯ ಮೇಲೆ ಎಂಥ ದೊಡ್ಡ ದೊಡ್ಡ ಕಲೆಗಳು! ಇವು ಒಗೆದರೆ ಹೋಗುವುವೇ?" ಎಂದು ತೋರಿಸುತ್ತ ನುಡಿದಳು.

"ಕೈತಪ್ಪಿ ಮಸಿಯ ಬಾಟಲಿಯೇ ಮೊನ್ನೆ ಉರುಳಿತು."

"ಹಳೆಯ ಚಪ್ಪಲಿಗಳನ್ನು ಸಂಗ್ರಹಿಸಿ ಏನು ಮಾಡಬೇಕೆಂದಿರುವೆ? ಇಷ್ಟೇಕೆ ನಿನ್ನ ಕೋಣೆಯಲ್ಲಿ?" ಎಂದು ಬರಿದಾದ ಚಪ್ಪಲಿಯ ಮಾಡದ ಕಡೆಗೆ ನೋಡುತ್ತ ಕೇಳಿದಳು.

"ಕೆಲವು ಹೊಲಿಸಬೇಕಾಗಿದೆ....ಆದರೆ ಈಗ ಒಂದೂ ಇಲ್ಲವಲ್ಲ!" ಆಶ್ಚರ್ಯದಿಂದ ನುಡಿದನು.

"ನಾನು ಮುಂಜಾನೆ ಕೊಟ್ಟುಬಿಟ್ಟೆ."

"ಅದರಲ್ಲಿ ಒಂದು ಜೋಡು ತೀರ ಹೊಸದಿದ್ದಿತು!"

"ಎಲ್ಲ ಉಂಗುಟುಗಳು ಹರಿದಿದ್ದುವು. ಬೆನ್ನು ಕಿತ್ತಿಹೋಗಿತ್ತು. ಕೊಟ್ಟುಬಿಟ್ಟೆ."

"ತಾಯೀ, ಅದು ತೀರ ಹೊಸದು. ಕೇವಲ ಹೊಲಿಗೆ ಬಿಚ್ಚಿದ್ದುವು. ನಾಲ್ಕಾರು ಬಿಲ್ಲೆ ಕೊಟ್ಟಿದ್ದರೆ ಒಂದು ವರುಷ ಬರುತ್ತಿದ್ದುವು. ಅಪ್ಪ ಕೇಳಿದರೆ ಏನು ಹೇಳಲಿ?"

" ಹೊಸದೊಂದು ಜೋಡು ಕೊಂಡು ತಾ. ನಾನು ಹಣ ಕೊಡುವೆ."

" ಇದ್ದುದನ್ನು ಮಾರಿ ಹೊಸದನ್ನು ಕೊಂಡು ತರುವುದೇ ! "

" ನೀನು ನಾಳೆ ಗಳಿಸಹತ್ತಿದೆ ಎಂದರೆ ಇಂಥ ಲೆಕ್ಕಮಾಡು. ಈಗೇಕೆ ಅದರ ಚಿಂತೆ ! "

" ಗಳಿಸಿದರೂ ಆ ಹಣವನ್ನು ನಿಮ್ಮ ಕೈಯಲ್ಲಿಯೇ ತಂದಿಡುವುದು...."

ತಾಯಿ ಕರೆದಂತಾಯಿತು.

" ಒಂದಿಷ್ಟು ಮಲಗು. ಹೊರಗೆ ಬಿಸಿಲು ಹೆಚ್ಚಾಗಿದೆ " ಎಂದು ಅಡಿಕೆಯ ತಟ್ಟೆಯನ್ನು ಎತ್ತಿಕೊಂಡು, ಬಾಗಿಲನ್ನು ಮುಂದೆ ಮಾಡಿ ಒಳಗೆ ಹೋದಳು.

# ೧೨

ದುಃಖ-ದುಮ್ಮಾನಗಳಿಂದ ಹೊರಟು ಬಂದ ಕಲ್ಯಾಣಿ ಈಗ ಮನೆಯಲ್ಲಿ ಆನಂದ, ಸುಖ, ಸಂತೋಷಗಳ ದೀಪಾವಳಿಯನ್ನೇ ಮಾಡಹತ್ತಿದಳು. ಇಷ್ಟು ತುಸು ದಿನಗಳಲ್ಲಿ ಇಷ್ಟೊಂದು ಬಗೆಯಿಂದ ಮಗಳ ಮಾನಸಿಕ ಪ್ರವೃತ್ತಿಗಳು ಪಲ್ಲಟಿಸಬಹುದೆಂದು ಗೌರಮ್ಮ ತಿಳಿದಿರಲಿಲ್ಲ. ಅವಳ ಅಲ್ಪ ಬುದ್ಧಿಯು ತಿಳಿದುದು ಇಷ್ಟು—

ಮಗಳನ್ನು ಒಲ್ಲದವನಿಗೆ ಲಗ್ನ ಮಾಡಿರುವೆವು. ಒಂದಿಷ್ಟು ಕಾಲ ದುಃಖ ಪಡುವಳು. ಹಳಹಳಿಸುವಳು. ಜೀವಕ್ಕೆ ಕಷ್ಟ ಕೊಡುವಳು. ಕೊನೆಗೆ ಅಸಹಾಯಳಾಗಿ ನಿಲ್ಲುವಳು. ಜೀವವು ಬೇಸರೆನಿಸುವುದು. ಸಾವು ಬರಲೆಂದೂ ಆಶಿಸಬಹುದು. ಅಂಥ ಸಮಯವನ್ನು ಎಳೆದು ತಂದುಕೊಂಡರೆ ಹುಲ್ಲಿನ ಆಶ್ರಯದಿಂದ ಬದುಕಬೇಕೆಂದು ಬುದ್ಧಿ ಹುಟ್ಟುವುದು. ಮರಣ ಅಷ್ಟು ಭಯಾನಕವಾದುದು. ಆಗ ಗಂಡನು ಹುಲ್ಲು ಕಡ್ಡಿಯಾಗಿಯೇ ಬರುವನು. ಸುಖದ ಹಂದರವನ್ನು ನಿಲ್ಲಿಸುವನು. ಆಶೆಯ ಹಣ್ಣನ್ನಿಳಿಬಿಡುವನು. ಬದುಕುವ! ಇಬ್ಬರೂ ಕೂಡಿ ಬದುಕುವ! ಎಂದು ಎತ್ತಿಕೊಳ್ಳುವನು. ದೈಹಿಕ-ಅಗಂತುಕ ವಿಷವನ್ನು ಮುಚ್ಚಿ-ತಟ್ಟಿ, ಮುದ್ದಿಟ್ಟು—ಮೈಮುಟ್ಟಿ ಹೊಡೆದೋಡಿಸುವನು. ಬದುಕಲು ಆಶೆಯ ಕಿರಣವನ್ನು ತೋರಿಸುವನು. ಅದೇ ಮೈ ಉಣ್ಣುವುದು ರೂಢಿಯಾಗುವುದು. ಮಗಳು ಅಂದು ಬದುಕಿನ ಬಳ್ಳಿಯನ್ನು ಹರಿಬಿಡುವಳು. ಇವು ವ್ಯಾವಹಾರಿಕ ಜೀವನದಲ್ಲಿ ಸತ್ಯವಾದ ಮಾತುಗಳು. ಇವುಗಳಿಂದ ಅದೆಷ್ಟು ವಿಷಮ ವಿವಾಹಗಳು ಸಮರಸವನ್ನು ಹೊಂದಿಲ್ಲ! ನೆಮ್ಮದಿಯಾಗಿ ಬದುಕಿಲ್ಲ! ಬಾಳ್ಜೇನನ್ನು ಸವಿದಿಲ್ಲ! ಗೌರಮ್ಮ ತನ್ನ ಜೀವಮಾನದಲ್ಲಿ ಇಂಥ ಕೆಲವು ಉದಾಹರಣೆಗಳನ್ನು ಅರಿತ್ತಿದ್ದಳು. ಮಗಳದೂ ಹಾಗಾಗಬಹುದೆಂದು ನಂಬಿದ್ದಳು. ಅವಳ ನಂಬಿಗೆಯಲ್ಲಿ ವ್ಯಾವಹಾರಿಕ ಜ್ಞಾನವಿದ್ದಿತು. ಅನುಭವ ಸಾರವಿದ್ದಿತು. ಸತ್ಯತೆಯ ಸುಂದರ ಅಂಶವಿದ್ದಿತು. ಆದರೆ ಆದುದೇನು? ಕಳೆದ ೭-೮ ದಿನಗಳಲ್ಲಿ ಮಗಳು ಕಾಯಾಪಲ್ಲಟವಾದಂತೆ ರೂಪಾಂತರಿಸಿರುವಳು.

ಮೊದಲಿನ ಉರಿಮೋರೆಯೆತ್ತ, ಇಂದಿನ ನಗುಮೋರೆಯೆತ್ತ! ಮೊದಲಿನ ಉದಾಸೀನ ಭಾವನೆಯೆತ್ತ, ಇಂದಿನ ಉಲ್ಲಸಿತ ಭಾವನೆಯೆತ್ತ! ಮೊದಲಿನ ನಿರ್ಜೀವ ಸ್ಥಿತಿಯೆತ್ತ, ಇಂದಿನ ಜೀವಪೂರ್ಣ ಚೈತನ್ಯಸ್ಥಿತಿಯೆತ್ತ! ಮೊದಲು ಕೂಡಲು ಮನೆಯ ಒಂದು ಮೂಲೆ ಸಾಕಾಗುತ್ತಿದ್ದಿತು. ಇಂದು ಓಡಾಡಲು ಮನೆಯೇ ಸಾಲಲೊಲ್ಲದು. ಮೊದಲು ಹಲ್ಲು ಕಾಣಬೇಕಾದರೆ ಹೊಲಿದ ತುಟಿಗಳನ್ನು ಸೀಳಿ ತೆಗೆಯಬೇಕು. ಇಂದು ತೆರೆದ ಬಾಯನ್ನು ಮುಚ್ಚು ವುದು ಕಷ್ಟ. ಹೀಗೆ ತಿರುವುಮುರವಾದುದು ತೀರ ಆಶ್ಚರ್ಯದ ಸಂಗತಿ ಯಾಯಿತು. ಒಡೆಯಲಾರದ ಬಡಪಾಯಿತು.

ಗೌರಮ್ಮನೂ ನಾಲ್ಕಾರು ಮಕ್ಕಳನ್ನು ಹೆತ್ತು ಸಂರಕ್ಷಿಸಿದ್ದಳು. ಸೀತ ಮ್ಮನೂ ಏಳೆಂಟು ಮಕ್ಕಳ ತಾಯಾಗಿದ್ದಳು. ಮಕ್ಕಳನ್ನು ಆಡಿಸುವುದು, ಮುದ್ದಿಡುವುದು, ಉಣಿಸುವುದು, ತಿನಿಸುವುದು, ಲಲ್ಲೆಗರೆಯುವುದು, ಎಲ್ಲ ವನ್ನೂ ಸ್ವಂತ ಮಕ್ಕಳ ಮೇಲೆ ಮಾಡಿ ಅರಿತಿದ್ದರು. ಅವರು ತಮ್ಮ ಪ್ರೀತಿ ವಾತ್ಸಲ್ಯಗಳಿಗೆ ಒಂದು ಸೀಮಾರೇಖೆಯನ್ನು ಕೊರೆದುಕೊಂಡಿದ್ದರು. ಆ ರೇಖೆ ಎಲ್ಲ ತಾಯಂದಿರಂತೆ ಸಾಮಾನ್ಯವಾಗಿದ್ದಿತು. ವಾತ್ಸಲ್ಯದ ಅತಿರೇಕದಲ್ಲಿ ಒಂದೆರಡು ಹುಚ್ಚಾಟಗಳನ್ನು ಮಾಡಿರಬೇಕು. ಆದರೆ ಅವೆಲ್ಲ ಅಪವಾದದ ಸಂಗತಿಗಳೆಂದು ಅವರ ತಿಳಿವಳಿಕೆ. ಹಾಗೆ ಎಲ್ಲ ತಾಯಂದಿರು ಮಾಡು ತ್ತುಂಟೆಂದು ಅವರ ನಂಬಿಗೆ. ಅದು ಸರಿಯಾದುದು. ಆದರೆ ಕಲ್ಯಾಣಿಯ ರೀತಿ–ನೀತಿಗಳು ತೀರ ವಿಚಿತ್ರವಾಗಿ ಕಾಣಹತ್ತಿದುವು. ವಿಚಾರಿಸಿದಷ್ಟು ಅವು ಗಂಭೀರವೆನಿಸ ಹತ್ತಿದುವು.

ಕರುಣನು ಕಲ್ಯಾಣಿಯ ಮಗನಲ್ಲ. ಸವತಿಯ ಮಗನು. ಮಗ ನಾಗಲೂ ತಕ್ಕವನಲ್ಲ. ವಯಸ್ಸು ಹೆಚ್ಚು. ವಿಚಾರಿಸಿದರೆ ಕಲ್ಯಾಣಿಯ ವಯಸ್ಸಿನವನಾಗಬಹುದು. ಒಂದೆರಡು ಹೆಚ್ಚೇ ಸರಿ. ಇಷ್ಟು ಬೆಳೆದ ಸವತಿಯ ಮಗನು ಮನೆಯಲ್ಲಿರುವನು. ಇದು ಮಾತ್ಸರ್ಯದ ಸಂಗತಿಯು. ಕಲ್ಯಾಣಿಯು ದ್ವೇಷಿಸಬೇಕು. ಸವತಿಯ ಮಗನೂ ಇವಳನ್ನು ತಿರಸ್ಕರಿಸ ಬೇಕು. ಮೇಲೆ ಕಲ್ಯಾಣಿ ಕರುಣನನ್ನು ನೋಡಿ ಮೆಚ್ಚಿಕೊಂಡಿದ್ದಳು. ಇವನು ಭಾವೀಪತ್ನಿಯೆಂದು ತಿಳಿದಿದ್ದನು. ಆದರೆ ದೈವ ಘಟನೆಯಿಂದ ತಂದೆಯ ಹೆಂಡತಿಯಾದಳು. ಗಂಡನಿಗೆ ತಾಯಿಯಾದಳು. ಇದು ಸಂತಾಪ

ಜನಕವು. ವ್ಯಾವಹಾರಿಕವಾಗಿ ನೋಡಿದರೆ ಹಾಗೆ ಆಗಬೇಕು. ಉಭಯತ್ರರು ವೈರಿಗಳಂತೆ ಎಳೆದಾಡಿದರೂ ಯಾರೂ ಅಲ್ಲಗಳೆಯುವಂತಿಲ್ಲ. —ಇದು ಹೀಗಾಗ ಬೇಕಿದ್ದಿತು. ಆಯಿತು. ಎಂದು ಸಾಂತ್ವನದ ಉಸಿರೆಳೆಯುತ್ತಿದ್ದತು. ಆದರೆ ಆ ಎಲ್ಲ ವ್ಯವಹಾರ, ರೂಢಿ, ಮಾನಸಿಕ ವ್ಯಾಪಾರ, ಆಂತರಿಕ ಕೋಲಾಹಲಗಳನ್ನು ಮೀರಿ, ಮೆಟ್ಟಿ ಆದುದೇನು! ತಾಯಿ–ಮಗ! ಅದೂ ಕೂಡ ಸರ್ವೇ ಸಾಧಾರಣ ಬಗೆಯ ತಾಯಿ ಮಗನಲ್ಲ. ಅನಾದೃಶ್ಯವಾದ ತಾಯಿ–ಮಗ! ಎಂಥ ವಿಚಿತ್ರ ?

ಕಲ್ಯಾಣಿ ಸಂಸಾರ ಮಾಡಿದರೆ ಒಂದೆರಡು ವರುಷದಲ್ಲಿ ತಾಯಿಯಾಗಬಹುದು. ಮಗುವನ್ನೇ ಹೆರಬಹುದು. ಅಂದು ಆ ಚೊಚ್ಚಲ ಮಗನನ್ನು ಪ್ರೀತಿಸುವ ಲಕ್ಷಣಗಳನ್ನು ಕಲಿಯಬಹುದು. ಮಗನು ಬೆಳೆದಂತೆ ಅವನ ಬೆಳವಿಗೆ ಹೊಂದಿಕೆಯಾಗಿ ಪ್ರೀತಿಯೂ, ಪ್ರೀತಿಯ ತಾರತಮ್ಯವೂ ಬೆಳೆಯುತ್ತ ಹೋಗಬಹುದು. ಹೆಂಗಸು ಹೆರುಹೆರುತ್ತಲೆ ಮಕ್ಕಳ ಮೇಲೆ ಪ್ರೀತಿಯ ಆಧಿಕ್ಯವನ್ನು ಕಲಿಯುವಳು. ಒಂದು ಹೆತ್ತವಳ ಪ್ರೇಮಕ್ಕೂ ನಾಲ್ಕೈದು ಹೆತ್ತವಳ ಪ್ರೇಮಕ್ಕೂ ಮಹದಂತರವಿದೆ. ಒಂದು ಮಗುವಿನ ತಾಯಿಯ ಪ್ರೇಮದಲ್ಲಿ ಮಾತ್ಸರ್ಯ, ದುರಭಿಮಾನ, ಅಹಂಕಾರವಿದ್ದರೆ ಬಹು ಜನ ಮಕ್ಕಳ ತಾಯಂದಿರಲ್ಲಿ ಈ ಗುಣಗಳು ಸಮತೋಲವಾಗಿ ಇರುವುವು. ಪ್ರಪಂಚಕ್ಕೂ, ಶರೀರಧರ್ಮಕ್ಕೂ, ಶರೀರವಿಪಟ್ಟಿಕ್ಕೂ ಅನುಗುಣವಾದ ಮಕ್ಕಳ ತಾಯಂದಿರು ಸಮುದ್ರದಂತೆ ಶಾಂತರಿರುವರು. ಪರ್ವತದಂತೆ ಧೈರ್ಯಶಾಲಿಗಳಿರುವರು. ಹರಿಯುವ ನದಿಯಂತೆ ಚಪಲರಿರುವರು. ಅರಳಿದ ಹೂವಿನಂತೆ ಮುಖ ಮಾಡಿಕೊಂಡು, ಕೊಳಲೂದಿದಂತೆ ಮಾತಾಡುತ್ತ ಎಲ್ಲರ ಮತ್ತು ಎಲ್ಲ ವಿಷಯದ ಯೋಗಕ್ಷೇಮವನ್ನು ಮಾಡಬಲ್ಲರು. ಅವರಿಗೆ ಆಯಾಸವೆಂಬುದಿಲ್ಲ. ಅನಾದರವೆಂಬುದಿಲ್ಲ. ಸರ್ವ ಲಕ್ಷಣಗಳಿಂದ, ಸರ್ವ ಭಾವನೆಗಳಿಂದ, ಸರ್ವ ಆಕಾಂಕ್ಷೆಗಳಿಂದ ತೃಪ್ತರಾಗಿ ಸದಾಶಿವೆಯರಾಗಿ ಇರುವರು. ಕಲ್ಯಾಣಿಗೆ ತನ್ನ ಸ್ವಂತ ಮಕ್ಕಳಿಲ್ಲದೆ ಈ ಪದವಿಗೆ ಬಂದುದು. ಅದನ್ನು ಅಲಂಕರಿಸಿದುದು ಗೌರಮ್ಮ, ಸೀತಮ್ಮರಿಗೆ ಅತ್ಯಾಶ್ಚರ್ಯವನ್ನೂ, ದಿಗ್ಭ್ರಮೆಯನ್ನೂ ಹುಟ್ಟಿಸುತ್ತಿದ್ದಿತು.

ಇಂಥ ವಿಚಾರಗಳು ಗೌರಮ್ಮನಿಗೆ ನಿತ್ಯ ಬರುತ್ತಿದ್ದುವು. ಅವುಗಳ

ಗೊಂದಲದಲ್ಲಿ ಭಯ, ಶಂಕೆ, ವಿಸ್ಮಯಗಳ ತಾಕಲಾಟವಾದರೂ ಮಗಳು ನಗುತ್ತ ಬಾಳುತ್ತಿರುವಳು. ಇದು ಸಾಕು, ಇದು ಸಾಕು! ಎಂಬ ವಿಶಾಲ ಹೃದಯವು ಒಡನುಡಿದು ಕೆಲಸಕ್ಕೆ ಪ್ರೇರೇಪಿಸುತ್ತಿದ್ದಿತು.

ನಾಳಿನ ದಿವಸ ಗೌರಮ್ಮ, ಸೀತಮ್ಮರು ಊರಿಗೆ ಹೋಗಬೇಕಾದುದರಿಂದ ಅಡಿಗೆಯು ಮೆಲ್ಲಗೆ ಸಾಗಿದ್ದಿತು. ಗುರುಗಳು ನಡುವಿನ ಬಿಡುವಿನಲ್ಲಿ ಊಟಕ್ಕೆ ಬರುವೆನೆಂದು ಹೇಳಿ ಒಂದಿಷ್ಟು ಫಲಹಾರವನ್ನು ತೀರಿಸಿ ಸಾಲೆಗೆ ಹೋಗಿದ್ದರು. ಗೌರಮ್ಮ ಸೇವಿಗೆಯನ್ನು ಮಾಡುತ್ತಿದ್ದಳು. ಸೀತಮ್ಮ ಮೇಲಿನ ಕೆಲಸವನ್ನು ಮಾಡುತ್ತಿದ್ದಳು. ಕಲ್ಯಾಣಿ ಅತ್ತಿತ ಓಡಾಡುತ್ತ ಬೇಡಿದ ಸಾಮಾನುಗಳನ್ನು ಒದಗಿಸುತ್ತಿದ್ದಳು.

"ಕೇಶರವು ಉಳಿದಂತಿದ್ದಿತು. ಕಲ್ಯಾಣಿ ಇದೆ ಏನು?" ತಾಯಿ ಕೇಳಿದಳು.

"ನನಗೆ ಗೊತ್ತಿಲ್ಲ." ಕಲ್ಯಾಣಿ ಉತ್ತರಿಸಿದಳು.

"ಕರುಣನನ್ನು ಕೇಳು."

"ಹ" ಎಂದು ಅವನ ಕೋಣೆಗೆ ಬಂದಳು. ಕರುಣನು ಯಾವುದೋ ಕಾಗದವನ್ನು ಹುಡುಕುತ್ತಿದ್ದನು. ಕಲ್ಯಾಣಿಯು ಬಂದು—

"ನಿನ್ನ ಕಡೆಗೆ ಕೇಶರ ಇದೆಯೇ?" ಎಂದು ಕೇಳಿದನು.

"ಇದೆ."

"ಒಂದಿಷ್ಟು ಕೊಡು."

ಕರುಣನು ಹತ್ತರದ ಕಪಾಟದಲ್ಲಿ ಹುಡುಕ ಹತ್ತಿದನು. ಎಷ್ಟು ಹುಡುಕಿದರೂ ಸಿಕ್ಕಲಿಲ್ಲ—"ನಿಮಗೇ ಒಂದು ದಿನ ಕೊಟ್ಟಂತಿದೆ. ಜ್ಞಾಪಿಸಿ ಕೊಳ್ಳಿ." ಎಂದು ತಾಯಿಗೆ ನುಡಿದನು.

"ನನ್ನ ಕಡೆಗೆ ಕೊಟ್ಟಿರುವೆ?"

"ಕೊಟ್ಟಂತೆ ಇದೆ."

"ಇನ್ನಷ್ಟು ಹುಡುಕು. ನಾನೂ ನನ್ನ ಪೆಟ್ಟಿಗೆಯಲ್ಲಿ ನೋಡುವೆ." ಎಂದು ಕೋಣೆಗೆ ಹೋಗಿ ಪೆಟ್ಟಿಗೆಯನ್ನು ತೆರೆದಳು. ಆದರೆ ಮೊದಲು ಸಿಕ್ಕಿದು ನಾಲ್ಕಾರು ದಿನಗಗಳ ಹಿಂದೆ ಬಂದ ಕರುಣನ ಪತ್ರ. ಅದನ್ನು ಎತ್ತಿಕೊಂಡು ಆಶ್ಚರ್ಯದಿಂದ ನೋಡಹತ್ತಿದಳು. ನಾಲ್ಕು ದಿನಗಳ ಹಿಂದೆ ಬಂದಿದೆ.

ಇನ್ನೊಬ್ಬರ ಕೈಗೆ ಹತ್ತಬಾರದೆಂದು ನಾನೇ ಇಲ್ಲಿ ಇಟ್ಟಿರುವೆ. ಇಷ್ಟು ದಿನವಾದರೂ ಅವನಿಗೆ ಕೊಟ್ಟಿಲ್ಲ! ಎಂಥ ಮರಗೇಡಿ! ಹೀಗೆ ಮರೆಯಲು ಕಾರಣವೇನು? ಕರುಣನ ಪತ್ರವನ್ನು ಹೇಗೆ ಮರೆತೆ? ಅದರಲ್ಲಿ ಏನಿದೆಯೋ? ಎಂಥ ಮಹತ್ವದ ಸಂಗತಿಯಿದೆಯೋ! ಮರೆತೆನೇಕೆ? ನಾನಾ ಬಗೆಯಿಂದ ವಿಚಾರಿಸಿದಳು, ಹೊಳೆಯಲಿಲ್ಲ. ಏನೇ ಇರಲಿ. ಅವನು ಓದಿ ಹೇಳಲೇಬೇಕು. ಅವನಿಗೆ ಸುಲಭವಾಗಿ ಕೊಡುವುದಕ್ಕಿಂತ ತಮಾಶೆಯಿಂದ ಗೋಳಾಡಿಸಿ ಕೊಡುವುದು ಒಳ್ಳೆಯದು. ಇದರಿಂದ ಮರವಿನ ದೋಷವೂ ಅಳಿಯುವುದು. ಎಂದು ನಿರ್ಧರಿಸಿ ಕೇಶರವನ್ನು ತಾಯಿಗೆ ಕೊಟ್ಟು ಆ ಪತ್ರವನ್ನು ಮುಚ್ಚಿಕೊಂಡು ಅವನ ಕೋಣೆಗೆ ಬಂದಳು. ಕರುಣನು ಇನ್ನೂ ಹುಡುಕುತ್ತಿದ್ದನು.

" ಸಿಕ್ಕಿತೇ ? " ಎಂದು ಕೇಳಿದಳು.

" ಇಲ್ಲ. ನಿಮಗೆ ಕೊಟ್ಟಂತಿದೆ."

" ನೀನು ಬಹಳ ಮರಗೂಳಿ ಬಿಡು."

" ಏಕೆ ? "

" ನನಗೆ ಕೊಟ್ಟು ಮತ್ತೆ ಹುಡುಕುತ್ತಿರುವೆ. ಏನೆನ್ನಬೇಕು ? "

" ನೋಡಿರಿ. ಕೊಟ್ಟುದನ್ನು ಜ್ಞಾಪಿಸಿಕೊಟ್ಟರೂ ನಾನೇ ಮರಗೂಳಿ!"

" ಅದು ಹೋಗಲಿ. ನಿನಗೆ ಯಾರಿಂದಲಾದರೂ ಪತ್ರ ಬರುವುದಿದ್ದಿತೇ ? "

" ಏಕೆ ? "

" ಕಳೆದ ೮-೧೦ ದಿನಗಳಲ್ಲಿ 'ಯಾರಿಗಾದರೂ ಪತ್ರ ಬರೆದಿದ್ದೆಯಾ ? "

" ಇಲ್ಲ."

" ವಿಚಾರಿಸು "

ಕರುಣನು ಗೊಂದಲದಲ್ಲಿ ಬಿದ್ದನು. ತಾಯಿಯು ಅನಿರೀಕ್ಷಿತವಾಗಿ ಹೀಗೇಕೆ ಕೇಳುತ್ತಿರುವಳು. ಕಾರಣವೇನು ? ಎಂಬುದು ತಿಳಿಯಲಿಲ್ಲ. ಅವಳ ಮಾತಿನಂತೆ ತಾನು ಯಾರಿಗೂ ಪತ್ರ ಬರೆದಂತೆ ಇರಲಿಲ್ಲ. ಎಷ್ಟು ಜ್ಞಾಪಿಸಿಕೊಂಡರೂ ನೆನಪಿಗೆ ಬರಲೊಲ್ಲದು. ಕಲ್ಯಾಣಿಯ ಮುಖವನ್ನು ಮೇಲಿಂದ ಮೇಲೆ ನೋಡಿದನು. ಅವಳು ಮುಗುಳು ನಗೆಯನ್ನು ಬಾಯಲ್ಲಿ

ತುಂಬಿಕೊಂಡು ಕಣ್ಣು ಬಿಡುತ್ತ ಒಂದೇ ಸಮನೆ ನೋಡುತ್ತಿದ್ದಳು. ಕೊನೆಗೆ—

"ಬರೆದಿರುವೆಯಾ ?" ಎಂದು ಮತ್ತೆ ಕೇಳಿದಳು.

"ನಾನು ಯಾರಿಗೂ ಬರೆದಂತೆ ಇಲ್ಲ."

"ನೋಡು !"

"ಇಲ್ಲ."

"ನನ್ನ ಕೈಯಲ್ಲಿ ನಿನ್ನದೊಂದು........"

"ಏನು ?"

"ಹೇಳಬೇಕೇ ?"

ಬಾಯಿತೆರೆದು ನಿಂತನು.

"ನೀನು ಯಾರಿಗೆ ಪ್ರೇಮ ಪತ್ರವನ್ನು ಬರೆದಿರುವೆ ? ಜ್ಞಾಪಿಸಿಕೊ !"

"ಪ್ರೇಮ ಪತ್ರ !" ದೊಡ್ಡ ದೊಡ್ಡ ಕಣ್ಣು ತೆರೆದು ಕೇಳಿದನು.

"ಹ ! ನನಗೆ ತಿಳಿಯಬಾರದೆಂದು ಬೇರೆ ಭಾಷೆಯಲ್ಲಿ ಬರೆದಿರುವೆ. ಅದಕ್ಕೆ ಬೇರೆ ಭಾಷೆಯಲ್ಲಿಯೇ ಉತ್ತರವು ಬಂದಿದೆ. ನಾನು ಬಲ್ಲೆ."

"ನಾನು ಯಾರಿಗೂ ಪ್ರೇಮ ಪತ್ರವನ್ನು ಬರೆದಿಲ್ಲ."

"ನಿನ್ನ ಪ್ರೇಯಸಿಯೇ ಬರೆದಿರಬೇಕು."

"ನಾನು ಯಾವ ಪ್ರೇಯಸಿಯನ್ನೂ ಈ ವರೆಗೂ ಹುಡುಕಿಕೊಂಡಿಲ್ಲ."

"ಪತ್ರ ಬಂದದ್ದು ನಿಜ. ಯಾರಿಗೆ ಬರೆದಿದ್ದೆ ಹೇಳು."

"ನಾನು ಯಾರಿಗೂ ಬರೆದಿಲ್ಲ."

"ನೀನು ಯಾವಳನ್ನು ಪ್ರೀತಿಸಿರುವೆ. ಅದನ್ನಾದರು ಹೇಳು."

"ಇದೂ ಇಲ್ಲ."

"ಪತ್ರ ಬಂದಿದೆ. ಅವಳು ಯಾರು ? ಎಲ್ಲಿರುವಳು ? ಏನು ಕಲಿತಿರುವಳು ? ಹೇಗಿರುವಳು ? ಯಾವ ಊರವಳು ? ಹೇಳು. ಹೇಳಲೇಬೇಕು."

ಕರುಣನು ಗಾಬರಿಯಾಗಿ ನಿಂತನು.

"ನಿನ್ನ ಬಾಲ್ಯ ಜೀವನದ ಸಂಗಾತಿ ಬರೆದಂತಿದೆ. ಕೇವಲ ನಾಲ್ಕು ಸಾಲಿನಲ್ಲಿ ಬರೆದಿರುವಳು. ಎಲ್ಲಿಯವಳು ?"

ಕರುಣನು ಹಾಗೇ ನಿಂತನು.

"ಕರುಣ, ನನಗೆ ಹೇಳದೆ ಇದೇನು ನಡೆಸಿರುವೆ ! ನಿನ್ನನ್ನು

ಇಷ್ಟೊಂದು ನಂಬಿದ ಮೇಲೂ ನನ್ನನ್ನು ಕೇಳದೆ, ನನಗೆ ತಿಳಿಸದೆ, ನನ್ನಿಂದ ವಿಚಾರಿಸದೆ ಹೀಗೆ ಮಾಡುವುದು ಸರಿಯೇ? ಇದರಿಂದ ನನಗಾದ ವ್ಯಥೆಯನ್ನು ಅಳೆಯಬಹುದೇ?" ಒಂದಿಷ್ಟು ಗಟ್ಟಿಯಾಗಿ ನುಡಿದಳು.

ಕರುಣನು ದಿಗ್ಭ್ರಾಂತನಾದನು. ಕಲ್ಯಾಣಿಯ ಮುಖದ ಮೇಲಿನ ಕೃತಕ ಕೋಪವನ್ನು ನಿಜವೆಂದೇ ತಿಳಿದನು. ಕೈ ಹಿಂಡಿಕೊಳ್ಳುತ್ತ ಕುರ್ಚಿಯ ಮೇಲೆ ಹೋಗಿ ಕುಳಿತನು. ಮುಖವು ಬಾಡಿತು. ಕಣ್ಣು ಚಿಕ್ಕವಾದುವು. ಅಧೋಮುಖವಾಗಿ ಹಾಗೇ ಕುಳಿತನು. ಕಲ್ಯಾಣಿಯು ಇಷ್ಟು ಸಾಕೆಂದು—

"ಪತ್ರ ಬರೆದಿರಲಿಲ್ಲವೇ?" ಮುಗುಳುನಗೆಯಿಂದ ಕೇಳಿದಳು.

"ಇಲ್ಲ ತಾಯೀ! ನಾನು ಯಾವ ಹೆಂಗಸನ್ನೂ ಪ್ರೀತಿಸಿಲ್ಲ. ಪ್ರೇಯಸಿಯೆಂದು ಆರಿಸಿಲ್ಲ. ಎಲ್ಲವನ್ನು ನಿಮ್ಮ ಸ್ವಾಧೀನಪಡಿಸಿರುವೆ." ಎಂದು ಕಂಪನದ ಧ್ವನಿಯಿಂದ ನುಡಿದನು.

ಕಲ್ಯಾಣಿಯು ನಗುತ್ತ ಅವನ ಪತ್ರವನ್ನು ಅವನ ಕೈಗೆ ಕೊಡುತ್ತ—

"ಇದೋ ನಿನ್ನ ಪ್ರೇಯಸಿಯಿಂದ ಬಂದ ಪತ್ರ!" ನಗಹತ್ತಿದಳು.

ಕರುಣನು ವಿಷಾದದಿಂದಲೇ ಪತ್ರವನ್ನು ಓದಿಕೊಂಡನು. ಅದರಲ್ಲಿ ವಿಷಾದದ ಸಂಗತಿಯು ಇದ್ದುದು ನಿಜವಿದ್ದಿತು. ತಾಯಿಯು ಈ ವರೆಗೆ ಚೇಷ್ಟೆ ಮಾಡಿದಳೆಂದು ತಿಳಿಯಿತು. ಆದರೂ ಪತ್ರದೊಳಗಿನ ವಿಷಾದದ ಸಂಗತಿಯು ಮುಖದ ಮೇಲಿನ ದುಃಖಭಾರವನ್ನು ಹೊಡೆದು ಹಾಕಲಿಲ್ಲ. ಹಾಗೇ ಕುಳಿತನು.

"ಪತ್ರದಲ್ಲಿ ಏನಿದೆ ಹೇಳು?" ಎಂದು ಕೇಳಿದಳು.

ಕರುಣನು ಸುಧಾರಿಸಿಕೊಂಡು—"ಇನ್ನು ಹೇಳಿ ಮಾಡುವುದೇನು? ನಿಮಗೆ ಎಲ್ಲವೂ ಗೊತ್ತಾಗಿದೆ."

"ಏನು?"

"ನನಗೆ ಗೊತ್ತು, ನಿಮಗೆ ಗೊತ್ತು. ನಾನು ಪುನಃ ಹೇಳಿ ನಾಚಿಕೆ ಪಡಲಾರೆ

"ಅದೇನು ಹೇಳು. ನಾನು ಕೇಳಲೇಬೇಕು."

"ಮತ್ತೇನು ಹೇಳುವುದು! ಪ್ರೇಮಭಂಗದ ಪತ್ರ!"

"ಪ್ರೇಮಭಂಗ!"

"ನಾನು ಒಬ್ಬ ಅನಾಮಧೇಯಳನ್ನು ಪ್ರೀತಿಸಿದ್ದೆ."

“ ಪ್ರೀತಿಸಿದ್ದೆ! ”

“ ಹ! ಬಹಳ ಸುಂದರಿ. ಬಹಳ ಚಲುವೆ. ಅವಳ ರೂಪಕ್ಕೆ ಸಮಾನರು ಯಾರೂ ಇಲ್ಲ. ಅಷ್ಟು ಮನಮೋಹಕಳು! ಅಷ್ಟು ಲೋಕೋತ್ತರ ಸುಂದರಿಯು! ಮೆಚ್ಚಿಕೊಂಡಿದ್ದೆ. ಮಾರಿಕೊಂಡಿದ್ದೆ. ನನ್ನ ಬಾಲ್ಯದ ಸ್ನೇಹಿತಳು. ಕೂಡಿ ಕಲಿತಿರುವೆವು. ಕೂಡಿ ಆಡಿರುವೆವು. ಅವಳ ಹಾವಭಾವ ನೋಟ–ಮಾಟ ಪ್ರೀತಿಗೆ ಕಾರಣವಾಗಿದ್ದುವು. ನನ್ನ ನೀರಿಲ್ಲದ ನಿರ್ಜನವಾದ ಹೃದಯದಲ್ಲಿ ನೀರು ಹನಿಸಿದಳು. ಪ್ರೇಮಾಂಕುರವನ್ನು ನೆಟ್ಟಳು. ಗಿಡವಾಗಿ ಬೆಳೆಸಿದಳು. ಪ್ರೇಮ ಗೀತವನ್ನು ಹಾಡಿದಳು. ಆದರೆ... “

“ ಆದರೇನು ? ”

“ ಇದೋ ಉತ್ತರ! ” ಪತ್ರವನ್ನು ಮುಂದೆ ಮಾಡಿದನು.

“ ಏನಿದೆ ? ”

“ ಓದಿದರೆ ಎದೆಯೊಡೆಯುವುದು! ರಕ್ತ ಹರಿಯುವುದು! ಈ ವರೆಗೂ ನನ್ನ ಪ್ರೇಮಭಂಗದ ಹೃದಯವು ಒಡೆಯದಿದ್ದುದಕ್ಕೆ ಆಶ್ಚರ್ಯಪಡುವೆ. ಛೀ ಛೀ ಎಂದುಕೊಳ್ಳುವೆ. ತಾಯೀ..”ಎಂದು ಕೃತಕದುಃಖದಿಂದ ತೊಳಲಾಡಿದನು.

“ ಏನಾಯಿತು ? ”

ಪತ್ರವನ್ನು ಕೈಯ್ಯಲ್ಲಿ ಹಿಡಿದು —“ ನಿನ್ನಂತಹ ಹೀನನನ್ನು, ಅಲ್ಪಜ್ಞನನ್ನು, ದುರ್ಬಲನನ್ನು, ಉದಾಸನನ್ನು, ಧನಹೀನನನ್ನು ಮದುವೆಯಾಗಿ ನನ್ನ ಜೀವಮಾನವನ್ನು ಹಾಳುಮಾಡಿಕೊಳ್ಳಲಾರೆ. ನನಗೆ ಇಚ್ಛೆಯಿಲ್ಲ. ನನ್ನನ್ನು ಮರೆ. ನನ್ನನ್ನು ನೀನು ಇಷ್ಟು ದಿನ ಪ್ರೀತಿಸಿದುದು, ಪ್ರೀತಿಸಿದೆನೆಂದು ಹೇಳಿದುದು, ಹೇಳುವುದು ತೀರ ಅನ್ಯಾಯದ ಸಂಗತಿಗಳು. ಪುರುಷನು ತನಗೆ ಮೀರಿದ ಹೆಣ್ಣಿಗೆ ಕೈ ಹಾಕುವುದು ದೈವವಿಡಂಬನೆಯೇ ಸರಿ. ಒಂದು ಮಾತನ್ನು ನೀನು ಪಾಲಿಸಬೇಕು. ನನ್ನನ್ನು ಪ್ರೀತಿಸಿದುದು ನಿಜವಿದ್ದರೆ ಹೀಗೆ ಮಾಡು. ನನ್ನನ್ನು ನೀನು ಒಂದು ಸಮಯದಲ್ಲಿ ಪ್ರೀತಿಸಿದೆನೆಂದು ಯಾರ ಮುಂದೂ ಹೇಳಬೇಡ. ಇದೇ ನನ್ನನ್ನು ಈ ಮೊದಲು ಪ್ರೀತಿಸಿದುದರ ಪ್ರತಿಫಲ. ಅದನ್ನು ನನಗೆ ವಚನವಿತ್ತು ಮುಕ್ತನಾಗು. ಇಲ್ಲದಿದ್ದರೆ ಈ ರಿಣವನ್ನು ಮುಟ್ಟಿಸಲು ಬೇರೊಂದು ಜನ್ಮವನ್ನು ಪಡೆಯಬೇಕಾದೀತು! ಜೋಕೆ.” ಎಂದು ಬರೆದಿರುವಳು.

" ಇಷ್ಟಿದೆಯೇ ? "

" ಅಹುದು ತಾಯೀ ! "

" ಅವಳ ಹೆಸರೇನು ? "

" ಅನಾಮಿ...."

" ಹಾಳಾದವಳು. ಅವಳಾಗಿ ಬಿಟ್ಟಳು. ಇಲ್ಲದಿದ್ದರೆ ನಾನಾಗಿ ಬಿಡಿಸುತ್ತಿದ್ದೆ."

" ಸರಿ."

ಕರುಣನ ಹತ್ತಿರ ಹೋಗಿ ಕುಳಿತು—" ಇದು ನಿಜವೇ ಕುರುಣ ? " ಎಂದು ಕಲ್ಯಾಣಿ ಕೇಳಿದಳು.

" ಅಹುದು ತಾಯೀ ! "

" ನನಗೆ ಈ ವರೆಗೆ ತಿಳಿಸಿರಲಿಲ್ಲ."

" ಹೇಗೆ ತಿಳಿಸಬೇಕು ? "

" ನಾಚಿಕೆಯೇ ? "

" ಅಹುದು." ಖೊಳ್ಳೆಂದು ನಕ್ಕನು.

" ಇದು ನಿಜವಲ್ಲ. ಚೇಷ್ಟೆ ! "

ಕರುಣನು ಮತ್ತೆ ನಗಹತ್ತಿದನು.

" ನನ್ನ ಸಂಗಡ ಚೇಷ್ಟೆಯೇ ? "

" ನಾನು ಚೇಷ್ಟೆಯನ್ನು ಮಾಡಲಿಲ್ಲ. ನೀವು ಈ ಪತ್ರವನ್ನು ಕಂಡು ಹುಟ್ಟಿಸಿದ ಊಹೆಯನ್ನು ನಾನು ಮುಂದೆ ಸಾಗಿಸಿದೆ. ಇಷ್ಟೇ ! "

" ಸುಳ್ಳೇ ! "

" ಅಹುದು."

" ಸತ್ಯವಾಗಿ ? "

" ಸತ್ಯವಾಗಿ ಇದೆಲ್ಲ ಸುಳ್ಳು."

" ನನಗೆ ಸರಿಯಾದ ಉತ್ತರವನ್ನು ಕೊಟ್ಟೆ ಬಿಡು. ನಾನು ಅವಳ ಪತ್ರವೆಂದೇ ತಿಳಿದು ಕಿಡಿಕಿಡಿಯಾಗಿ ಬಿಟ್ಟಿದ್ದೆ. ಅಲ್ಲದೆ ನೀನು ನನ್ನ ಅಪರೋಕ್ಷದಲ್ಲಿ ಇದೆಲ್ಲವನ್ನು ಕೇಳಿ ನಿನ್ನ ಮೇಲೂ ಸಿಟ್ಟಾಗಿದ್ದೆ."

" ಈಗ ಸಿಟ್ಟು ಇಲ್ಲವಷ್ಟೇ.? "

" ಇನ್ನೂ ಇದೆ."

" ಮತ್ತೇಕೆ ? "

" ಪತ್ರದ ನಿಜವಾದ ಸಂಗತಿಯನ್ನು ಹೇಳು."

" ಓದಿಕೊಳ್ಳಬೇಕು."

" ನನಗೆ ಬರುವುದಿಲ್ಲ."

ಇನ್ನು ಚೇಷ್ಟೆ ಸಾಕೆಂದು ಪತ್ರವನ್ನು ಬಿಚ್ಚಿ—" ನಾನು ಕೆಲಸಕ್ಕಾಗಿ ಮುಂಬಯಿಗೆ ಒಂದು ಅರ್ಜಿಯನ್ನು ಹಾಕಿದ್ದೆ. ಅವರಿಂದ ಈಗ ಖಾಲಿ ಜಾಗ ಇಲ್ಲವೆಂದು ಬರೆದಿರುವರು. ಇಷ್ಟೇ ! " ಎಂದು ನುಡಿದನು.

" ನವಕರಿಗೆ ಅರ್ಜಿಯನ್ನು ಬರೆದಿದ್ದೆಯಾ ? "

" ಅಹುದು."

" ಅಂಥದೇನು ಬಂತು ? "

" ಕಲಿತು ಇಷ್ಟು ದೊಡ್ಡವನಾದ ಮೇಲೆ ತಂದೆಯವರ ಗಳಿಕೆಯ ಮೇಲೆ ಬದುಕುವುದು ಸರಿಯಾದೀತೆ ? ಓರಗೆಯ ಗೆಳೆಯರು ಏನು ಅಂದಾರು ? ನನಗಾದರೂ ಒಳ್ಳೆಯದೆನಿಸೀತೇ ? "

" ಹಾಗಾದರೆ ಒಂದಿಲ್ಲೊಂದು ದಿನ ನೀನು ಕೆಲಸಕ್ಕಾಗಿ ಊರನ್ನು ಬಿಟ್ಟು ಹೋಗಬೇಕಾಗುವುದು. ಅಲ್ಲವೇ ? "

ಪ್ರಶ್ನೆ ನಿಜವಾಗಿ ಜಯವಿದ್ದಿತು. ಆದರೂ ಸಾವರಿಸಿಕೊಂಡು—

" ಗಂಡಸು ಮನೆಯಲ್ಲಿ ಕುಳಿತು ರಿಣಗೂಳು ತಿನ್ನುವುದು ಸರಿಯೆ ? "

" ಹೂ. ಬೇಡ."

" ಕೆಲಸವನ್ನು ಹಿಡಿಯಬೇಕಷ್ಟೇ ! "

" ಅಹುದು. ಅದಕ್ಕಾಗಿ ಊರನ್ನೇಕೆ ಬಿಡಬೇಕು ? "

" ಹಾಗಾದರೆ ಇಲ್ಲೇ ಹೇಗೆ ಸಿಕ್ಕಬೇಕು ? "

" ಹುಟ್ಟಿದ ಸ್ಥಳದಲ್ಲಿ ಅನ್ನ ಸಿಕ್ಕದಿದ್ದರೆ ಹುಟ್ಟಿದ ಸ್ಥಳದ ಸಾರ್ಥಕವೇನು ? ನೀನು ಇಲ್ಲೇ ನಿಂತು ಬದುಕಬೇಕು. ಬಾಳಬೇಕು. ಅದನ್ನು ನಾನು ಕಣ್ಣು ತುಂಬ ನೋಡುವೆ."

" ನಾನು ಬೇರೆ ಕಡೆಗೆ ಹೋಗಬಾರದೇ ? "

" ಇಲ್ಲ. ಇಲ್ಲೇ ಇರಬೇಕು."

ಕರುಣನಿಗೆ ಮಾತು ಬೆಳಸಲು ಬೇಸರಾಯಿತು. ಮುಗಿಸುವಂತೆ— "ಆ ಮಾತು ಈಗೇಕೆ? ಇಂದಿನ ಮಟ್ಟಿಗೆ ಮುಂಬಯಿ ತಪ್ಪಿತಲ್ಲ."

"ಅದು ಎಂದಿಗೂ ತಪ್ಪುವುದು."

"ಹಾಗೇ ಆಗಲಿ. ನಾನು ಎಲ್ಲಿಗೇ ಹೋಗಲಿ, ಯಾವುದೇ ಕೆಲಸ ವನ್ನು ಹಿಡಿಯಲಿ ನಿಮ್ಮನ್ನು, ತಂದೆಯವರನ್ನು ಕೇಳದೆ, ತಿಳಿಸದೆ, ಅಪ್ಪಣೆ ಯನ್ನು ಪಡೆಯದೆ ಹೋಗುವುದಿಲ್ಲ. ಎಲ್ಲ ಗೆಳೆಯರಂತೆ ನಾನೂ ಅರ್ಜಿ ಯನ್ನು ಹಾಕಿದ್ದೆ. ಇಲ್ಲವೆಂದು ಬಂದಿತು. ನಾನು ಹೋಗುವುದೇ ಇಲ್ಲ."

ಒಳಗೆ ತಾಯಿಯು ಕರೆದಂತಾಯಿತು.

"ಇದು ಯೋಗ್ಯವಾದ ಮಾತು. ನೀನು ಹೋಗುವುದಾದರೆ ನನ್ನನ್ನು ಕೇಳಿ, ಅಪ್ಪಣೆಯನ್ನು ಪಡೆದುಕೊಂಡು, ಹೋಗಬೇಕು. ಏನೆಂದೆ?"

"ಅಪ್ಪಣೆ ತಾಯಿ!"

"ವಚನ ಕೊಡು."

"ಇದೋ ವಚನ!" ಎಂದು ಕೈ ಮುಂದೆ ಚಾಚಿದನು. ಕಲ್ಯಾಣಿಯು ಅವನ ಕೈಯನ್ನು ತನ್ನ ಕೈಯಲ್ಲಿ ಹಿಡಿದುಕೊಂಡು, ಅದುಮಿ

"ಇದನ್ನು ಕಡೆವರೆಗೆ ಪಾಲಿಸಬೇಕು."

"ಆಗಲಿ."

"ಹ........"

ತಾಯಿಯು ಮತ್ತೆ ಕರೆದಳು.

"ಬಂದೆ" ಎಂದು ಕೈಬಿಟ್ಟು ಅಡಿಗೆಯ ಮನೆಯ ಕಡೆಗೆ ನಡೆದಳು.

ಗುರುಗಳು ಮಧ್ಯಾಹ್ನದ ಬಿಡುವಿನಲ್ಲಿ ಮನೆಗೆ ಬರಲು ಎಲ್ಲರ ಊಟ ವಾಯಿತು. ಗೌರಮ್ಮ ಊಟಕ್ಕೆ ಕುಳಿತ ಸಮಯದಲ್ಲಿ—"ನಾಳೆ ನಾವು ಊರಿಗೆ ಹೋಗುವೆವು." ಎಂದು ದನಿ ಎಳೆದಳು.

"ಹೋಗುವಿರಾ?" ಎಂದು ಗುರುಗಳು ನುಡಿದರು.

"ಬಂದು ತಿಂಗಳ ಮೇಲಾಯಿತು. ಅವರು ಊನರು. ಇನ್ನೊಬ್ಬರ ನೆರವಿಲ್ಲದೆ ಒಂದು ತಂಬಿಗೆಯನ್ನು ಎತ್ತಲಾರರು. ಹೋಗುವೆವು." ಎಂದಳು.

"ಆಗಲಿ." ಎಂದರು.

ಊಟವಾದ ಮೇಲೆ ಕರುಣನನ್ನು ಕರೆದು—"ಅವರಿಗೆ ಏನೇನು

ಬೇಕು ಕೇಳಿಕೊಂಡು ನಾಳಿನ ಪ್ರಯಾಣದ ಸಿದ್ಧತೆಯನ್ನು ಮಾಡು." ಎಂದು ಹೇಳಿ ಗುರುಗಳು ಪುನಃ ಸಾಲೆಗೆ ಹೋದರು.

ಮರುದಿನ ತಾಯಿ–ಸೀತಮ್ಮ ಊರಿಗೆ ಹೋಗುವರೆಂದು ಕಲ್ಯಾಣಿಗೆ ಒಂದಿಷ್ಟು ವಿಷಾದವಾಯಿತು. ಆದರೂ ಅವರ ಪ್ರಯಾಣ ಸುಖಪ್ರದವಾಗಲೆಂದು ದೇವರಲ್ಲಿ ಪ್ರಾರ್ಥಿಸಿದಳು. ಹಾದಿಯ ಬುತ್ತಿಯೆಂದು ಉಂಡೆ, ಚಕ್ಕುಲಿ, ಅವಲಕ್ಕಿಯನ್ನು ಮಾಡಿಸಿದಳು. ತಾಯಿಗೆ–ಸೀತಮ್ಮನಿಗೆ ಎರಡು ಜರದ ಖಣ ತರಿಸಿದಳು. ಮುಂಜಾನೆ ಖೀರು–ಕಡುಬು ಮಾಡಿಸಿದಳು. ಮುನ್ನಾದಿನವೇ ಒಂದು ಪತ್ರ ಬರೆದಿಟ್ಟಳು. ಅವಳ ಅರಿವೆ–ಅಚಡಿಗಳನ್ನು ಹುಡುಕಿದಳು. ಒಂದು ಗಂಟು ಕಟ್ಟಿದಳು. ಪೆಟ್ಟಿಗೆಯಲ್ಲಿ ತುಂಬುವುದನ್ನು ತುಂಬಿದಳು. ಎಲ್ಲ ಸಿದ್ಧತೆಯಾಯಿತೆಂದು ತಿಳಿದು ಬಂದಿತು. ಊಟವಾಯಿತು. ಕರುಣನು ಹೊರಗೆ ಗಾಡಿಯನ್ನು ತಂದು ನಿಲ್ಲಿಸಿದನು. ಕಲ್ಯಾಣಿಯ ಕಣ್ಣಿಂದ ನೀರು ಇಳಿಯ ಹತ್ತಿದುವು. ಗುರುಗಳು ಗಾಡಿಯ ಖರ್ಚಿನ ಹಣವನ್ನು ಕರುಣನ ಕೈಯಲ್ಲಿ ಕೊಟ್ಟರು. ಉಡಿ ತುಂಬುವುದಾಯಿತು. ಖಣ–ಕಾಯಿ ಆಯಿತು. ಅರಿಷಿಣ–ಕುಂಕುಮವಾಯಿತು. ಕಲ್ಯಾಣಿಯು ಗಟ್ಟಿಯಾಗಿ ಅಳಹತ್ತಿದಳು. ಗೌರಮ್ಮ ಮಗಳನ್ನು ಎದೆಗೆ ಹಿಡಿದುಕೊಂಡು—

"ಸುಮ್ಮಗಿರು ಕಲ್ಯಾಣಿ. ನೀನು ತಿಳಿದವಳಿರುವೆ. ಹೋಗುವ ಮುಂದೆ ಸಂತೋಷದಿಂದ ಕಳಿಸು. ನಿನ್ನ ಸುಖವೇ ನನ್ನ ಸುಖ. ಅನುವು–ಆಪತ್ತಿನಲ್ಲಿ ಕರೆಯಿಸು, ಬರುವೆ. ಕರುಣನು ಒಳ್ಳೆಯವನು- ನಿನ್ನ ಹೊಟ್ಟೆಯ ಮಗನಿಗಿಂತಲೂ ಅಧಿಕನು. ಸುಮ್ಮನಿರು. ಕರುಣ ನಿನ್ನ ತಾಯಿಯನ್ನು ಸುಖದಿಂದ ಕಾಣು. ಅವಳಿಗೆ ಒಳ್ಳೆಯದನ್ನು ಮಾಡು. ನಿಮ್ಮಿಬ್ಬರ ಪ್ರೀತಿ ಅಖಂಡವಾಗಿರಲಿ. ದೇವರು ನಿಮ್ಮಿಬ್ಬರಿಗೂ ಒಳಿತು ಮಾಡಲಿ." ಎಂದು ಮಗಳ ಕಣ್ಣೊರಸಿದಳು.

ಕಲ್ಯಾಣಿಯು ಇನ್ನೂ ಬಿಕ್ಕುತ್ತಿದ್ದಳು.

"ಕರುಣ ನಿನ್ನ ಮದುವೆಗೆ ಕರೆಯಿಸು. ಮರೆಯಬೇಡ." ಎಂದು ಚೇಷ್ಟೇ ಮಾಡಿದಳು.

ಕರುಣನು ವಿಷಾದದಲ್ಲಿಯೇ ನಗುತ್ತ ಅವರ ಕಾಲು ಹಿಡಿದನು.

"ನಿನಗೆ ಒಳಿತಾಗಲಿ!" ಎಂದು ಆಶೀರ್ವದಿಸಿದಳು.

ಸೀತಮ್ಮನಿಗೂ ನಮಸ್ಕರಿಸಿದನು.

" ಏಳಪ್ಪ ! ದೇವರು ನಿನಗೆ ಒಳ್ಳೆಯದು ಮಾಡಲಿ." ಎಂದರು.

" ವೇಳೆಯಾಯಿತು." ಗುರುಗಳು ಎಚ್ಚರಿಸಿದರು.

" ಹೋಗುವೆವು ಕಲ್ಯಾಣಿ ! " ಗೌರಮ್ಮ ಗಲ್ಲ ಹಿಡಿದು ಕೇಳಿದಳು.

ಕಲ್ಯಾಣಿ ತಾಯಿ ಮತ್ತು ಸೀತಮ್ಮನಿಗೆ ನಮಸ್ಕರಿಸಿದಳು. ಅವರು ಆಶೀರ್ವದಿಸಿದರು.

" ಒಳ್ಳೆದು ಹೊರಡುವೆವು." ಎಂದು ಗುರುಗಳ ಕಡೆಗೆ ಮುಖ ಮಾಡಿ ನುಡಿದರು.

" ಆಗಲಿ." ಎಂದು ದೂರದಿಂದ ಗುರುಗಳು ನಮಸ್ಕರಿಸಿದರು.

" ಇರಲಿ. ಅವಳನ್ನು ಎಚ್ಚರದಿಂದ ಜೋಪಾನ ಮಾಡಿರಿ. ನಿಮಗೆ ವಿಪರೀತ ಅನುಭವವಾಗಿರಬೇಕು. ಅದು ಕೃತಕವೆಂದು ನನ್ನ ನಂಬಿಗೆ ನೀವು ಹಿರಿಯರು. ನೋಡಿಕೊಂಡಿರಬೇಕು, ಹೆಚ್ಚಿಗೆ ಹೇಳಲಾರೆ." ಎಂದು ಹೊರಬಿದ್ದರು.

" ಹೋಗುವಿರಾ " ಕರುಣನು ದುಃಖದಿಂದ ಕೇಳಿದನು.

ಅವನನ್ನು ಅಪ್ಪಿಕೊಂಡು— " ಹೊಗುವೆವು." ಎಂದು ಬಾಗಿಲಿಗೆ ಬಂದರು. ಗಾಡಿಯನ್ನು ಏರಿದರು.

ಸ್ಟೇಶನದ ಕಡೆಗೆ ಗಾಡಿಯು ನಡೆಯಿತು.

ಕರುಣನೂ ಹಿಂಬಾಲಿಸಿದನು.

ಕಲ್ಯಾಣಿ ಕಣ್ಣಮರೆಯಾಗುವ ವರೆಗೆ ಬಾಗಿಲಲ್ಲಿ ನಿಂತು ನೋಡಿದಳು.

ಮನೆಯಲ್ಲಿ ಉಳಿದವರು ಮೂವರೇ.

ಕಲ್ಯಾಣಿಯು ಅಡಿಗೆಯ ಮನೆಯ ವ್ಯವಸ್ಥಾಪಕಳಾದಳು. ಗುರುಗಳು ಗೃಹಪತಿಯಾದರು. ಕರುಣನು ಮಾತ್ರ ಎರಡು ಮನೆಯ ದೀಪದಂತೆ ಉಭಯತರಿಗೂ ಮಧ್ಯವರ್ತಿಯಾದನು. ಮುಂಜಾನೆಯ ಚಹ ಸಿದ್ಧ ಮಾಡುವವಳು ಕಲ್ಯಾಣಿ. ಅದನ್ನು ಒಯಿದು ಕೊಡುವವ ಕರುಣ. ಅಡಿಗೆಯನ್ನು ಮಾಡುವವಳು ಕಲ್ಯಾಣಿ. ಊಟಕ್ಕೆ ಬನ್ನಿರೆಂದು ಕರೆಯುವ ಕರುಣ. ಗುರುಗಳು ತಮ್ಮ ಕೆಲಸ-ಕಾರ್ಯಗಳನ್ನು ಕೂಗಿ ಎಚ್ಚರಿಸುತ್ತಿದ್ದರು. ಅದನ್ನು ಇಡಿಯ ಮನೆಯು ಕೇಳುತ್ತಿದ್ದಿತು. ಆ ಕೂಗು ಕಲ್ಯಾಣಿಯನ್ನು ಉದ್ದೇಶಿಸಿಯೇ ಇರುತ್ತಿದ್ದಿತು. ಕಲ್ಯಾಣಿಯೂ ಕೇಳುತ್ತಿದ್ದಳು. ಅದನ್ನು ಮಾಡುತ್ತಿದ್ದಳು. ಆದರೆ ಪ್ರತಿಫಲವನ್ನು ಕರುಣನ ಮುಖಾಂತರ ಸಲ್ಲಿಸುತ್ತಿದ್ದಳು. ಈ ವ್ಯವಹಾರ ಅವನಿಗೆ ಅನೇಕ ಸಾರೆ ಸರಿಬಂದಿರಲಿಲ್ಲ. ಕಲ್ಯಾಣಿಯೇ ಮಾಡಬೇಕೆಂದು ಅವನ ಸದಭಿಪ್ರಾಯವಿದ್ದಿತು. ಆದರೆ ಅದನ್ನು ಅವಳ ಮುಂದೆ ಹೇಳುವಂತಿರಲಿಲ್ಲ. ಹೇಳಿದರೆ ಏನಾಗುವುದೋ! ಎಂಬ ಸಂಶಯವು ಸದಾ ಕೊರೆಯುತ್ತಿದ್ದಿತು. ತಾಳಿಕೊಂಡು ತಾಯಿಯ ಮಾತನ್ನು ನಡಿಸುತ್ತಿದ್ದನು.

ಹೀಗೆ ಕರುಣನು ಕೆಲಸವನ್ನು ಮಾಡುತ್ತಿದ್ದರೂ ವಿಕೋಪಕ್ಕೆ ಹೋದ ಪ್ರಸಂಗಗಳು ಅನೇಕವಿದ್ದುವು. ಕಲ್ಯಾಣಿಯು ಕರುಣನನ್ನು ಹಡೆದ ತಾಯಿಯಂತೆ ಅಕ್ಕರೆಯಿಂದ ಕಾಣುತ್ತಿದ್ದಳು. ಅವಳಿಗೆ ಮಾನಸಿಕ ಮತ್ತು ವ್ಯಕ್ತಿತ್ವದ ದುಃಖ ಸಾಕಷ್ಟಾಗಿದ್ದರೂ ಹಿರಿಯರ ಜುಲುಮೆಗೆ, ಧರ್ಮದ ಒತ್ತಡಕ್ಕೆ ಹೆಂಡತಿಯೆಂಬ ಅಭಿದಾನವನ್ನು ಸ್ವೀಕರಿಸಿ ಗುರುಗಳ ಮನೆಗೆ ಬಂದಿದ್ದಳು. ಬಂದ ದಿನವೇ ತನ್ನ ಇತಿಶ್ರೀ ಆಯಿತೆಂದು ತಿಳಿದಿದ್ದಳು. ಕಲ್ಯಾಣಿಯೆಂಬ ಹೆಸರನ್ನು ಹೊತ್ತ ಈ ದೇಹಕ್ಕೆ ಇನ್ನು ನೆಮ್ಮದಿಯಿಲ್ಲ, ಸೌಖ್ಯವಿಲ್ಲ, ಸುಖವಿಲ್ಲವೆಂದು ಅರಿತಿದ್ದಳು. ಆ ದೇಹಕ್ಕೆ ಸಾವು ಇಂದು ಬರಲಿ, ನಾಳೆ ಬರಲಿ, ಎಂದೇ ಬರಲಿ ಅದನ್ನು ಆನಂದದಿಂದ ಅಪ್ಪಿಕೊಳ್ಳ

ಬಯಸಿದ್ದಳು. ಆದರೆ ಕರುಣನ ರೂಪ, ಯೌವನ, ಮಾತುಗಾರಿಕೆ, ವಿಧೇಯತೆ, ಸೌಜನ್ಯಗಳಿಗೆ ಮಾರುಹೋಗಿದ್ದಳು. ಈ ಅನಾಥ ಬಾಲಕನು ಇನ್ನೂ ಬೆಳೆಯಲಿರುವನು. ಬದುಕಲಿರುವನು. ಬೆಳಗಲಿರುವನು. ಅವನಿಗಾಗಿ ಏಕೆ ತಾನು ಬದುಕಬಾರದು? ಅವನ ಉತ್ಕರ್ಷಕ್ಕೆ ನಿಲ್ಲಬಾರದು? ಬಾಳೇ ಮುಗಿದು ಶುಷ್ಕವಾದ ತನ್ನ ಜೀವನವನ್ನು ಅವನಿಗಾಗಿ ಮೀಸಲಿಟ್ಟು ಏಕೆ ಇರಬಾರದು! ಅವನ ಉನ್ನತಿಯಲ್ಲಿ ತನ್ನ ಆಶೆ–ಆಕಾಂಕ್ಷೆಗಳನ್ನು ಕಾಣಬಾರದು? ಎಂದು ವಿಚಾರಿಸಿದ್ದಳು. ಇವುಗಳ ಸಂಗಮದಿಂದ ಅವಳ ಬರಡಾದ ಸ್ತ್ರೀತ್ವ, ಸತ್ತುಹೋದ ವ್ಯಕ್ತಿತ್ವ, ಮುರುಟಿದ ತಾಯಿತನ ಜಾಗ್ರತಗೊಂಡುವು. ಅವುಗಳ ಆಧಿಕ್ಯದಿಂದ ಕರುಣನು ಮಗನೆನಿಸಿದನು. ಪ್ರೀತಿಯ ಪುತ್ರನಾದನು. ಹೊಟ್ಟೆಯ ಮಗನಾದನು. ಅವನ ಮೇಲೆ ತನ್ನ ಪ್ರೀತಿ, ವಾತ್ಸಲ್ಯಗಳು ಹೆಚ್ಚು ಹೆಚ್ಚಾದಂತೆ ತನ್ನ ವ್ಯಕ್ತಿತ್ವದ ಪ್ರಭಾವವನ್ನು ಬೀರಲು, ಊರಲು ಅನುಕೂಲವೆನಿಸಹತ್ತಿತು. ಅದೇ ಅವನ ಮೇಲೆ ಅಧಿಕಾರವಾಯಿತು. ತಾಯಿಯನ್ನು ಕಳೆದುಕೊಂಡು, ಹೆಂಗಸಿನ ಸುಳಿದಾಟವನ್ನೇ ಅರಿಯದ ಕರುಣನಿಗೆ ಕಲ್ಯಾಣಿಯ ಅಧಿಕಾರ, ಆಜ್ಞೆ ಸಮಂಜಸವೆನಿಸಿದುವು. ಅವುಗಳ ಪಾಲನೆಯಲ್ಲಿ ಒಂದು ಬಗೆಯ ತೃಪ್ತಿಯೂ, ಹಿತವೂ ಎನಿಸಹತ್ತಿತು. ಅದಕ್ಕೆ ಅವಳು ಹೇಳಿದ್ದನ್ನು ಮಾಡುತ್ತಿದ್ದನು.

ಗುರುಗಳು ಕಲ್ಯಾಣಿಯನ್ನು ಹೆಂಡತಿಯೆಂದು, ಹೊಸ ಹೆಂಡತಿಯೆಂದು ಮನೆಗೆ ತಂದಿದ್ದರು. ಅವರು ಹಳೆಯ ಕಾಲದ ಸಂಪ್ರದಾಯಬದ್ಧ ಜನರು. ಹೆಂಡತಿಯೇ ಗಂಡನ ಸೇವೆಯನ್ನು ಮಾಡಬೇಕು. ಅವಳು ದಾಸಿಯಾಗಿರಬೇಕು. ಅಡಿಗೆಯವಳಾಗಿರಬೇಕು. ಗೆಳತಿಯಾಗಿರಬೇಕು. ಮಡದಿಯಾಗಿರಬೇಕು. ತಾಯಿಯಾಗಿರಬೇಕು. ಕೊನೆಗೆ ಪುರುಷನ ಭೋಗ ಸಾಧನವಾಗಿರಬೇಕು. ಎಂಬ ತತ್ವವನ್ನು ಪ್ರತಿಪಾದಿಸುವವರಾಗಿದ್ದರು. ಇವೆಲ್ಲ ಸಂಸ್ಕೃತ ಶ್ಲೋಕಿನ ಭಾವಾನುವಾದರೂ ಪ್ರಸಂಗ ವಿಶೇಷದಲ್ಲಿ ಅವುಗಳಿಗೇ ಬಣ್ಣ–ಸುಣ್ಣ ಬಳಿದು ಅರ್ಥ ಹೇಳಿದರೂ ಅವರು ಗ್ರಹಿಸಿಕೊಂಡ ಮುಖ್ಯ ಮಾತು ಸ್ತ್ರೀ ಪುರುಷನ ಭೋಗವಸ್ತು! ಎಂದೇ ಆಗಿದ್ದಿತು. ಅವರು ಆ ಸಿದ್ಧಾಂತಕ್ಕಾಗಿಯೇ ಕಲ್ಯಾಣಿಯನ್ನು ಕಾರಸ್ಥಾನದಿಂದ ಮದುವೆಯಾಗಿದ್ದರು. ಆದರೆ ಆ ತತ್ವ ಇನ್ನೂ ಫಲಕಾರಿಯಾಗಿರಲಿಲ್ಲ. ಅದರ ಚಲಾವಣೆಗೆ ಅನುಕೂಲ ದಿನವನ್ನು

ಹುಡುಕುತ್ತಿದ್ದರು. ದಿನಗಳು ಕೆಲವೊಂದು ಕಾರಣದಿಂದ ಮುಂದೆ ಮುಂದೆ ಸಾಗಿದ್ದುವು. ಮಾನಸಿಕ ಪ್ರವೃತ್ತಿಗಳು ದಿನಕ್ಕೊಂದು ಬಗೆಯಿಂದ ಬಿಸಿಬಿಸಿ ಯಾಗುತ್ತ ನಡೆದಿದ್ದುವು.

ಗೌರಮ್ಮನು ಹೋದ ಮೇಲೆ ಕರುಣನು ಚಹ, ಊಟ, ತಿನಿಸುಗಳಿಗೆ ಕರೆಯುತ್ತಿದ್ದನು. ಗುರುಗಳು ಹ! ಎಂದು ಬಿರುಸಾಗಿಯೇ ನುಡಿಯುತ್ತಿದ್ದರು. ಅವರ ಹ! ಶಬ್ದದ ಮೇಲಿನ ಆಘಾತದ ಅರ್ಥ ಅವನಿಗೆ ತಿಳಿಯುತ್ತಿದ್ದಿತು. ಅದನ್ನು ಕಲ್ಯಾಣಿಗೆ ಹೇಳುತ್ತಿದ್ದನು. ಅವಳು ಅದನ್ನು ಕಿವಿಯ ಮೇಲೆ ಹಾಕಿಕೊಳ್ಳುತ್ತಿರಲಿಲ್ಲ ಆರನೆಯ ದಿನ ಆ ಹ! ಇನ್ನೂ ಪ್ರಕ್ಷುಬ್ಧವಾಗಿ ಒಂದಿಷ್ಟು ವಾದ–ಸಂವಾದವೇ ಆಯಿತು.

ಗುರುಗಳು ಅಂದು ಕ್ಷೌರ ಮಾಡಿಸಿಕೊಂಡು ಬಂದಿದ್ದರು. ಕರುಣನು ಎಣ್ಣೆಯನ್ನು ಹಾಕಿದನು. ತಂಬಿಗೆಗೆ ನೀರು ಸುರಿವಿದನು. ಅವರು ಶೌಚವನ್ನು ತೀರಿಸಿಕೊಂಡು ಬಂದರು. ಬಚ್ಚಲಕ್ಕೆ ಇಳಿದರು. ಕರುಣನೇ ನೀರು ಹಾಕಿದನು. ೮–೧೦ ತಂಬಿಗೆ ನೀರು ತೋಡಿ ತನ್ನ ಕೆಲಸಕ್ಕೆ ಹೋದನು. ಗುರುಗಳು ಅಂದು ಸೀಗೇಕಾಯಿಯನ್ನು ಹಚ್ಚಿಕೊಂಡು ಮೈಯನ್ನು ತಿಕ್ಕಿ ತಿಕ್ಕಿ ತೊಳೆದುಕೊಂಡರು. ಆದರೆ ಸೀಗೇಕಾಯಿಯ ಚೂರುಗಳು ಮೈಯಿಂದ ಹೋಗಿರಲಿಲ್ಲ. ಇನ್ನಷು ನೀರು ಬೇಕಿದ್ದಿತು. ಕರುಣನು ಅಲ್ಲಿ ಇರಲಿಲ್ಲ. ಇನ್ನಷ್ಟು ನೀರ ಬೇಕು! ಎಂದು ಕಲ್ಯಾಣಿಯನ್ನು ಉದ್ದೇಶಿಸಿ ನುಡಿದರು.

ಅಡಿಗೆಯ ಮನೆಯಲ್ಲಿದ್ದ ಕಲ್ಯಾಣಿ ಕೇಳಿದಳು.

ಗುರುಗಳು ಮತ್ತೊಮ್ಮೆ ಕೂಗಿದರು. ಕಲ್ಯಾಣಿ ಎದ್ದು ಹೋಗಿ ಕರುಣನನ್ನು ಕರೆದಳು. ಅವನು ಧಾವಿಸಿ ಬಂದು ನೀರು ತೋಡಹತ್ತಿದನು. ಗುರುಗಳು ತೆಪ್ಪಗೆ ತೋಯಿಸಿಕೊಂಡು ಬಚ್ಚಲಲ್ಲಿ ಕುಳಿತಿದ್ದರು. ಬಾಯಲ್ಲಿ ಇನ್ನು ಯಾವ ಮಂತ್ರವೂ ಪುಟಪುಟಿಸಿರಲಿಲ್ಲ. ಕರುಣನು ಸಾಕಷ್ಟು ನೀರು ತೋಡಿ ಹೊರಗೆ ಹೋದನು. ಬಿಸಿನೀರಿನಿಂದ ಸ್ನಾನಮಾಡಿ ಬಿಸಿಬಿಸಿಯಾದ ಗುರುಗಳು ಹಾಗೇ ಕುಳಿತಿದ್ದರು. ಕಲ್ಯಾಣಿಯ ಮೇಲೆ ಕೆಲವು ಬಿಸಿ ಶಬ್ದಗಳನ್ನು ಕಾರಬೇಕೆಂದು ಹವಣಿಸುತ್ತಿದ್ದರು. ಕರುಣನು ಕಾಣದಾಗಲು "ನಾಲ್ಕು ತಂಬಿಗೆ ನೀರು ತೋಡಿಕೊಟ್ಟಿದ್ದರೆ ನಿನ್ನ ಯಾವ ವ್ರತವೂ ಭಂಗವಾಗುತ್ತಿರಲಿಲ್ಲ. ಏಕೆ ತೋಡಿಕೊಡಬಾರದು! ನೀನು ಮದುವೆಯನ್ನು

ಮಾಡಿಕೊಂಡು ಮನೆಗೆ ಬರುವ ಮುಂದೆ ಎಲ್ಲ ಕೆಲಸವನ್ನು ಅವನೇ ಮಾಡಬೇಕೆಂದು ನಿಶ್ಚಯಿಸಿಕೊಂಡಂತಿಲ್ಲ" ಎಂದು ಒಂದು ತಂಬಿಗೆ ನೀರನ್ನು ಸುರಿದುಕೊಂಡರು.

ಕಲ್ಯಾಣಿಯು ಒಲೆಯ ಮುಂದೆ ಕುಳಿತು ಕೇಳಿದಳು.

"ಇಷ್ಟೊಂದು ಹಟ, ಚೆಂಡಿತನ, ಸೊಕ್ಕು, ದುರಭಿಮಾನ ನನ್ನ ಮುಂದೆ ಎಳ್ಳಷ್ಟೂ ನಡೆಯಲಾರದು" ಎರಡನೆಯ ತಂಬಿಗೆ ಸುರಿದುಕೊಂಡರು.

ಇದನ್ನೂ ಕಲ್ಯಾಣಿ ಕೇಳಿಕೊಂಡಳು

"ಹೋದ ಜನ್ಮದಲ್ಲಿ ಯಾವ ಪಾಪವನ್ನು ಮಾಡಿದ್ದೆಯೋ ಅದರ ಫಲ-ಭೋಗ ನಿನ್ನ ಪಾಲಿಗೆ ಸಿಕ್ಕಿದೆ. ಈ ಜನ್ಮದಲ್ಲಾದರು ಪುಣ್ಯ ಗಳಿಸಿ ಮುಂದಿನ ಜನ್ಮಕ್ಕಾದರು ಸುಖದ ದಾರಿಯನ್ನು ಕಂಡುಕೊಳ್ಳಬಾರದೇ!" ಮೂರನೆಯ ತಂಬಿಗೆಯನ್ನು ಸುರಿದುಕೊಂಡರು.

ಕಲ್ಯಾಣಿ ಸುಮ್ಮನೆ ಕೇಳಿದಳು.

"ಗಂಡಸಿಗೂ ಒಂದು ತಾಳ್ಮೆ ಇದೆ. ಒಂದು ಸಹನೆ ಇದೆ. ಅದರ ಪರೀಕ್ಷೆಗೆ ಹೋಗಬಾರದು. ನೀನು ಪರೀಕ್ಷೆಯ ಹಟಕ್ಕೆ ಬಿದ್ದಂತೆ ಕಾಣುವುದು. ಆದರೆ ಅದರ ಫಲಿತಾಂಶ ಒಳ್ಳೆಯದಾಗದು. ನಾನು ಇಷ್ಟು ದಿವಸ ತಾಳಿಕೊಂಡಿರುವೆ. ಇನ್ನು ಮುಂದೆ ನನ್ನಿಂದಾಗದು, ಎಚ್ಚರದಲ್ಲಿರು!" ಎಂದು ಸ್ನಾನವನ್ನು ಮುಗಿಸಿದರು.

ಕಲ್ಯಾಣಿಯು ಕಾಲಿಗೆ ಘಟಸರ್ಪ ಸುತ್ತಿದಂತೆ ಗಾಬರಿಯಾದಳು. ಕಣ್ಣಿಂದ ನೀರು ಧಾರಾಕಾರವಾಗಿ ಉದುರಹತ್ತಿದುವು. ಒಲೆಯಲ್ಲಿ ಕಟ್ಟಿಗೆಗಳು ಧಗಧಗ ಉರಿಯುತ್ತಿದ್ದುವು. ಹಂಚಿನ ಮೇಲಿನ ರೊಟ್ಟಿಯು ಮೈಸುಟ್ಟು ಕೊಳ್ಳುತ್ತಿದ್ದಿತು. ಬೆಂಕಿಗೆ ಹಚ್ಚಿದುದು ಹೊಟ್ಟೆಯುಬ್ಬಿಸಿಕೊಂಡು ನಿಂತಿದ್ದಿತು. ಹುಳಿಯು ತಕಪಕ ಕುದಿಯುತ್ತಿದ್ದಿತು.

"ನೀನು ಹೆಂಗಸು. ನನ್ನ ಹೆಂಡತಿ. ಹೆಂಡತಿಯಂತೆ ನಡೆದರೆ ಮನೆಯಲ್ಲಿ ಶಾಂತತೆಯು ಉಳಿದೀತು. ಇಲ್ಲದಿದ್ದರೆ ಪರಿಣಾಮ ನೆಟ್ಟಗಾಗದು. ಉಭಯತರ ಮಾನ–ಮರ್ಯಾದೆಯನ್ನು ಕಾಯುವುದು ಬೇಕಿದ್ದರೆ ಒಳ್ಳೆಯ ರೀತಿಯಿಂದ ನಡೆ. ಇಲ್ಲದಿದ್ದರೆ ನಾನು ಬಲಾತ್ಕಾರದಿಂದಾದರೂ ನಡೆಯಲು ಕಲಿಸಬೇಕಾಗುವುದು" ಎಂದು ಬಚ್ಚಲದಿಂದ ಹೊರಬಿದ್ದು ದೇವರ ಮುಂದೆ

ಬಂದು ಕುಳಿತರು.

ಗುರುಗಳು ಪೂಜೆಯಲ್ಲಿ ತೊಡಗಿದ್ದರು. ಕೈಗಳು ನೀರನ್ನು ಆಚಮಿಸುತ್ತಿದ್ದುವು. ಅರ್ಘ್ಯವನ್ನು ಬಿಡುತ್ತಿದ್ದುವು. ಕಣ್ಣಿಗೆ ಹಚ್ಚಿಕೊಳ್ಳುತ್ತಿದ್ದುವು. ಎಡಗೈಯೊಳಗಿನ ತೀರ್ಥ ಸವುಟು ಥಾಲಿಯೊಳಗಿನ ನೀರನ್ನು ಎತ್ತಿ ಎತ್ತಿ ಬಲಗೈ ಬೆರಳ ಮೇಲೆ ಸುರಿಯುತ್ತಿದ್ದುವು. ಗುರುಗಳ ದೇಹದಲ್ಲಿ ಹೋದ ನೀರು ಅಲ್ಪ. ನೆಲಕ್ಕೆ ಬಿದ್ದು ಹರಿವ ನೀರು ಇನ್ನೂ ಹೆಚ್ಚು. ಯಾವ ಪರಿಣಾಮವೂ ಆಗಲಿಲ್ಲ. ಸವುಟು ಒಂದು ಹನಿ ನೀರನ್ನು ಸಹ ಕುಡಿಯಲಿಲ್ಲ. ಇದಕ್ಕೂ ಹೆಚ್ಚಾಗಿ ಕಲ್ಯಾಣಿಯ ಕಣ್ಣಿಂದ ನೀರು ಹರಿದುವು. ಕೊನೆಗೆ ಹೇಗೋ ಮಂತ್ರ–ತಂತ್ರ–ಸಂಧ್ಯಾವಂದನೆಯನ್ನು ಮುಗಿಸಿದರು. ಗಂಟೆಯನ್ನು ಬಾರಿಸಿದರು. ಮಂಗಳಾರತಿ ಮಾಡಿದರು. ಎದ್ದು ಉದ್ದಂಡ ನಮಸ್ಕಾರ ಹಾಕಿದರು. ಇಷ್ಟು ಭಯ–ಭಕ್ತಿಭಾವದಿಂದ ದೇವತಾರ್ಚನೆಯನ್ನು ಮಾಡಿದರೂ ಅವರ ಮೈಮೇಲಿನ ಒಂದು ಕೂದಲು ಸಹ ಮೆತ್ತಗಾಗಲಿಲ್ಲ. ಕೋಪದ ಶಾಖದಿಂದ ಅವರ ಮೈಮೇಲಿನ ಕೂದಲು ಒಣಗಿ, ಸೆಟೆದು ನಿಂತಿದ್ದುವು. ಕೊನೆಗೆ ಕೆಂಪು ಮೂಗನ್ನು ಒರಸಿಕೊಂಡು ಎದ್ದರು.

ಕರುಣನು ತಾಟು ಹಾಕಿದನು. ನೀರು ತುಂಬಿ ಇಟ್ಟನು. ಮಣೆ ಹಾಕಿದನು. ಉಪ್ಪು ಬಡಿಸಿದನು. ಒಂದು ಕಡೆಗೆ ಸುಮ್ಮನೆ ಕುಳಿತನು.

ಕಲ್ಯಾಣಿಯು ಒಲೆಯ ಮುಂದೆ ಕೆತ್ತಿದ ದುಃಖದ ಗೊಂಬೆಯಂತೆ ಸುಮ್ಮನೆ ಕುಳಿತಿದ್ದಳು. ಗುರುಗಳು ಮಣೆಯ ಮೇಲೆ ಬಂದು ಕುಳಿತರು.

"ಇನ್ನು ಬಡಿಸಬಹುದು" ಕರುಣನು ತಾಯಿಯನ್ನು ಎಚ್ಚರಿಸಿದನು.

ಕಲ್ಯಾಣಿಯು ಕಣ್ಣು ಒರಸಿಕೊಂಡು, ತಣ್ಣೀರಿನಿಂದ ಮುಖ ತೊಳೆದುಕೊಂಡು ಬಂದಳು. ಕರುಣನಿಗೆ ತಾಯಿಯು ಅತ್ತುದು, ತಂದೆಯವರು ಅತಿಯಾಗಿ ಛೀಮಾರಿ ಮಾಡಿದುದು ಸ್ಪಷ್ಟವಾಯಿತು. ನಡುನಡುವಿನ ಒಂದೆರಡು ಸಾಮಾನ್ಯ ಶಬ್ದಗಳು ಕೇಳಬಂದಿದ್ದುವು. ಹೆಚ್ಚು ಮಾತಾಡದೆ ಸುಮ್ಮನಿದ್ದನು.

ಕಲ್ಯಾಣಿಯು ತುಪ್ಪವನ್ನು ಹಾಕಿದಳು. ಕರುಣನ ಎಲೆಯಲ್ಲಿ ಒಂದಿಷ್ಟು ಹೆಚ್ಚು ಬಿದ್ದಿತು. ಗುರುಗಳು ಇದನ್ನು ನೋಡಿದರು. ಅನ್ನ–ಪಲ್ಲೆ–ಹುಳಿಯನ್ನು ಹಾಕಿದಳು. ಊಟವು ಆರಂಭವಾಯಿತು.

ಗುರುಗಳು ಮಾತಾಡದೆ ತುತ್ತುಗಳನ್ನು ನುಂಗಹತ್ತಿದರು. ಕರುಣನೂ ಬಾಯಿ ಹೊಲಿದುಕೊಂಡಿದ್ದನು. ಕಲ್ಯಾಣಿಯು ಇದನ್ನು ಹಾಕಲೇ? ಇದು ಬೇಕೇ? ಎಂದು ಕೇಳಿದಾಗ ಹ! ಹೂ! ಎಂದು ನುಡಿಯುತಿದ್ದನು. ಊಟ ಮುಗಿಯುವಷ್ಟರಲ್ಲಿ ಗುರುಗಳು ಇಷ್ಟನ್ನು ಗ್ರಹಿಸಿದರು.

ಕಲ್ಯಾಣಿಯು ಕರುಣನಿಗೆ ತುಪ್ಪವನ್ನು ಹೆಚ್ಚು ಹಾಕಿದಳು. ರೊಟ್ಟಿಯನ್ನು ಆಗ್ರಹದಿಂದ ಬಡಿಸಿದಳು. ಕಡೆಯ ಅನ್ನವನ್ನು ನನಗೆ ಕಡಿಮೆ ಹಾಕಿದಳು. ಮೊಸರಿನ ಮೇಲಿನ ಕೆನೆಯು ಅವನಿಗೇ ಬಿದ್ದಿತು. ಊಟದಲ್ಲಿ ಭೇದಭಾವವನ್ನು ಮಾಡುವವಳು.

ಆದರೆ ಆ ಕಲುಷಿತ ಮನಸು ಈ ಎರಡು ಸಂಗತಿಗಳನ್ನು ಹೊಟ್ಟೆಯಲ್ಲಿ ಇಟ್ಟುಕೊಳ್ಳಲಿಲ್ಲ. ಕೈತೊಳೆಯಲು ಏಳುವ ಮುಂದೆ "ಅವನಿಗೆ ಇಷ್ಟು ತಿನ್ನಲು ಹಾಕಿ ಪೈಲವಾನನ್ನಾಗಿ ಮಾಡಬೇಕೆಂದು ನನ್ನ ಇಚ್ಛೆಯಿಲ್ಲ. ಅವನು ಸಾಮಾನ್ಯರಂತೆ ನವಕರಿಯನ್ನು ಮಾಡುತ್ತ ಉಪಜೀವಿಸಬೇಕೆಂದು ಆಶಿಸುವೆ" ಎಂದು ನುಡಿದು ಮೇಲೆದ್ದರು.

ಮಾತು ತೀರ ಕಠೋರವೆನಿಸಿತು. ಹೇಸಿಕೆಯೂ ಬಂದಿತು. ಮಗನ ಊಟದ ಬಗ್ಗೆ ತಂದೆಯು ಹೀಗೆ ಆಡಿಕೊಳ್ಳಬಹುದೇ! ಛೀ ಛೀ....ಎಂದಳು. ಗುರುಗಳಲ್ಲಿ ಎಷ್ಟೋ ಉದಾತ್ತ ಗುಣಗಳಿರಬಹುದು, ಉದಾತ್ತ ಭಾವನೆಗಳಿರಬಹುದು! ಆದರೆ ಅವೆಲ್ಲ ಕವಡಿಯ ಬೆಲೆಯ ವಾದುವು. ಗಂಡನ ಬಗ್ಗೆ ತಿರಸ್ಕಾರ ಭಾವನೆಯನ್ನು ತಳೆದಳು.

ಕರುಣನು ಕೈತೊಳೆಯಲು ಎದ್ದಿರಲಿಲ್ಲ. ಕಲ್ಯಾಣಿಯು ಅವನನ್ನು ಸಖೇದಾಶ್ಚರ್ಯದಿಂದ ನೋಡಿದಳು. ಅವನ ಮುಖವು ಸಪ್ಪೆಯಾಗಿದ್ದಿತು. ನೋಡಿ ತಾಳಲಾರದೆ "ನೀನು ಏಳು. ಅವರು ಏನೇ ಅನ್ನಲಿ. ನನಗೆ ಸಮಾಧಾನವಾಗುವವರೆಗೆ, ನೀನು ತಿಂದಷ್ಟು ಹಾಕುವೆ. ಮನಸಿಗೆ ಹಚ್ಚಿಕೊಳ್ಳಬೇಡ ಏಳು" ಎಂದಳು.

"ಹೀಗೆ ಹಾಕುತ್ತ ಹೋದರೆ ನನ್ನ ತಿಂಗಳ ಸಂಬಳವನ್ನು ಹದಿನೈದು ದಿನಗಳಲ್ಲಿ ತೀರಿಸುವನು." ಗುರುಗಳು ಕೈತೊಳೆದು ನಿಂತು ನುಡಿದರು.

"ನಿಮಗೆ ಎಷ್ಟು ಜನರಿಗೆ ಹೊಟ್ಟೆತುಂಬ ಊಟಕ್ಕೆ ಹಾಕುವ ಸಾಮರ್ಥ್ಯವಿದೆ ಅಷ್ಟು ಜನರನ್ನು ಮನೆಯಲ್ಲಿ ಇಟ್ಟುಕೊಂಡು ಮಿಕ್ಕವರನ್ನು ಹೊರಗೆ

ಹಾಕಿರಿ " ಎಂದು ಕಲ್ಯಾಣಿ ಸಂತಾಪದಿಂದ ನುಡಿದಳು.

" ಮಿತಿಯಿಂದ ಮತ್ತು ಜೀವಧಾರಣಕ್ಕೆ ಸಮನಾಗುವಂತೆ ನಿನ್ನ ತಾಯಿ ಕಲಿಸಿದ್ದರೆ ನೀನು ಹೀಗೆ ಮಾತಾಡುತ್ತಿರಲಿಲ್ಲ. ಅಜ್ಞಾನದಲ್ಲಿ ಬೆಳೆದು ಬಂದ ಮೇಲೆ ಏನೆಂದರೇನು ? "

" ತಾಯೀ ಸುಮ್ಮನಿರು. ಮಾತಿಗೆ ಮಾತು ಬೆಳೆದು ಆಗುವುದೇನು ! ಇನ್ನಷ್ಟು ದುಃಖ, ಸಂತಾಪ." ಕರುಣನು ನುಡಿದನು.

ಗುರುಗಳು ಹೊರಗೆ ಹೋದರು.

" ನನ್ನ ದುರ್ದೈವವನ್ನು ಯಾರೂ ಕಸಿದುಕೊಳ್ಳುವುದಿಲ್ಲ. ನಾನೇ ಅನುಭವಿಸಬೇಕು. ಸುಮ್ಮನಾಗುವೆ " ಎಂದು ಅಳುತ್ತ ಅಡಿಗೆಯನ್ನು ಮುಚ್ಚಿ ಇಡಹತ್ತಿದಳು.

" ನಿಮ್ಮ ಊಟ ? " ಕರುಣನು ಕೇಳಿದನು.

" ಇಲ್ಲ."

" ನಾನು ಕೇಳಲಾರೆ."

" ನನಗೆ ಹೊಟ್ಟೆ ತುಂಬಿದೆ."

" ನೀವು ಊಟ ಮಾಡಲೇಬೇಕು. ನೀವು ಊಟ ಮಾಡದಿದ್ದರೆ ಇಂದು ರಾತ್ರಿ ನಾನು ಊಟಕ್ಕೆ ಬರುವುದೇ ಇಲ್ಲ. ನಿಜವಾಗಿ ? " ಎಂದು ಗಟ್ಟಿಯಾಗಿ ನುಡಿದನು.

ಕಲ್ಯಾಣಿಯು ವಿಚಾರದ ಗೊಂದಲದಲ್ಲಿ ಬಿದ್ದಳು. ಆದರೂ " ಹಸಿವೆ ಇಲ್ಲ. ಮಾತುಗಳಿಂದ ಹೊಟ್ಟೆ ತುಂಬಿತು " ಎಂದು ಕಣ್ಣೊರಸಿಕೊಳ್ಳುತ್ತ ನುಡಿದಳು.

" ಮಾತುಗಳಿಂದ ಹೊಟ್ಟೆ ತುಂಬುವಂತಿದ್ದರೆ ನನಗೆ ಅವುಗಳನ್ನೇ ನಾಳೆಯಿಂದ ಹಾಕುತ್ತ ಬನ್ನಿರಿ. ಇದರಿಂದ ನ್ಯಾಯದ ಒಂದು ಭಾಗವಾದರೂ ಶಾಂತವಾದೀತು. ಏಳಿರಿ. ಊಟ ಮಾಡ ಏಳಿರಿ " ಎಂದು ಆಗ್ರಹ ಮಾಡಿದನು.

ಕಲ್ಯಾಣಿಗೂ ಗೊತ್ತು. ತನ್ನನ್ನು ಗೌರವದಿಂದ, ಪೂಜ್ಯಭಾವನೆಯಿಂದ ಕಾಣುವವ ಈ ಮನೆಯಲ್ಲಿ ಕರುಣನೊಬ್ಬನೇ ! ಅವನ ಪ್ರೀತಿಯನ್ನು ಹರಿದು ಕೊಂಡು ಇಲ್ಲಿ ಒಂದು ಕ್ಷಣ ಬದುಕಲು ನೆರಳಿಲ್ಲ. ನೆಮ್ಮದಿಯಿಲ್ಲ. ಎಂದು

"ಮಾಡುವೆ. ಒಂದಿಷ್ಟು ಶಾಂತಳಾಗಿ ಮಾಡುವೆ" ನುಡಿದಳು.

ಕರುಣನು ಮತ್ತೆ ಕೆಲಹೊತ್ತು ಕುಳಿತನು. ಕಲ್ಯಾಣಿಯು ತನ್ನ ಊಟದ ಸಿದ್ಧತೆಯನ್ನು ಮಾಡಹತ್ತಿದಳು. ಅನ್ನವನ್ನು ಎಲೆಯಲ್ಲಿ ಬಡಿಸಿಕೊಂಡಳು. ಒಂದು ತುತ್ತು ಬಾಯಿಗೆ ಹಾಕಿಕೊಂಡಳು. ಕರುಣನು ತನ್ನ ಕೋಣೆಗೆ ಬಂದನು.

ಸಂಜೆಯವರೆಗೆ ಮನೆಯು ಮೂಕವಾಗಿತ್ತೆಂದರೂ ಸರಿ. ಕಲ್ಯಾಣಿ ತನ್ನ ಕೆಲಸ–ಕಾರ್ಯದಿಂದ ಅಡಿಗೆಯ ಮನೆಯಲ್ಲಿಯೇ ತೊಡಗಿದ್ದಳು. ಗುಣವಂತಿಯು ಕೆಲಸವನ್ನು ತೀರಿಸಿ ಮನೆಗೆ ಹೋದಳು. ಅವಳು ಬೇಕೆಂತಲೇ ನಡುವೆ ಒಂದೆರಡು ಮಾತುಗಳನ್ನು ಎತ್ತಿದಳು. ಹಾ! ಹೂ ಉತ್ತರದಿಂದ ಮುಗಿಸಿದ್ದಳು. ಕರುಣನು ತನ್ನ ಕೋಣೆಯನ್ನು ಬಿಟ್ಟು ಹೊರಗೆ ಬರಲಿಲ್ಲ. ಮಧ್ಯಾಹ್ನದ ಒಂದಿಷ್ಟು ವಾಮಕುಕ್ಷಿ, ಓದು, ಮುಖಮಾರ್ಜನದಿಂದ ಸಂಜೆಯು ಬಾಗಿಲಿಗೆ ಬಂದನು.

ಗುರುಗಳಿಗೆ ಅಂದು ಬಿಡುವು ಇದ್ದಿತು. ಮನೆಯಲ್ಲಿಯೇ ಇದ್ದರು. ಕೋಣೆಯಲ್ಲಿ ಒಬ್ಬರೇ ಕುಳಿತು, ಮಲಗಿ ವೇಳೆಗಳೆದರು. ಇಳಿಹೊತ್ತಿನ ಚಹ ಸಿದ್ಧವಾಯಿತು. ಕಲ್ಯಾಣಿ ಕರುಣನ ಕೋಣೆಗೆ ಬಂದು ಹೇಳಿದಳು. ಕರುಣನು ಸುಮ್ಮನೆ ಕುಳಿತನು.

"ಚಹ ಸಿದ್ಧವಾಗಿದೆ. ಏಳು" ಎಂದಳು.

"ತಂದೆಯವರಿಗೆ ನಾನೇ ಕೊಟ್ಟು ಬರಬೇಕೇ?" ಎಂದು ಕೇಳಿದನು.

"ಅಹುದು."

"ನೀವು?"

"ನೀನು ಕೊಡದಿರುವುದು, ಕೊಡುವುದಕ್ಕಿಂತಲೂ ಭಯಾನಕವಾಗುವಂತಿದ್ದರೆ ಕೊಡಬಾರದೇಕೇ?" ಎಂದಳು.

"ನನಗೆ ತಿಳಿಯಲಿಲ್ಲ."

"ಕೊಡುವುದು ಒಳ್ಳೆಯದು. ಏಳು, ಬೇಗ ಬಾ."

ಕರುಣನು ಅನಿವಾರ್ಯವಾಗಿ ಎದ್ದನು. ಮುಖ ತೊಳೆದುಕೊಂಡನು. ಚಹ ತಂದು ತಂದೆಗೆ ಕೊಟ್ಟನು. ಅವರು ಏನನ್ನೂ ಮಾತಾಡಲಿಲ್ಲ. ತಾನು ತನ್ನ ಚಹವನ್ನು ಕೋಣೆಗೆ ತೆಗೆದುಕೊಂಡು ಹೋಗಿ ಕುಡಿದನು. ತನ್ನ

ಮತ್ತು ತಂದೆಯುವರ ಕಪ್ಪು–ಬಸಿಯನ್ನು ಒಳಗೆ ತಂದಿಟ್ಟನು. ಗುರುಗಳು ತಿರುಗಾಡಿಕೊಂಡು ಬರಲು ಹೊರಗೆ ಹೋದರು.

ಮನೆಯಲ್ಲಿ ಕರುಣ–ಕಲ್ಯಾಣಿ ಇಬ್ಬರೇ ಉಳಿದರು. ಒಬ್ಬ ಮುಂದಿನ ಮನೆಯ ಕೋಣೆಯಲ್ಲಿ. ಇನ್ನೊಬ್ಬರು ಹಿತ್ತಲ ಕಡೆಯ ಅಡಿಗೆಯ ಮನೆಯಲ್ಲಿ. ಇಬ್ಬರೂ ವಿಷಾದದಿಂದ ದುಃಖಿತರಾಗಿದ್ದರು. ಕಲ್ಯಾಣಿಗೆ ಮಾತು ಬೇಡಾಗಿದ್ದಿತು. ಆದರೆ ದುಃಖಭಾರವನ್ನು ತೋಡಿಕೊಂಡು ಮನಸಿಗೆ ನೆಮ್ಮದಿಯನ್ನು ತಂದುಕೊಳ್ಳಬೇಕೆಂದು ಆಶಿಸುತ್ತಿದ್ದಳು. ಕರುಣನಿಗೆ ಒಣ ಹರಟೆ ಬೇಕಿರಲಿಲ್ಲ. ತಾಯಿಗಾದ ದುಃಖವನ್ನು ಇಳಿಸಬೇಕು, ಅವಳಿಗೆ ಒಂದೆರಡು ಶಾಂತಿ ಸೂಚಕ ಶಬ್ದಗಳನ್ನು ಹೇಳಬೇಕು ಎಂದು ತವಕಿಸುತ್ತಿದ್ದನು. ಆದರೆ ಇಬ್ಬರೂ ದ್ವಾರಪಾಲಕರಾಗಿ, ಗೃಹವನ್ನು ರಕ್ಷಿಸುವವರಂತೆ ಆತುದಿಗೊಬ್ಬರು, ಈತುದಿಗೊಬ್ಬರು ಕುಳಿತಿದ್ದರು. ಒಂದು ಕರಿಯ ಬೆಕ್ಕು ಮುಂದಿನ ಬಾಗಿಲಿನಿಂದ ಹೊಕ್ಕು ಹಿತ್ತಲ ಕಡೆಗೆ ಸರಾಗವಾಗಿ ಪಾರಾಯಿತು. ಇನ್ನೊಂದು ಬಿಳಿಯ ಬೆಕ್ಕು ಹಿತ್ತಲ ಬಾಗಿಲಿನಿಂದ ನುಗ್ಗಿ ಮುಂದಿನ ಬಾಗಿಲಿಗೆ ಬಂದಿತು. ಹೊಸತಿಲ ಮೇಲೆ ಕುಳಿತು ಮೀಸೆಯನ್ನು ತಿಕ್ಕುತ್ತ ಕರುಣನ ಕಡೆಗೆ ನೋಡಿತು. ಇದು ಏನನ್ನೋ ತಿಂದು ಬಂದಿದೆ, ಎಂದು ಕರುಣನಿಗೆ ಭಾಸವಾಯಿತು. ಎದ್ದು ಬಂದನು. ಬೆಕ್ಕು ಓಡಿತು. ಮನೆಯ ಒಳಗೆ ಬಂದನು. ಕಲ್ಯಾಣಿಯೂ ಎದ್ದು ಬಾಗಿಲಿಗೆ ಬಂದಳು.

"ಮನೆಯಲ್ಲಿ ಬೆಕ್ಕುಗಳು ನಿರಾತಂಕವಾಗಿ ಓಡಾಡುತ್ತವೆ. ನೀವು ಎಚ್ಚರಿರುವಿರೋ, ಇಲ್ಲವೋ ನೋಡಬಂದೆನು." ಕರುಣನು ನುಡಿದನು.

"ನಾನೂ ಇದಕ್ಕಾಗಿಯೇ ಬಂದಿದ್ದೆ. ಇಷ್ಟೊಂದು ಬಿಸಿಬಿಸಿ ಹಣ್ಣನ್ನು ತಿಂದಮೇಲೆ ನಿದ್ದೆ ಬರುತ್ತಿದ್ದರೆ ನನ್ನಂತಹ ಭಾಗ್ಯವಂತಳು ನಾನೇ ಸರಿ" ಎಂದಳು.

"ಇನ್ನೂ ದುಃಖಿಸುವಿರಾ?"

"ಬಿಸಿಯಾದ ಮೈಯೊಳಗಿನ ರಕ್ತ ಇನ್ನೂ ಆರಿಲ್ಲ."

"ಅದು ಬೇಗ ಆರದಿರಲಿ."

"ನನಗೆ ನೂರು ವರುಷ ಆಯುಷ್ಯವಾಗಲೆಂದು ಆಶಿಸುವೆಯಾ?"

"ಏಕೆ ಆಶಿಸಬಾರದು?"

" ತಾಯಿಗೆ ಇದೊಂದು ಮಗನ ಶಾಪವೆಂದು ತಿಳಿಯುವೆನು."

" ಈ ಶಾಪದಿಂದ ಮಗನಿಗೆ ಪಾಪವಿಲ್ಲವಷ್ಟೇ ? "

" ನನಗೆ ಸಂಕಟವನ್ನು ಕೊಟ್ಟರೂ ನಿನಗೆ ಅಹಿತವನ್ನು ಬಯಸಲಾರೆ. ಪಾಪಲೇಪವಾಗುವಂತೆ ನಡೆಯಲಾರೆ."

" ಮಗನನ್ನು ಹೀಗೆ ರಕ್ಷಿಸುವಿರಾ ? "

" ಅಹುದು. ನನ್ನ ರಕ್ಷಣೆಯನ್ನು ನೀನು ಮಾಡಬೇಕು."

" ರಕ್ಷಿಸುವೆ."

" ಹೀಗೆ ಒಮ್ಮೆಲೆ ವಚನವೀಯಬೇಡ. ಒಂದಿಷ್ಟು ವಿಚಾರಿಸು."

" ವಿಚಾರಿಸಲು ಆಸ್ಪದವೇಕೆ? "

" ಹೀಗೆ ತವಕಿಸಬೇಡ. ಇಲ್ಲಿ ಬಾ. ಕುಳಿತಿರು. ಎರಡು ಮಾತು ಹೇಳುವೆ. ಆಮೇಲೆ ಮಾತಾಡು. ವಚನ ಕೊಡು. ನಿನ್ನ ಅವಸರದ ಉತ್ತರ ದಿಂದ ನನಗೆ ಲಾಭವಿಲ್ಲ. ಸಮಾಧಾನವಿಲ್ಲ. ಕೂಡು " ಎಂದು ಒಳಮನೆಗೆ ಕರೆದುಕೊಂಡು ಹೋಗಿ, ಮಣೆ ಹಾಕಿ ಕೂಡಿಸಿದಳು. ಅವನ ಎದುರು ಒಂದಿಷ್ಟು ಅಂತರದ ಮೇಲೆ ತಾನೂ ಕುಳಿತಳು.

ಕರುಣನು ತಾಯಿಯ ಮುಖವನ್ನು ಏಕಚಿತ್ತದಿಂದ ನೋಡಹತ್ತಿದನು. ಕಲ್ಯಾಣಿಯ ದುಃಖ ತುಂಬಿಬಂದಿತು. ನುಂಗಿದಳು. ಕಣ್ಣಲ್ಲಿ ನೀರು ತೇಲಿ ಬಂದರೂ ಹಿಂಡಿ ಒರಸಿಕೊಂಡಳು.

" ನೀವು ಒಂದಿಷ್ಟು ಸಮಾಧಾನ ಹೊಂದಿ ಹೇಳಿದರೆ ನನಗೂ ಒಳ್ಳೆಯದು." ಕರುಣನು ಮೆಲ್ಲಗೆ ನುಡಿದನು.

" ಅಹುದು. ನಾನು ದುಃಖದ ಹಿನ್ನೆಲೆಯನ್ನಿಟ್ಟುಕೊಂಡು ಮಾತಾಡಿದರೆ ಆ ಭಾವನೆಯ ಆವೇಶದಲ್ಲಿ ನೀನು ವಿಚಾರಿಸದೆ ವಚನ ಕೊಡಬಲ್ಲೆ. ದುಃಖವನ್ನು ಮರೆಯುವೆ. ಶಾಂತಳಾಗಿ, ವ್ಯಾವಹಾರಿಕಳಾಗಿ ಹೇಳುವೆ. ಇದರಿಂದ ಬುದ್ಧಿಯು ಸ್ಥಿಮಿತದಲ್ಲಿ ಉಳಿದು ಯೋಗ್ಯ ಉತ್ತರವನ್ನು ಗ್ರಹಿಸಬಹುದು. ಆ ಉತ್ತರವು ಕೊನೆಯವರೆಗೂ ಕ್ರಿಯಾರೂಪದಲ್ಲಿ ನಿಂತೀತು. ನಿಲ್ಲು " ಎಂದು ಎದ್ದು ಮುಖವನ್ನು ತೊಳೆದುಕೊಂಡು ಬಂದು ಕುಳಿತಳು.

ಕರುಣನು ವಿಧೇಯ ಪುತ್ರನಂತೆ ಕುಳಿತಿದ್ದನು. ಕಲ್ಯಾಣಿಯು ಐದಾರು ಉಸಿರುಗಳನ್ನು ಎಳೆದು ಶಾಂತಳಾಗಿ

" ಮೊದಲನೆಯ ಒಂದು ಮಾತು ನಡಿಸಿ ಕೊಡು " ಎಂದಳು.

" ಏನು ? " ಕರುಣನು ಕೇಳಿದನು.

" ನಾನು ನಿನ್ನ ತಾಯಿ."

" ಅಹುದು."

" ಮಲತಾಯಿ."

" ಹಾಗೆ ಅನ್ನಲಾರೆ."

" ಇದ್ದುದು ನಿಜ. ಒಪ್ಪಬೇಕು."

" ಇದೇನು ತಾಯೀ ? "

" ಏನಿಲ್ಲ. ನನ್ನ ಮತ್ತು ನಿನ್ನ ಹಿತಕ್ಕೆ ಹೇಳುವೆ. ಮಲತಾಯಿ."

ಮುಖವನ್ನು ಕೆಳಗೆ ಹಾಕಿ ಕುಳಿತನು.

" ಒಪ್ಪು. ನಾನು ನಿನ್ನನ್ನು ಬಿಡಲಾರೆ. ಇನ್ನಷ್ಟು ಹತ್ತರ ಕರೆದು ಕೊಳ್ಳಲು ಹೀಗೆ ಹೇಳುವೆ. ಒಪ್ಪು. ಒಪ್ಪಿದಂತೆ ಮಾಡು."

" ಹ ! " ಕಷ್ಟದಿಂದ ನುಡಿದನು.

" ಲೌಕಿಕರ ದೃಷ್ಟಿಯಲ್ಲಿ ಇದು ಸತ್ಯ."

" ಹ ! "

" ನಾನು ಮಲತಾಯಿ ಎನ್ನಿಸಿಕೊಳ್ಳಬೇಕೆಂದು ನನಗೆ ಇಚ್ಛೆಯಿಲ್ಲ. ಸೇರಿಕೆಯೂ ಇಲ್ಲ."

ಕರುಣನು ಅವಳ ಮುಖವನ್ನು ನೋಡಿದನು.

" ನಾನು ನಿಜವಾದ ನಿನ್ನ ತಾಯಿಯೆಂದು ತಿಳಿ. ನಿನ್ನನ್ನು ನೋಡಿದಾ ಕ್ಷಣ ನನ್ನ ಸ್ತನ್ಯದಲ್ಲಿ ಅದೇ ಆವೇಶವಾಗುವುದು. ನನ್ನ ಹೊಟ್ಟೆಯಿಂದ ಹುಟ್ಟಬಹುದಾದ ಎಂಟು-ಹತ್ತು ಮಕ್ಕಳ ಆಶಯವನ್ನು ನಿನ್ನೊಬ್ಬನಲ್ಲಿಯೇ ಕಾಣಬೇಕೆನಿಸುವುದು. ನೀನು ಮನೆಗೆ ತಡಮಾಡಿ ಬಂದರೆ ಹೊಟ್ಟೆ ಉರಿ ದಂತಾಗುವುದು. ನೀನು ಊಟ ಮಾಡದಿದ್ದರೆ ನನ್ನ ಕರುಳಿನಲ್ಲಿ ಚುರುಚುರು ಎನಿಸುವುದು. ನಿನ್ನ ಬಟ್ಟೆ–ಬರೆ, ಹಾಸಿಗೆ–ಹೊದಿಕೆಗಳ ಹೊಲಸು ನನ್ನ ನಿಷ್ಕಾಳಜಿತನದ ಕುರುಹೆನಿಸುವುದು. ನಿನ್ನ ಬಸಡ್ಡೆ ಮುಖವು ನನ್ನ ಕುರೂಪ ವೆನಿಸುವುದು. ಅದೇ ನೀನು ನಕ್ಕರೆ ನನಗೆ ಮಲ್ಲಿಗೆಯ ಮಾಲೆಯನ್ನು ಕಟ್ಟಿದಂತೆ ಸಂತೋಷ. ನೀನು ಹಾಡಿದರೆ ನನ್ನ ಅಕ್ಕರೆ. ಹೀಗೇಕೆ ಆಗು

ವುದೋ ನಾನರಿಯೆ. ಈ ಮನೆಗೆ ನಾನು ದುಃಖದಿಂದಲೇ ಬಂದೆ. ಇದು ನಿಜವಾದ ಸಂಗತಿಯು. ಆದರೆ ಒಂದು ದಿನ ನನಗೆ ಹೀಗೆ ಭಾವನೆಯಾಯಿತು, ಅದು ಬಲಿಯಿತು. 'ಆ ಬಲದ ಮೇಲೆ ಈ ಮನೆಯಲ್ಲಿ ಕಾಲೂರಿ ನಿಂತಿರುವೆ, ಈ ಜೀವ ಅದನ್ನೇ ಕಾಯ್ದುಕೊಂಡು ಹೋಗುವುದು ಅದು ತಪ್ಪಿದ ದಿನ ನಾನು ನಾನಲ್ಲ. ಕಲ್ಯಾಣಿಯಲ್ಲ. ನಿನ್ನ ತಾಯಿಯಲ್ಲ. ನಾನಾರು ಎಂಬುದೇ ನನಗೆ ತಿಳಿಯದು " ಎಂದು ನುಡಿದು ಸುಮ್ಮನಾದಳು.

"ತಾಯೀ, ನನ್ನ ತಾಯಿ ಇಷ್ಟು ಮಾತಾಡುತ್ತಿದ್ದಳೋ, ಇಲ್ಲವೋ ನನಗೆ ತಿಳಿಯದು. ಅವಳ ಸ್ವಭಾವ, ಪ್ರೀತಿಯ ಮಹಾತ್ಮೆಯನ್ನು ಅರಿಯುವ ಪೂರ್ವದಲ್ಲಿ ಕಳೆದುಕೊಂಡೆನು ! ಅನಾಥನಾದೆನು...." ಕುತ್ತಿಗೆಯ ಶಿರಗಳು ಉಬ್ಬಿದವು.

" ಕರುಣ...."

" ನೀವು ಬಂದಿರಿ. ತಾಯಿಯಾಗಿಯೇ ಬಂದಿರಿ. ತಾಯಿಯ ಹೃದಯವು ಇಷ್ಟು ದೊಡ್ಡದಿರುವದೆಂದು ತಿಳಿಸಿದಿರಿ. ನಾನು ನಿಮಗೆ ಅನನ್ಯರೀತಿಯಿಂದ ಶರಣು ಬಂದಿರುವೆನು." ನಮಸ್ಕರಿಸಹೋದನು.

ಕಲ್ಯಾಣಿಯು ಅವನನ್ನು ಎತ್ತಿಕೊಂಡು ತೋಳುಗಳಲ್ಲಿ ಹಿಡಿದು ಕೆನ್ನೆಯ ಮೇಲೆ ಕೈಗಳನ್ನು ಎಳೆಯುತ್ತ " ಕರುಣ, ನೀನು ನನ್ನ ಮಗ" ಎಂದಳು.

" ಅಹುದು ತಾಯೀ."

" ನಾನು ನಿಜವಾದ ನಿನ್ನ ತಾಯಿಯಾಗಬೇಕಾದರೆ ನಿನ್ನ ಸಂಕೋಚದ ಪರದೆಯನ್ನು ಹರಿದುಹಾಕು."

" ಏನು ? "

" ನಾನು ಪರಕೀಯಳೆಂದು ಇನ್ನೂ ತಿಳಿದಿರುವೆ."

" ಏನು ತಾಯೀ ? ತಪ್ಪಿದ್ದರೆ ಕ್ಷಮಿಸಿರಿ."

" ನನ್ನ ಮಗನು ತಪ್ಪಲಾರನು." ಒಂದಿಷ್ಟು ಹತ್ತರ ಎಳೆದುಕೊಂಡು "ನಾನು ನಿನಗಿಂತ ದೊಡ್ಡವಳಲ್ಲ. ಒಂದು ಪುಸ್ತಕದಲ್ಲಿಯ ನಿನ್ನ ಜನ್ಮದಿನವನ್ನು ನೋಡಿರುವೆ. ನಾವಿಬ್ಬರು ಒಂದೇ ಸಂವತ್ಸರದಲ್ಲಿ ಹುಟ್ಟಿರುವೆವು. ಒಂದೇ ಮಾಸದಲ್ಲಿ ಹುಟ್ಟಿರುವೆವು. ದಿನಗಳಲ್ಲಿ ಅಂತರವಿರಬೇಕು. ಇಷ್ಟರಿಂದ ನಾನು ಹಿರಿಯಳಾಗಲಾರೆ. ಸರಿಸಮಾನರು."

ಕರುಣನು ಕೇಳುತ್ತ ಸುಮ್ಮನೆ ಕುಳಿತಿದ್ದನು.

" ನಿನ್ನ ತಾಯಿಯ ಸಂಗಡ ನೀನು ಬರ್‍ರಿ, ಹೋಗಿರಿ ! ಎಂದು ಮಾತಾಡುತ್ತಿರಲಿಲ್ಲ ಬಾ, ಹೋಗು ! ಎಂದೇ ನುಡಿಯುಬಹುದಿದ್ದಿತು. ನನಗೆ ಬಹುವಚನವನ್ನು ಹಚ್ಚಿ ಸಂಕೋಚಭಾವನೆಯನ್ನು ತರುವೆ. ಇದು ನನಗೆ ಹೇಗೋ ಎನಿಸುವುದು. ನಿನ್ನ ನಿಜವಾದ ತಾಯಿಯಾದ ಮೇಲೆ ತಾಯಿಯ ಸಂಗಡ ನಡೆಯುವ ಸಾಮಾನ್ಯ ಮಕ್ಕಳಂತೆ ನಡೆ. ಅದರಿಂದ ನನಗೆ ಸಂತೋಷ. ಇದರಿಂದ ದೂರ ನಿಂತು ಮಾತಾಡುವ ಮಗನು ತೀರ ಹತ್ತರ ಬಂದಂತೆ, ತೊಡೆಯ ಮೇಲೆ ಕುಳಿತಂತೆ ಆನಂದವಾಗುವುದು. ಇದು ನನ್ನ ಮೊದಲನೆಯ ಸಂದೇಶ."

" ಇದು ಹೇಗೆ ತಾಯೀ ! "

" ಮಾತಾಡುತ್ತ ಹೋಗು. ರೂಢಿಯಾಗುವುದು."

" ಪ್ರಯತ್ನಿಸುವೆ "

" ಅವರು ಏನೇ ಅನ್ನಲಿ. ನೀನು ನನ್ನನ್ನು ಬಿಟ್ಟು ಹೋಗಬಾರದು. ನನ್ನ ಅನುವು–ಆಪತ್ತು, ದುಃಖ–ಸಂತಾಪದ ಯಾವುದೇ ಪ್ರಸಂಗದಲ್ಲಿ ನೀನು ರಕ್ಷಿಸಬೇಕು. ನನ್ನ ರಕ್ಷಣೆಯ ಹೊಣೆ ನಿನ್ನದು. ಇದೇ ಎರಡನೆಯ ಮಾತು."

" ಆಗಲಿ ತಾಯೀ ! "

" ನಾನು ನನ್ನ ತಾಯಿಯ ಮನೆಯನ್ನು ಹರಿದುಕೊಂಡು ಬಂದಿರುವೆ. ಅಲ್ಲಿ ಕಾಲಿಡಲು ನನಗೆ ಗೇಣು ನೆಲವಿಲ್ಲ. ಇದೇ ನನ್ನ ಮನೆ. ನೀನೇ ನನ್ನ ಮಗ. ನಿನ್ನ ಉತ್ಕರ್ಷವೇ ನನ್ನ ಉತ್ಕರ್ಷ! ನಿನ್ನ ಅಪಕರ್ಷವೇ ನನ್ನ ಅಪಕರ್ಷ! ನನ್ನನ್ನು ಏದುಕಿಸಲು, ಮುಳುಗಿಸಲು ನೀನೇ ಕಾರಣನು. ನನ್ನ ತಲೆಯ ಮೇಲೆ ನಿನ್ನ ತಂದೆ ಕಲ್ಲು ಎತ್ತಿಹಾಕಲಿ, ಸಿಡಿಲು ಬೀಳಲಿ ನಿನ್ನ ಮುಖ ನೋಡಿ ಸಹಿಸುವೆ. ನೀನಿಲ್ಲದೆ ಒಂದು ಕಡ್ಡಿ ಕೂಡ ನನ್ನ ಜೀವಕ್ಕೆ ಭಾರ. ಅದಕ್ಕೆ ನನ್ನ ರಕ್ಷಣೆಯ ಭಾರ ನಿನ್ನದು. ವಿಚಾರಿಸಿ ರಕ್ಷಿಸುವೆನೆಂದು ವಚನ ಕೊಡು " ಎಂದು ನುಡಿದಳು.

ತಾಯಿಯ ಆವೇಶಯುಕ್ತ ಮಾತುಗಳನ್ನು ಕರುಣನು ಆಶ್ಚರ್ಯದಿಂದ ಕೇಳುತ್ತಿದ್ದನು. ಭಯದಿಂದ ಕೇಳುತ್ತಿದ್ದನು. ಕಣ್ಣುಗಳನ್ನು ಅರಳಿಸಿ ಹೊರ

ಳಿಸಿ, ಹುಬ್ಬುಗಳನ್ನು ಏರಿಸಿ ಇಳಿಸಿ, ಮೂಗು ಹಿಗ್ಗಿಸಿ ತಗ್ಗಿಸಿ, ಕೈಗಳನ್ನು ಅತ್ತಿತ್ತ ತೂಗಿಸಿ, ಬಾಗಿಸಿ ಒಂದು ಬಗೆಯ ಉನ್ಮಾದಿನಿಯಂತೆ ನುಡಿಯುತ್ತಿದ್ದಳು. ಎದೆಗೆ ಗಟ್ಟಿಯಾಗಿ ಹಿಡಿದದನ್ನು ಬಿಟ್ಟಿರಲಿಲ್ಲ. ಮೇಲಿಂದ ಮೇಲೆ ಕೆನ್ನೆ, ತಲೆ, ಬೆನ್ನುಗಳನ್ನು ತಟ್ಟುತ್ತಿದ್ದಳು. ಮುಖವು ಚೆಂಬಣ್ಣಕ್ಕೆ ತಿರುಗಿದ್ದಿತು. ಬಿಸಿಯುಸಿರು ಮಾತಿನ ಸಂಗಡ ಹೊರಬಿದ್ದು ಕರುಣನ ಮುಖಕ್ಕೆ ಅಪ್ಪಳಿಸುತ್ತಿದ್ದಿತು.

"ಏನೆಂದೆ ಕರುಣ?" ಗಂಭೀರ ಧ್ವನಿಯಿಂದ ಕೇಳಿದಳು. ಧ್ವನಿಯು ಗಡುತರವಿರಲಿಲ್ಲ, ಕರ್ಕಶವಿರಲಿಲ್ಲ. ಶಸ್ತ್ರದಂತೆ ತೀಕ್ಷ್ಣವಾಗಿದ್ದಿತು. ಕಿವಿಗೆ ಅಪ್ಪಳಿಸಿ ಪುನಃ ಪುನಃ ಪ್ರತಿಧ್ವನಿಯನ್ನು ಹುಟ್ಟಿಸುತ್ತಿದ್ದಿತು. ಕರುಣನು ಭಯದಿಂದ, ವಿಸ್ಮಯದಿಂದ—

"ತಾಯೀ, ನಿನ್ನ ಮಾತನ್ನು ಮೀರಲಾರೆ. ನಿನ್ನನ್ನು ರಕ್ಷಿಸುವೆ. ತಾಯಿಯೆಂದೇ ರಕ್ಷಿಸುವೆ. ವಚನವೆಂದು ತಿಳಿ" ಎಂದು ಅವಳ ಪಾದದ ಮೇಲೆ ಕೈಯಿಟ್ಟನು.

ಕಲ್ಯಾಣಿಯು ತನ್ನ ದೇಹದ ಸರ್ವಶಕ್ತಿಯನ್ನು ಕೇಂದ್ರೀಕರಿಸಿ ಕರುಣನನ್ನು ಅಪ್ಪಿಹಿಡಿದಳು. ಅವಳ ಶಕ್ತಿಗೆ ಕರುಣನು ಹಿಂಜರಿದನು. ದೀರ್ಘಶ್ವಾಸನದಿಂದ ಅವಳ ಅಪ್ಪುಗೆಯ ಹಿಡಿತವನ್ನು ತಡೆದನು.

"ಇನ್ನು ಶಾಂತತೆಯು. ಏಳು. ಇದರಿಂದ ಇಬ್ಬರ ರಕ್ಷಣೆಯಾಯಿತು. ಹೆದರಿಕೆ ಇಲ್ಲ" ಎಂದುಬಿಟ್ಟು ಎದ್ದು ನಿಂತಳು.

ಕರುಣನೂ ಎದ್ದು ನಿಂತನು.

ಗುರುಗಳು ಅದೇ ಮನೆಯಲ್ಲಿ ಕಾಲಿಟ್ಟರು.

೧೪

ಅಂದು ಗುರುಗಳು ಹೊರಗಿನಿಂದ ಮನೆಯಲ್ಲಿ ಕಾಲಿಡುವುದಕ್ಕೂ ಕಲ್ಯಾಣಿ ಮತ್ತು ಕರುಣರು ಏಕಾಂತ ಚರ್ಚೆಯಿಂದ ಮೇಲೇಳುವುದಕ್ಕೂ ಗಂಟು ಬಿದ್ದಿತು. ಅದನ್ನು ಗುರುಗಳು ಕಂಡರು. ಮುಂಜಾನೆಯ ಪ್ರಸಂಗವು ಇನ್ನೂ ತಲೆಯಲ್ಲಿ ಸುಳಿದಾಡುತ್ತಿದ್ದಿತು. ಕಲ್ಯಾಣಿಯು ಕರುಣನ ಪಕ್ಷವನ್ನು ವಹಿಸಿ ಆಡಿದ ಕೆಲವು ಬಿರುಸು ಮಾತುಗಳು ಕಿವಿಯಲ್ಲಿ ಗುಂಯ್‌ಗುಡುತ್ತಿದ್ದುವು. ಇವುಗಳಿಂದ ಮನಸು ವಿಕೃತಭಾವನೆಯನ್ನು ತಳೆಯಲು ತಡ ಹಿಡಿಯಲಿಲ್ಲ. ಇವರಿಬ್ಬರಲ್ಲಿ ಯಾವುದೋ ಗುಪ್ತ ಕಾರಸ್ಥಾನವು ನಡೆದಿದೆ ಎಂದು ಸಂಶಯ ಪಟ್ಟರು. ನಿಶ್ಚಯಕ್ಕೂ ಬಂದರು. ಆದರೂ ಅದನ್ನು ಆಗಲೇ ನುಡಿದು ಮನೆಯಲ್ಲಿ ಬೆಂಕಿಯ ಮಳೆಯನ್ನು ಹರಿಸಬಾರದೆಂದು ದೊಡ್ಡ ಮನಸು ಮಾಡಿ ಸುಮ್ಮನಿದ್ದರು. ಅಂದಿನ ರಾತ್ರಿಯ ಊಟ ಮೌನದಲ್ಲಿಯೇ ಸಾಗಿತು. ಮೌನದಿಂದಲೇ ತಮ್ಮ ಹಾಸಿಗೆಯನ್ನು ಸೇರಿದರು. ಕಲ್ಯಾಣಿ ನಿತ್ಯದಂತೆ ತನ್ನ ಹಾಸಿಗೆಯನ್ನು ಅಡಿಗೆಯ ಮನೆಯಲ್ಲಿ ಉರುಳಿಸಿದಳು. ಕರುಣನು ಹೊರಗಿನ ಕೋಣೆಯಲ್ಲಿ ಮಲಗಿದನು.

ಗುರುಗಳು ಹಾಸಿಗೆಯ ಮೇಲೆ ಅಡ್ಡಾಗಿದ್ದರು. ನಿದ್ದೆ ಬಂದಿರಲಿಲ್ಲ. ಅತ್ತಿತ್ತ ಹೊರಳಾಡಿದರು. ಮನೆಯ ದೀಪಗಳೆಲ್ಲ ಶಾಂತವಾದುವು. ಎಲ್ಲರೂ ಮಲಗಿದಂತಾಯಿತು. ಗುರುಗಳು ಎಚ್ಚರಿದ್ದರು. ನಿದ್ದೆ ಬರಲು ಮಾಡಿದ ಪ್ರಯತ್ನಗಳೆಲ್ಲ ವ್ಯರ್ಥವಾದುವು. ವಿಚಾರ ಚಕ್ರ ತಿರುಗ ಹತ್ತಿತು. ಅವರ ಕುಟಿಲ ಕಾರಸ್ಥಾನ ರಾತ್ರಿಯೂ ನಡೆಯಬಹುದೇ? ಬಾಗಿಲ ಸಪ್ಪಳವಾದೀತೆ? ಯಾರಾದರು ನಡೆದಾಡಬಹುದೇ? ಎಂದು ಕಿವಿಗಳನ್ನು ಅರಳಿಸಿಕೊಂಡು ಕುಳಿತರು. ಮಧ್ಯರಾತ್ರಿಯಾದರೂ ನಡೆದಾಡಿದ, ಬಾಗಿಲು ತೆರೆದ ಸಪ್ಪಳವು ಕೇಳಬರಲಿಲ್ಲ. ಇಲಿಗಳು ಮಾತ್ರ ಡಬ್ಬಿಯಿಂದ ಡಬ್ಬಿಗೆ ಜಿಗಿದು ಮನೆಯ ಶಾಂತತೆಯನ್ನು ಭಂಗಪಡಿಸುತ್ತಿದ್ದುವು. ಗುರುಗಳಿಗೆ ಇಷ್ಟರಿಂದ ಸಮಾಧಾನವಾಗಲಿಲ್ಲ. ಕಲ್ಯಾಣಿ ಮಹಾಚಂಡಿ, ಅಷ್ಟೇ ವಂಚಕಳು. ಅವಳು ತನ್ನ ಷಡ್ಯಂತ್ರವು ಬೈಲಿಗೆ ಬರುವಂತೆ ಮಾಡುವ ಹೆಂಗಸಲ್ಲ. ಮಹಾ

ಕಾರಸ್ಥಾನಿ. ಕರುಣನನ್ನು ಹಿತ್ತಲ ಬಾಗಿಲಿನಿಂದ ಕರೆದುಕೊಂಡರೆ ನನಗೆ ತಿಳಿಯುವುದೆಂತು? ಎಲ್ಲವು ಹೊರಗಿನಿಂದ ಹೊರಗೇ ನಡೆದರೆ ಕತ್ತಲೆಯಲ್ಲಿ ಮಲಗಿದ ನಾನು ಇಲ್ಲೇ ಕುಳಿತು ಇಲ್ಲವೆಂದು ನಿರ್ಣಯಿಸುವುದೇ? ಅದನ್ನು ಪರೀಕ್ಷಿಸಬೇಕು. ಎಂದು ಆಲೋಚಿಸಿದರು. ಹೃದಯದಲ್ಲಿ ಹೊಕ್ಕ ಶಕುನಿಯ ಪ್ರವೃತ್ತಿ ಪ್ರೇರೇಪಿಸಿತು. ಇನ್ನಷ್ಟು ಜಾಗ್ರತರನ್ನಾಗಿ ಮಾಡಿತು. ಹಾಸಿಗೆಯ ಮೇಲೆ ಎದ್ದು ಕುಳಿತರು. ಐದಾರು ನಿಮಿಷ ಕಳೆದರು. ಗಾದಿಯ ಮೇಲಿಂದ ಮೆಲ್ಲಗೆ ಸರಿಯುತ್ತ ಹೊರಗಿನ ಬಾಗಿಲ ವರೆಗೆ ಬಂದರು. ಬಾಗಿಲನ್ನು ತೆರದ ಸಪ್ಪಳ ಕೇಳೀತೇ? ಎಂದು ಕಿವಿಹಚ್ಚಿ ನಿಂತರು. ಬಾಗಿಲು ತೆರೆಯಲಿಲ್ಲ. ಮಗನ ನಿದ್ದೆಯ ಗುರುಗುರಾಟ ಕೇಳಬಹುದೇ? ಎಂದು ಮುಂದಿನ ಬಾಗಿಲಿಗಿದ್ದ ತೂತುಗಳನ್ನು ಹುಡುಕಿದರು. ಕೈಯಾಡಿಸಿದರು. ಕೈಗೆ ಹತ್ತಲಿಲ್ಲ. ಕಣ್ಣು ಬಿಟ್ಟು ನೋಡಿದರು. ಬಾಗಿಲ ಪೃಷ್ಟ ಭಾಗದ ತುಂಬ ಕಣ್ಣು ತಿರುಗಿಸಿದರು. ಒಂದೆರಡು ಸಾರೆ ಕುಳಿತರು. ಎರಡು ಮೂರು ಸಾರೆ ಎಡಬಲಕ್ಕೆ ಮಣಿದಾಡಿದರು. ನಾಲ್ಕೈದು ಸಾರೆ ತುದಿ ಬೆರಳ ಮೇಲೆ ನಿಂತರು. ಆದರೂ ಸಿಕ್ಕಲಿಲ್ಲ. ಎರಡು ಬಾಗಲು ಕೂಡುವಲ್ಲಿ ಒಂದಿಷ್ಟು ಬಿರುಕು ಇದ್ದಿತು. ಅಲ್ಲಿ ಕಣ್ಣಿಟ್ಟು ನೋಡಿದರು. ಹೊರಗಿನ ಮಂದಪ್ರಕಾಶ ಕಂಡಂತಾಯಿತು. ಅಹುದು. ಒಂದು ಸಣ್ಣ ತೂತಿದೆ. ಕಿವಿಯ ರಂದ್ರವನ್ನು ಅದಕ್ಕೆ ಹಚ್ಚಿ ಮಗನ ನಿದ್ದೆಯ ಸುಳಿವನ್ನು ಕೇಳ ಬಯಸಿದರು. ೮-೧೦ ನಿಮಿಷಗಳ ವರೆಗೆ ನಿಂತರೂ ಕೇಳಬರಲಿಲ್ಲ. ಅವನು ಹೋಗಿರಬೇಕೇ? ಬಾಗಿಲನ್ನು ತೆರೆಯಲೇ? ತೆರೆದರೆ ಅನಾಹುತವೇನು? ಇದರಿಂದ ಕಳ್ಳನನ್ನು ಹಿಡಿಯಲು ಅನುಕೂಲ. ಆದರೆ ಮಗನು ಕೋಣೆಯಲ್ಲಿ ಇರದಿದ್ದರೆ? ಕಳ್ಳನು ಅಡಿಗೆಯ ಮನೆಯಲ್ಲಿ ಇದ್ದರೆ! ಬಾಗಿಲನ್ನು ತೆರೆದ ಸಪ್ಪಳಕ್ಕೆ ಅವನು ಹಿತ್ತಲ ಬಾಗಿಲಿನಿಂದ ಓಡಿ ಹೋದರೆ! ನನ್ನ ಶ್ರಮ ವ್ಯರ್ಥ. ಆದರೆ ಉಭಯತರ ಮೇಲೆ ಕಟಾಕ್ಷವನ್ನು ಇಟ್ಟಿರುವೆನೆಂದು ಒಣ ಸಂಶಯ! ಕಲ್ಯಾಣಿಯು ಅದನ್ನು ಹೇಗೋ ಸುಧಾರಿಸಿ ಕೊಳ್ಳಬಹುದು. ಹೀಗೆ ಮಾಡುವುದು ಸರಿಯಲ್ಲ. ಕಲ್ಯಾಣಿ ಹಾಸಿಗೆಯ ಮೇಲೆ ಇರುವಳೋ ಇಲ್ಲವೋ ಪರೀಕ್ಷಿಸಬೇಕು. ಅಹದು. ಇದೇ ಸರಿಯಾದುದು ಎಂದು ಅಲ್ಲಿಂದ ನೀಟಾಗಿ ಅಡಿಗೆಯ ಮನೆ ಬಾಗಿಲ ಕಡೆಗೆ ತಿರುಗಿದರು. ಮನೆ ತುಂಬ ಕತ್ತಲೆ. ಕಣ್ಣಲ್ಲಿ ಬೆರಳು

ಚುಚ್ಚಿದರೂ ಕಾಣದಷ್ಟು ಕಪ್ಪು ಕತ್ತಲೆ! ಎದ್ದು ನಡೆಯುವಂತಿಲ್ಲ. ಜೋಲಿಯು ತಪ್ಪಿ ಬೀಳುವ ಆಟ. ಗುರುಗಳು ಕುಳಿತುಕೊಂಡೇ ಸರಿಯ ತೊಡಗಿದರು. ಆದರೆ ದಿಕ್ಕು ತಿಳಿಯುವುದೆಂತು! ದಿಕ್ಕು ತಿಳಿಯಬೇಕಾದರೆ ಬೆಳಕು ಬೇಕು. ಬೆಳಕಿನ ಅಧಿಪತಿಯಾದ ಸೂರ್ಯನು ಬೇಕು. ಬಾಗಿಲನ್ನು ಬಿಟ್ಟು ಗುರುಗಳು ಐದಾರು ಹೆಜ್ಜೆ ಮುಂದೆ ಬಂದಿದ್ದರು. ಈಗ ಯಾವ ಕಡೆಗೆ ಹೋಗಬೇಕೆಂಬುದು ತಿಳಿಯದಾಯಿತು. ಸುತ್ತಲೆ ನಾಲ್ಕು ಗೋಡೆ ಗಳಿದ್ದುವು. ಈಗ ಅವರು ಯಾವ ಗೋಡೆಯ ಸನಿಹಕ್ಕಿರುವರು! ತಮ್ಮ ಕೋಣೆ ಯಾವ ಕಡೆಗಿದೆ? ಅಡಿಗೆಯ ಮನೆಯ ದಾರಿಯಾವುದು? ತಲೆ ಬಾಗಿಲು ಹಿಂದಿದೆಯೋ ಮುಂದಿದೆಯೋ? ತಿಳಿಯಲಿಲ್ಲ. ಗಾಬರಿಯಾದರು. ಏನೋ ಮಾಡಹೋಗಿ ಏನೋ ಆದರೆ! ದಿಕ್ಕು ನಿರ್ಣಯಿಸಿಕೊಳ್ಳಲು ಅಲ್ಲಿಯೇ ಕುಳಿತರು. ಮಡಿಚಿದ ಕಾಲುಗಳನ್ನು ಉದ್ದ ಬಿಟ್ಟರು. ಶ್ವಾಸವನ್ನು ಮೆಲ್ಲಗೆ ಎಳೆದುಕೊಂಡು ಉಛ್ವಾಸವನ್ನು ಹಗುರಾಗಿ ಬಿಡಹತ್ತಿದರು. ಮೂಗು ಮುಚ್ಚಿಕೊಂಡು ಸಂಧ್ಯಾವಂದನೆಯಲ್ಲಿ ಪ್ರಾಣಾಯಾಮವನ್ನು ಮಾಡುವ ಪದ್ಧತಿಯನ್ನು ಅರಿತುಕೊಂಡ ಗುರುಗಳು ಅಲ್ಲಿ ನಿಜವಾಗಿ ಪ್ರಾಣಾಯಾಮ ವನ್ನು ಮಾಡಬೇಕಾಯಿತು. ೭-೮ ಪ್ರಾಣಾಯಾಮಗಳನ್ನು ಮಾಡಿ ಹಗುರೆ ನಿಸಿಕೊಂಡರು. ಇನ್ನು ಹೊರಡುವುದು. ಯಾವ ಕಡೆಗೆ ಹೊರಡಬೇಕು? ಅವರಿಗೆ ಬೇಕಾದುದು ಅಡಿಗೆಯ ಮನೆಯ ಬಾಗಿಲು. ದೇವರ ಮುಂದಿನ ದೀಪದಿಂದ ಅಡಿಗೆಯ ಮನೆಯ ಬಾಗಿಲನ್ನು ಗುರುತಿಸಿಸಬಹುದೆಂದು ಥಕ್ಕನೆ ಹೊಳೆಯಿತು. ಎದುರು ನೋಡಿದರು. ಸೀಮಾತೀಕವಾದ ಕತ್ತಲೆ. ಬಲ ಗಡೆಗೆ ನೋಡಿದರು. ಕಾಳರಾತ್ರಿಯ ಕರಿಯ ತೆರೆ. ಹಿಂದೆ ನೋಡಿದರು. ದಪ್ಪನ್ನ ಕಪ್ಪನ್ನ ಪರದೆ. ಎಡಗಡೆಗೆ ನೋಡಿದರು. ಕಣ್ಣು ತಿಕ್ಕಿ ನೋಡಿದರು. ಅನಂತದಲ್ಲಿ ವಿಶ್ವವು ಲಯವಾದಂತೆ ಕರಿಕರಿ ಶೂನ್ಯ. ದೇವರ ಮುಂದಿನ ದೀಪವು ನಂದಿಹೋಗಿತ್ತು. ರಾತ್ರಿಯು ಎಷ್ಟಾಗಿದೆ ಎಂಬುದು ತಿಳಿಯು ವಂತಿರಲಿಲ್ಲ. ಕಲ್ಯಾಣಿಯ ನಿದ್ದೆಯ ಸಪ್ಪಳವನ್ನಾದರು ಗುರುತಿಸಬಹುದೇ! ಎಂದು ಹಾಗೆಯೇ ಕುಳಿತರು. ಇನ್ನೂ ಕುಳಿತರು. ಚಾಚಿದ ಕಾಲ ಮೇಲೆ ಯಾವುದೋ ಪ್ರಾಣಿ ಸರ್‌ರ್ ಎಂದು ಓಡಿಹೋಯಿತು. ಅದು ಒಂದು ಬೆಚ್ಚನ್ನ ಗಡುತರ ಹಗ್ಗವನ್ನು ಎಳೆದುಕೊಂಡು ಹೋದಂತೆ ಭಾಸವಾಯಿತು.

ಅದು ಹಾವೋ, ಇಲಿಯೋ, ಹೆಗ್ಗಣವೋ ತಿಳಿಯಲಿಲ್ಲ. ಕಾಲನ್ನು ಗಕ್ಕೆಂದು ಎಳೆದುಕೊಂಡರು. ತಲೆಗೆ ಬರ್ಫದ ಟೋಪಿಯನ್ನು ತೊಡಿಸಿದಂತಾಯಿತು. ಎದೆಗೆ ತಣ್ಣೀರಿನ ಪಟ್ಟಿಯನ್ನು ಕಟ್ಟಿದಂತಾಯಿತು. ಮೈ ಮೇಲೆ ಮುಳ್ಳೆದ್ದುವು. ರಕ್ತಾಶಯವು ನಗಾರಿಯಂತೆ ಹೊಡೆದುಕೊಳ್ಳಹತ್ತಿತು. ಮೂಗು ಕಮ್ಮಾರನ ತಿದಿಯಂತೆ ಊದಿ-ಇಳಿದು ಮಾಡಹತ್ತಿತು. ಗುರುಗಳು ತೀರ ಗಾಬರಿಯಾದರು. ಮುಖದ ಮೇಲೆ ಬೆವರಿನ ಹನಿಗಟ್ಟಿದುವು. ದೋತರದಿಂದ ಒರಸಿಕೊಂಡರು. ಕಣ್ಣನ್ನು ಎಷ್ಟು ಬಿಟ್ಟ ಬಿಟ್ಟರೂ ಕತ್ತಲೆಯ ಹೊರತು ಮತ್ತಾವುದು ಕಾಣಬರಲಿಲ್ಲ. ಮನೆ, ಮನೆಯ ಪಾತ್ರೆ-ಪದಾರ್ಥಗಳು ಅದೃಶ್ಯವಾಗಿದೆ. ಏನಿಲ್ಲ. ತಾವು ಒಬ್ಬರು ಇರುವರು. ಉಳಿದುದೆಲ್ಲವು ಶೂನ್ಯದಲ್ಲಿ ಲಯವಾದಂತೆ! ಕತ್ತಲೆಯು ಏನನ್ನು ತೋರಿಸದಿದ್ದರೂ ಗುರುಗಳಿಗೆ ತುಂಬಾ ಭಯವನ್ನು ಹುಟ್ಟಿಸಿತು. ಅವ್ಯಕ್ತದಲ್ಲಿ ಒಂದು ವ್ಯಕ್ತಭಾವನೆಯು ಉತ್ಪನ್ನವಾಗ ಹತ್ತಿತು. ಏನು ಮಾಡ ಹೋಗಿ ಏನಾಯಿತು? ಎಂದು ಗುರುಗಳು ತಲೆಯನ್ನು ತುರಿಸಿಕೊಳ್ಳಹತ್ತಿದರು. ಎಂಟು-ಹತ್ತು ಕೂದಲುಗಳು ಉದುರುವಂತೆ ತುರಸಿಕೊಂಡರು. ಕೂದಲು ಉದುರಿರಬೇಕು. ಆದರೆ ಬೆಳಕಿನ ಒಂದು ಕಿಡಿಯು ಸಹ ಜಿಗಿಯಲಿಲ್ಲ. ಅದರ ಬೆಳಕಿನಲ್ಲಿ ದಿಕ್ಕನ್ನು ತಿಳಿಯಬೇಕೆಂದು ಮಾಡಿದ ವಿಚಾರವು ತಪ್ಪಿಹೋಯಿತು. ಹಾಗಾದರೆ ಬೆಳಗಾಗುವ ವರೆಗೆ ಹೀಗೆಯೇ ಕೂಡಬೇಕೇ? ಎಂದು ವಿಚಾರಿಸಿದರು. ಮುಂಜಾವಿನಲ್ಲಿ ತಮ್ಮದೇ ಅವಮಾನ. ಏನು ಮಾಡಬೇಕು. ಒಂದು ದಿಕ್ಕು ಹಿಡಿದು ಮೆಲ್ಲನೆ ಕೈಯಾಡಿಸುತ್ತ ಗೋಡೆ ಹತ್ತಲಿ, ಬಾಗಿಲು ಹತ್ತಲಿ, ಆದರಿಂದ ಮುಂದಿನದನ್ನು ತಿಳಿಯಬಹುದು. ಆದರೆ ಎಚ್ಚರದಿಂದ ಸಾಗಬೇಕು. ಎಂದು ಮೆಲ್ಲಗೆ ಸರಿಯ ಹತ್ತಿದರು. ಒಂದೊಂದು ಇಂಚಿನಂತೆ ಸರಿಯ ಹತ್ತಿದರು. ಸುತ್ತಲೆ ಕೈಯಾಡಿಸಿದರು. ಏನೂ ತಗಲಲಿಲ್ಲ. ಮತ್ತೆ ಒಂದು ಇಂಚು ಸರಿದರು. ಸುತ್ತಲೇ ಕೈಬೀಸಿ ನೋಡಿದರು. ಈಗಲೂ ತಗಲಲಿಲ್ಲ. ಮತ್ತೆ ಒಂದು ಇಂಚು ಸಾಗಿದರು. ಕೈಯಾಡಿಸಿದರು. ಏನೂ ಹತ್ತಲಿಲ್ಲ. ನೆಲದ ಮೇಲೆ ಅಂಗೈಯೂರಿ ಮಗುವಿನಂತೆ ಮುಂದೆ ನಡೆದರು. ಏನೋ ಕಡಿದಂತಾಯಿತು. ಸರ್ರನೆ ಕೈ ಎಳೆದುಕೊಂಡರು. ನೋಯ ಹತ್ತಿತು. ನೋವಿನ ಮೇಲೆ ಕೈಯಾಡಿಸ ಹತ್ತಿದರು. ಹಸಿ ಹಸಿ ಹತ್ತಿತು.

ಕೈಯೂ ಉರಿಯ ಹತ್ತಿತು. ರಕ್ತವೋ ನೀರೋ ತಿಳಿಯಲಿಲ್ಲ. ಕತ್ತಲೆಯು ಎಲ್ಲವನ್ನು ಅದೃಶ್ಯವನ್ನಾಗಿ ಮಾಡಿದ್ದಿತು. ಗುರುಗಳು ತೀರ ಗಾಬರಿ ಯಾದರು. ಗಾಯವನ್ನು ಬಾಯಲ್ಲಿ ಇಟ್ಟುಕೊಂಡರು. ಆ ನೀರಿನಂತಹ ಪದಾರ್ಥ ಬಾಯಲ್ಲಿ ಇಳಿಯ ಹತ್ತಿತು. ರುಚಿಯು ಕಂಡು ಬಂದಿತು. ಉಪ್ಪು ಉಪ್ಪು ! ತಮ್ಮದೇ ರಕ್ತ ! ತಮ್ಮ ರಕ್ತವನ್ನು ತಮ್ಮ ನಾಲಗೆಯೇ ರುಚಿ ನೋಡಿತು. ಗುರುಗಳು ಗಾಯವನ್ನು ಇನ್ನೊಂದು ಕೈಯಿಂದ ಗಟ್ಟಿ ಯಾಗಿ ಹಿಡಿದರು. ಏನು ಕಡಿಯಿತು ? ಯಾವ ತರದಿಂದ ಗಾಯವಾಯಿತು ? ಹಾವೋ, ಹೆಗ್ಗಣವೋ ? ಹಾವು ಕಡಿದರೆ ನಂಜೇರಬೇಕು ? ಬೆಳಗಾಗು ವಷ್ಟರಲ್ಲಿ ಸಾಯಬೇಕು ! ಅಯ್ಯೋ, ಏನು ಮಾಡಿದೆ? ಏನು ಮಾಡ ಹೋದೆ ? ಮನೆಯವರನ್ನು ಎಬ್ಬಿಸಬೇಕೆಂದರು. ಆದರೆ ಅಭಿಮಾನ ಒಪ್ಪಲಿಲ್ಲ. ಪರೀಕ್ಷಿಸಬೇಕು, ಕಳ್ಳರನ್ನು ಹಿಡಿಯಬೇಕು, ಶಾಸನವನ್ನು ಮಾಡಬೇಕು, ಸಾಧ್ಯವಾದರೆ ಆ ನೀಚರನ್ನು ಮನೆ ಬಿಟ್ಟು ಉಟ್ಟ ಬಟ್ಟೆಯಿಂದ ಹೊರಗೆ ಹಾಕಬೇಕು. ಎಂದು ನಿಶ್ಚಯಿಸಿಕೊಂಡ ಕಲುಷಿತ ಮನಸು ಒಪ್ಪಲಿಲ್ಲ. ಏನೇ ಆಗಲಿ. ಅವರನ್ನು ಹಿಡಿಯಬೇಕು. ಯೋಗ್ಯ ಶಿಕ್ಷೆಯನ್ನು ಕೊಡ ಬೇಕು. ಎಂಬ ತಪ್ತ ಹಟದಲ್ಲಿ ವೇದನೆಯನ್ನು ಸಹಿಸಿದರು. ಹಾವು ಕಡಿ ದಿದ್ದರೆ ಒಳ್ಳೆಯದೇ ಆಯಿತು. ನನ್ನ ಮಟ್ಟಿಗೆ ನಾನು ಪಾರಾಗುವೆ. ಆ ನೀಚರು ತಮ್ಮ ಫಲವನ್ನು ಉಣ್ಣಲಿ. ದೇವರಿರುವನು. ದೈವವಿರುವುದು. ಎಂದು ಕೈ ಗಾಯವನ್ನು ನೋಡಿದರು. ವೇದನೆಯು ಇಳಿಮುಖವಾಗಿದ್ದಿತು. ಹಸಿಯೂ ಒಣಗುತ್ತ ಬಂದು ಅಂಟುಗಟ್ಟುತ್ತಿದ್ದಿತು. ಗಾಯದ ಮೇಲೆ ಬೆರಳಿಷ್ಟು ತುಸು ಹೊತ್ತು ಕುಳಿತರು. ಇನ್ನು ಯಾವ ದಿಕ್ಕಿನಿಂದ ಸಾಗ ಬೇಕು ? ವಿಚಾರಿಸ ಹತ್ತಿದರು. ಆಗ ಮಧ್ಯ ರಾತ್ರಿಯೂ ಕಳೆದುಹೋಗಿ ದ್ದಿತು. ನಿದ್ದೆಯು ಕಣ್ಣ ಮೇಲೆ ಏರಿ ಬರುತ್ತಿದ್ದಿತು. ಅದನ್ನು ಹೊಡೆ ದೋಡಿಸಲು ತಲೆಯನ್ನು ಅಲುಗಾಡಿಸುತ್ತಿದ್ದರು. ತಲೆಯ ರಕ್ತವನ್ನು ಬಿಸಿ ಯಾಗಿ ಮಾಡಿಕೊಳ್ಳುತ್ತಿದ್ದರು. ಆದರೆ ಕಣ್ಣು ತಾವಾಗಿಯೇ ಮುಚ್ಚು ತ್ತಿದ್ದುವು. ರೆಪ್ಪೆಗಳು ಭಾರವಾಗಿ ಕೆಳಗೆ ಇಳಿಯುತ್ತಿದ್ದುವು. ಇಲ್ಲಿ ಕುಳಿತಿ ರುವುದು ಯೋಗ್ಯವಲ್ಲ. ಮುಂದೆ ಸರಿಯುವ ಎಂದು ಸರಿಯ ಹತ್ತಿದರು. ತಲೆಯು ನಿದ್ದೆಯ ಭಾರದಿಂದ ಹೊಯದಾಡ ಹತ್ತಿತು. ತಾವು ಏತಕ್ಕಾಗಿ

ಈ ಕತ್ತಲೆಯಲ್ಲಿ ಗೋಳಾಡುತ್ತಿರುವುದು? ಏನು ಬೇಕಾಗಿದೆ? ಯಾವ ತುಡುಗನ್ನು ಹಿಡಿಯಬೇಕು? ಇತ್ಯಾದಿ ವ್ಯಾಪಾರಗಳನ್ನು ಬುದ್ಧಿಯು ಮರೆಯ ಹತ್ತಿತು. ತೂಕಡಿಕೆ ತಲೆಯ ತೂಕವನ್ನು ತಪ್ಪಿಸ ಹತ್ತಿತು. ನಿದ್ದೆಯು ಶರೀರದ ಪ್ರಜ್ಞೆಯನ್ನು ಹಾಳುಗೆಡುವ ಹತ್ತಿತು. ನೆಲದಾಯಿಗೆ ಒರಗಿ ವಿಶ್ರಮಿಸಬೇಕೆಂದು ಪಂಚೇಂದ್ರಿಯಗಳು ತವಕಿಸ ಹತ್ತಿದುವು. ಆದರೆ ಗುರುಗಳ ಅಭಿಮಾನಿ ದೇವತೆಗಳು—ಆಗದು. ಇನ್ನಷ್ಟು ಶೋಧಿಸುವ. ಹುಡುಕುವ. ಎಂದು ಹೆಣಗುತ್ತಿದ್ದುವು. ಅಭಿಮಾನದ ಕುದುರೆ ಆ ದುರ್ಬಲ ದೇಹವನ್ನು ಮುಂದೆ ಮುಂದೆ ಎಳೆಯುತ್ತಿದ್ದಿತು. ಸ್ವಾಭಾವಿಕ ಶರೀರದ ಚೈತನ್ಯ ಮಲಗಲು ಯತ್ನಿಸುತ್ತಿದ್ದಿತು. ಈ ಎಳೆದಾಟದಲ್ಲಿ ಗುರುಗಳು ಅತ್ಯಲ್ಪ ದಾರಿಯನ್ನುಕ್ರಮಿಸಿದರು. ಮುಂದೆ ಎಲ್ಲವೂ ಸೋತುವು. ಗುರುಗಳು ತಮ್ಮ ವ್ಯಕ್ತಿತ್ವವನ್ನೇ ಮರೆತರು. ಪ್ರಪಂಚದ ಸಂಬಂಧವನ್ನೇ ಹರಿದುಕೊಂಡರು. ನಿದ್ದೆಯು ತನ್ನ ಮಾತು ಗೆಲಿಯಿತೆಂದು ಉಬ್ಬಿತು. ಹಿಗ್ಗಿತು. ನಲಿದಾಡಿತು. ಗುರುಗಳ ಕಳೇಬರದ ಮೇಲೆ ತನ್ನ ಅಧಿಕಾರವನ್ನು ಪ್ರಸ್ಥಾಪಿಸಿತು. ಅವರ ಬುದ್ಧಿಶಕ್ತಿಯನ್ನು ನಿಲ್ಲಿಸಿತು. ಕುತ್ತಿಗೆಯನ್ನು ಬಳ್ಳಿಯ ಕುಡಿಯಂತೆ ಬಗ್ಗಿತು. ತೋಳುಗಳ ಸ್ನಾಯುಗಳನ್ನು ಕಟ್ಟಿಹಾಕಿತು. ತೊಡೆಗಳ ಜಂಘಾಬಲವನ್ನು ಮೊಳೆ ಹೊಡೆದು ನಿಲ್ಲಿಸಿತು. ಇಡಿಯ ಶರೀರದ ಮೇಲೆ ಬಲ ಪ್ರಯೋಗಿಸಿ ಗಾಳಿಗೆ ಹಾಳು ಮರವು ಉರುಳುವಂತೆ ಅಲ್ಲಿಯೇ ನೆಲದ ಮೇಲೆ ಒರಗಿದರು. ಗುರುಗಳು ಕ್ಷಣಾರ್ಧದಲ್ಲಿ ನಿದ್ರಾವಶರಾದರು. ಅವರಿಗೆ ಮೆತ್ತನ್ನ ಗಾಡಿ, ತಲೆಗಿಂಬು, ರಗ್ಗು, ಸ್ವಚ್ಛ ಹಾಸಿಗೆ ಯಾವುದೂ ಬೇಕಾಗಿರಲಿಲ್ಲ. ನೆಲವು ಎರಡು ಗಾದಿಗಳಂತೆ ಮೆತ್ತಗಾಯಿತು. ಮಾಳಿಗೆಯು ಮೂರು ರಗ್ಗಿನಂತೆ ಬೆಚ್ಚನ್ನ ಹೊದಿಕೆಯಾಯಿತು. ಇಹವನ್ನು ಸಂಪೂರ್ಣ ಮರೆತು ನಿದ್ರೆಯ ವಿಶ್ರಾಂತಿಯಲ್ಲಿ ಲಯಹೊಂದಿದರು.

ಹೊರಗೆ ಬೆಳಗಿನ ಕೋಳಿ ಕೂಗಲು ಕಣ್ಣು ಬಿಟ್ಟು ನೋಡಿದರು. ಒಂದಿಷ್ಟು ಬೆಳಕೂ ಒಳಗೆ ಬಂದಿದ್ದಿತು. ಮನೆಯ ಅಲ್ಪ ಸ್ವಲ್ಪ ಭಾಗವು ಕಾಣಹತ್ತಿತ್ತು. ಎದ್ದು ಕುಳಿತರು. ಸಾವರಿಸಿಕೊಂಡರು. ಕಣ್ಣು ಉಜ್ಜಿದರು. ತಾವು ತಮ್ಮ ಕೋಣೆಯ ಬಾಗಿಲ ಮುಂದೆಯೇ ಇಡೀ ರಾತ್ರಿ ಮಲಗಿದ್ದರೆಂದು ತಿಳಿದುಕೊಂಡರು. ಕಳೆದ ರಾತ್ರಿಯ ತಮ್ಮ ಅವಾಂತರದ ವ್ಯಾಪಾರ ಕಣ್ಣ

ಮುಂದೆ ಸುಳಿಯಿತು. ನಾಚಿಕೆಯಿಂದ ದಡಪಡಿಸಿ ಎದ್ದು ಒಳಗಿನ ಹಾಸಿಗೆಯ ಮೇಲೆ ಮಲಗಿದರು. ನಿದ್ದೆ ಹತ್ತಿದವರಂತೆ ನಟಿಸಿದರು.

ರಾತ್ರಿಯ ಸಂಗತಿಯು ಮತ್ತೊಮ್ಮೆ ಕನಸಿನಂತೆ ಸುಳಿದಾಡಿತು.

ಕರುಣನು ಬಂದು —ಚಹ ಆಗಿದೆ ಏಳಿರಿ. ಎಂದು ಕರೆಯಲು –ಹ ಎದ್ದೆ ಎಂದು ಮೈಮುರಿದು ಮೇಲೆದ್ದರು. ಕೈಯ ನೋವು ಇನ್ನೂ ಇದ್ದಿತು. ಅಂಗೈಗೆ ರಕ್ತದ ಕಲೆಗಳಿದ್ದುವು. ಯಾರಾದರೂ ನೋಡಬಹುದೆಂದು ಮುಚ್ಚಿಕೊಂಡು ಬಚ್ಚಲಕ್ಕೆ ನಡೆದರು.

೧೫

ಅಂದಿನ ರಾತ್ರಿಯ ಘಟನೆ ಗುರುಗಳಿಗೆ ಒಂದು ವಿಚಿತ್ರ ಸಂಗತಿಯಾಯಿತು. ಅದು ನಿಜವಾಗಿ ನಡೆಯಿತೋ, ಕನಸಿನಲ್ಲಿ ನಡೆಯಿತೋ? ನಿಶ್ಚಯವಾಗಿ ಹೇಳಲಾಸಲ್ಲ. ಆದುದು ಮಾತ್ರ ಸತ್ಯ. ಕೈಯ ನೋವು, ರಕ್ತ ಬಂದುದು ಕನಸಿನ ಮಾತೇ ಎನಿಸುತ್ತಿದ್ದುವು. ಹಾಸಿಗೆಯ ಮೇಲೆ ಒಂದೆರಡು ರಕ್ತದ ಹನಿಗಳೂ ಕಾಣುತ್ತಿದ್ದುವು. ಕೈತುಂಬ ಒಣಗಿದ ರಕ್ತದ ಕಲೆಯೂ ಇದ್ದಿತು. ಆದರೆ ಅದಕ್ಕೆ ಬೇರೊಂದು ಕಾರಣವಿರಬೇಕೆಂದು ತಿಳಿಯಲು ಚಿಕ್ಕ ಆಧಾರವಿದ್ದಿತು.

ಬಹುಶಃ ಆಫೀಸಿನಿಂದ ಬಂದ ಕಾಗದಗಳಿಗೆ ಟಾಚಣಿಗಳನ್ನು ಚುಚ್ಚಿರುತ್ತಿದ್ದರು. ಟಾಚಣಿಗಳನ್ನು ಕಿತ್ತುಕೊಂಡು ಕಾಗದಗಳನ್ನು ಫಾಯಿಲಿಗೆ ಜೋಡಿಸುತ್ತಿದ್ದರು. ತಾವು ಆಫೀಸಿಗೆ ಒಂದಕ್ಕಿಂತ ಹೆಚ್ಚು ಕಾಗದಗಳನ್ನು ಕಳಿಸುವದಿದ್ದರೆ ಆ ಕಿತ್ತುಕೊಂಡ ಟಾಚಣಿಗಳನ್ನು ಚುಚ್ಚಿ ಕಳಿಸುತ್ತಿದ್ದರು. ಇಂಥ ಟಾಚಣಿಗಳು ಶಿಲ್ಕು ಇಲ್ಲದ ಸಮಯದಲ್ಲಿ ಲೇಖಣಿಯ ತುದಿಯಿಂದ ಕಾಗದಗಳ ಮೂಲೆಗೆ ತೂತು ತೆಗೆದು ದಾರ ಪೋಣಿಸಿ ರವಾನಿಸುತ್ತಿದ್ದರು. ಕಿತ್ತುಕೊಂಡ ಟಾಚಣಿಗಳನ್ನು ಅಂಗಿಯ ಮುಂದಿನ ಎದೆಯ ಪಟ್ಟಿಗೆ ಚುಚ್ಚಿಕೊಂಡು ರಕ್ಷಿಸುತ್ತಿದ್ದರು. ಅವಶ್ಯವೆನಿಸಿದ ಸಮಯದಲ್ಲಿ ಆ ಪಟ್ಟಿಯಗುಂಟ ಕೈಯಾಡಿಸಿ ಅವುಗಳ ಅಸ್ತಿತ್ವದ ಉಪಯೋಗವನ್ನು ಮಾಡಿಕೊಳ್ಳುತ್ತಿದ್ದರು. ಇಂಥ ಟಾಚಣಿಗಳು ಅವರ ಅಂಗಿಗೆ ಪತ್ತಿಕೊಂಡು ಎಷ್ಟೋ ಇರುತ್ತಿದ್ದುವು. ಅಂಥದೊಂದು ಟಾಚಣಿ ಹಾಸಿಗೆಯಲ್ಲಿ ಬಿದ್ದು ಇಷ್ಟೆಲ್ಲ ಅನಾಹುತಕ್ಕೆ ಕಾರಣವಾಯಿತೆಂದು ಅವರ ಭಾವನೆ. ಏಕೆಂದರೆ ಮರುದಿನ ಒಂದು ಟಾಚಣಿಯು ಹಾಸಿಗೆಯಲ್ಲಿ ಕಂಡಿತು. ಏನೇ ಇರಲಿ. ಆ ಗಾಯವು ಈಗ ಮಾಯುತ್ತಿರುವುದು ಸುಲಕ್ಷಣವೆಂದು ತಿಳಿದರು. ಇದಕ್ಕು ಮಿಗಿಲಾದ ಒಂದು ಸಂತೋಷ! ಆ ರಾತ್ರಿಯ ಘಟನೆ ಮನೆಯ ಮತ್ತಾರಿಗೂ ತಿಳಿದುಬರಲಿಲ್ಲ. ಕತ್ತಲೆಯು ಅವರೆಲ್ಲರ ನಡುವೆ ಪರದೆಯನ್ನು ಕಟ್ಟಿ ಅದೃಶ್ಯ ನಾಟಕವನ್ನು ಆಡಿಸಿಬಿಟ್ಟಿತು. ಈ ಸುಖ ಸಂತೋಷದಲ್ಲಿಯೇ ದಿನ ಕಳೆದರು.

ನಿತ್ಯದಂತೆ ಸ್ನಾನವಾಯಿತು. ಊಟವಾಯಿತು. ವಾಮಕುಕ್ಷಿಯಾಯಿತು. ಇಳಿಹೊತ್ತಿನ ಚಹವಾಯಿತು. ಕಲ್ಯಾಣಿಯೂ ಮಾತಾಡಲಿಲ್ಲ. ಕರುಣನೂ ಬಾಯಿ ಬಿಚ್ಚಲಿಲ್ಲ. ಗಡಿಯಾರದ ಮುಳ್ಳಿನಂತೆ ಎಲ್ಲ ಕಾರ್ಯಗಳು ತಿರುಗಿದುವು. ಗುರುಗಳು ಅಡ್ಡಾಡಿಕೊಂಡು ಬರಲು ಊರಹೊರಗಿನ ಬೈಲಿಗೆ ಹೋದರು. ಪರಿಚಯದವರ ನಮಸ್ಕಾರ–ಚಮತ್ಕಾರಗಳನ್ನು ಸ್ವೀಕರಿಸುತ್ತ ಬೈಲಲ್ಲಿ ಏಕಾಂಗಿಯಾಗಿ ಕುಳಿತರು.

ಆಗ ಇಳಿಹೊತ್ತು. ಸಂಜೆಯ ಸೂರ್ಯನು ಕೆಂಪಣ್ಣದಿಂದ ಪಶ್ಚಿಮ ಶಿಖರದ ಮೇಲೆ ಕುಳಿತು ತನ್ನ ದಿನಗೆಲಸದ ಪರಿಣಾಮವನ್ನು ಪರಾಮರ್ಶಿಸುತ್ತಿದ್ದನು. ಯೋಗ್ಯಕೆಲಸದ ಕೆಳಗೆ ಗೆರೆಹೊಡೆಯುವಂತೆ ಕೆಂಪು ಕಿರುಣದ ತುಂಡನ್ನು ಅಂಟಿಸುತ್ತಿದ್ದನು. ದನಗಳು ಹೊಲದಿಂದ ಮನೆಗೆ ನಡೆದಿದ್ದುವು. ಒಕ್ಕಲ ಮಕ್ಕಳು ಹುಲ್ಲು ಹೊರೆಯನ್ನು ಹೊತ್ತುಕೊಂಡು ಸುಗ್ಗಿಯ ಹಾಡನ್ನು ಹಾಡುತ್ತ ನಡೆದಿದ್ದರು. ಅವರ ಹಾಡಿಗೆ ತಾಳವನ್ನು ಹಿಡಿದಂತೆ ಕೊರಳ ಗೆಜ್ಜೆ–ಗಂಟೆಗಳ ನಾದವು ಏಳುತ್ತಿದ್ದಿತು. ಸೂರ್ಯನು ಸಂತೋಷಪಟ್ಟು ಆ ನೇಗಿಲಯೋಗಿಗಳ ಮಂಡಲವನ್ನು ಆಶೀರ್ವದಿಸುವಂತೆ ತನ್ನ ಎಳೆಯ ಚೆಂಬಣ್ಣದ ಕಿರಣಹಸ್ತದಿಂದ ಚಪ್ಪರಿಸುತ್ತಿದ್ದನು.

ಒಂದು ಕೆಂದು ಬಣ್ಣದ ಆಕಳು ಎಲ್ಲಕ್ಕು ಮುಂದೆ ಇದ್ದಿತು. ಆದರ ಬೆಳ್ಳನ್ನ ಕರುವು ತಾಯಿಯ ಸುತ್ತು ಬಳಸಿಕೊಂಡು ದೂರದಲ್ಲಿ ಜಿಗಿದಾಡುತ್ತಿದ್ದಿತು. ಜಿಗಿದು ಜಿಗಿದು ತಾಯಿಯ ಬಳಿಗೆ ಬಂದಿತು. ಆಕಳು “ ಇದು ತನ್ನ ಕರುವಲ್ಲ. ತನ್ನ ಕರುವಿನ ಮೈಬಣ್ಣ ಬೆಳ್ಳಗೆ ಹಾಲಿನಂತೆ ಇದೆ. ಇದೆಲ್ಲಿಯ ಕೆಂಪು ಬಣ್ಣದ ಕರುವು ! ” ಎಂದು ಮೋತಿಯಿಂದ ನುಗಿಸುತ್ತಿದ್ದಿತು. ಆದರೆ ಕರುವು ಬಿಡದೆ ತಾಯಿಯನ್ನು ಮತ್ತೆ ಸುತ್ತಿ ಮೊಲೆಯುಣ್ಣಲು ಹವಣಿಸುತ್ತಿದ್ದಿತು. ಆಕಳು ಕರುವು ಮುಂದೆ ಬಂದರೆ ಮೋತಿಯಿಂದ ನುಗಿಸುತ್ತಲೂ, ಮಗ್ಗುಲಿಗೆ ಬಂದರೆ ಕಾಲು ಜಾಡಿಸುತ್ತಲೂ ಸಾಗಿದ್ದಿತು. ಕರುವು ತಾಯಿಯ ಒದೆತ, ಇರಿತ ಎಷ್ಟು ತಿಂದರೂ ಆದರ ಬೆನ್ನು ಬಿಡದೆ ಕೆಚ್ಚಲಕ್ಕೆ ಬಾಯಿಯನ್ನು ಹಾಕುತ್ತಿದ್ದಿತು. ದನಗಾಹಿ ಜನರು, ಸೂರ್ಯನು ಕಣ್ಣುಬಿಟ್ಟು ನೋಡುತ್ತಿದ್ದರು. ಕರುವು ಹಟದಿಂದ ಆಕಳ ಹಿಂಗಾಲ ನಡುವೆ ಮುಖಚಾಚಿ ಮೊಲೆಯನ್ನು ಕುಡಿಯಹತ್ತಿತು. ಅದರ ಲಕ್ಷಣದಿಂದ ಆಕಳಿಗೆ ತನ್ನದೆಂಬ ಅರಿ

ವಾಯಿತು. ಕುಡಿಸುತ್ತ ಮುಂದೆ ಸಾಗಿತು. ಕರುವು ಮೊಲೆಯನ್ನು ಸೀಪುತ್ತ ಹಿಂದೆ ಸಾಗಿತು. ಈ ತಾಯಿ–ಮಗಳ ವಿನೋದವನ್ನು ಕಂಡು ಸೂರ್ಯನು ಪಕಪಕನೆ ಹಲ್ಲು ತೆರೆದನು. ಕಿರಣರಸ್ಮಿಗಳು ಸಹಸ್ರ ಸಂಖ್ಯೆಯಿಂದ ಹೊರ ಬಿದ್ದುವು. ಈ ಅಜ್ಞಾನಿ ಪಶುಗಳ ಆಟ ನೋಡುವುದು ಸಾಕೆಂದು ಮರೆ ಯಾದನು. ದನಗಾಹಿಗಳು ದನಗಳನ್ನು ಒತ್ತರದಿಂದ ಮನೆಯ ಕಡೆಗೆ ಸಾಗಿಸಿದರು. ಪೂರ್ವದಿಗಂತದಿಂದ ಕತ್ತಲೆಯು ಹೆಜ್ಜೆ ಹೆಜ್ಜೆಯಾಗಿ ಮುಗಿಲನ್ನು ಏರಹತ್ತಿತು. ಗುರುಗಳು ತಮ್ಮ ಏಕಾಂತ ವಿಶ್ರಾಂತಿಯನ್ನು ಮುಗಿಸಿದರು. ಎದ್ದು ಮನೆಯ ಕಡೆಗೆ ಸಾಗಿದರು. ಸಂಜೆಯ ಸುಂದರ ದೃಶ್ಯವನ್ನು ನೋಡಿ ಮನಸು ಪ್ರಸನ್ನವಾಗಿದ್ದಿತ್ತು. ಓಣಿಯಿಂದ ಓಣಿಯನ್ನು ದಾಟುತ್ತ ಬಂದರು.

ಗುರುಗಳು ಕಡೆಯ ಓಣಿಗೆ ಬಂದರು. ಇಳಿಚಾರ ಚಪ್ಪರದ ಒಂದು ಮನೆಯ ಕಟ್ಟೆಯಮೇಲೆ ಗುರುಗಳ ಮನೆಯ ಮುಸುರೆಯವಳಾದ ಗಂಗಮ್ಮನು ಕುಳಿತಿದ್ದಳು. ಒಂದಿಷ್ಟು ತಿಳಿಗತ್ತಲಾಗಿದ್ದಿತು. ಗುರುಗಳನ್ನು ಗಂಗಮ್ಮನು ಗುರುತಿಸಿದಳು. ಬನ್ನಿರಿ ಗುರುಗಳೇ! ಎಂದು ಕರೆದಳು. ಗುರುಗಳು ಚಂಚಲ ದೃಷ್ಟಿಯಿಂದ ಅತ್ತಿತ್ತ ನೋಡಹತ್ತಿದರು. ಗಂಗಮ್ಮ ಪುನಃ ಕರೆದಳು. ಗುರುಗಳು ಅವಳನ್ನು ನೋಡಿ—

" ಗಂಗಮ್ಮನೇನು ? " ಎಂದರು.

" ಅಹುದು ಬನ್ನಿರಿ " ಎಂದು ಮನೆಯ ಒಳಗೆ ಗುರುಗಳನ್ನು ಕರೆದು ಕೊಂಡು ಹೋಗಿ ಕಂಬಳಿಯ ಮೇಲೆ ಕೂಡಿಸಿದಳು. ಗುರುಗಳು ಕುಳಿತು ಕೊಂಡು ಮನೆಯನ್ನು ಸುತ್ತಲೆ ನೋಡಿ ಪರೀಕ್ಷಿಸಿದರು. ಮನೆಯು ಚಿಕ್ಕ ದಿದ್ದರೂ ಚೊಕ್ಕಟವಾಗಿದ್ದಿತು. ಗಂಗಮ್ಮನು ತಮ್ಮ ಮನೆಯ ಮುಸುರೆ ಯವಳಾದರೂ, ಹರಕು–ಹೊಲಸು ಬಟ್ಟೆಗಳಿಂದ ಮುಸುರೆಯನ್ನು ತಿಕ್ಕಲು ಬರುತ್ತಿದ್ದರೂ ಮನೆಯು ಒಳ್ಳೆಯದಾಗಿ ಕಂಡಿತು. ಗೋಡೆಗಳಿಗೆ ಸುಣ್ಣ ಹಚ್ಚಲಾಗಿದ್ದಿತು. ಇದ್ದ ಒಂದೆರಡು ಗೂಟಗಳ ಮೇಲೆ ಹಾಳತವಾಗಿ ಅರಿವೆಗಳು ನೇತು ಬಿದ್ದಿದ್ದುವು. ದೇವರ ಚಿತ್ರಗಳೂ ಕಾಣುತ್ತಿದ್ದುವು. ಹಾಸಿಗೆಯ ಸುರುಳಿಗಳು ಚೆಂದವಾಗಿ ಮಡಗಿದ್ದುವು. ಹೊಲಸು–ಹೇಸಿಕೆ ಬರುವಂತೆ ಯಾವುದೂ ಇರಲಿಲ್ಲ. ನೆಲವನ್ನು ಸೆಗಣಿಯಿಂದ ಸಾರಿಸಿ ಚೊಕ್ಕಟ ವಾಗಿ ಇಡಲಾಗಿದ್ದಿತು. ಗಂಗಮ್ಮನು ಎದುರು ಕುಳಿತು ಎಲೆ–ಅಡಿಕೆಯ

ಡಬ್ಬಿಯನ್ನು ತೆರೆಯಹತ್ತಿದಳು. ಗುರುಗಳು ಆವಳನ್ನು ನೋಡಿ "ಇಲ್ಲಿ ಇರುವೆಯಾ ಗಂಗಮ್ಮ?" ಎಂದು ಕೇಳಿದರು.

"ಇದೇ ಬಂದು ನಾಲ್ಕು ತಿಂಗಳಾಯಿತು. ಆ ಮನೆಯ ಮಾಲಿಕನು ಮನೆ ಕಟ್ಟಿಸುವೆನೆಂದು ಹೇಳಿ ಬಿಡಿಸಿದನು. ಆದಕ್ಕೆ ಇಲ್ಲಿಗೆ ಬಂದಿರುವೆವು" ಎಂದು ನುಡಿದಳು.

"ಮನೆಯು ಸಣ್ಣದಿದ್ದರೂ ಸುಂದರವಾಗಿದೆ."

"ಏನೋ ಗುರುಗಳೇ! ಮನೆಯಲ್ಲಿ ಇಬ್ಬರೇ ಇರುವೆವು. ಏನು ಮಕ್ಕಳೇ ಮೊಮ್ಮಕ್ಕಳೇ! ಉಡುಗಿ—ಸಾರಿಸಿ ಇರುವೆವು."

"ತಾಯಿ—ಮಗಳು ಹೀಗೆ ನಂಬಿಕೊಂಡು ಇರುವುದು ಸಂತೋಷದ ಸಂಗತಿಯು ಗಂಗಮ್ಮ?"

"ತಬ್ಬಲಿಯಾದ ಮೇಲೆ ತಾಯಿಯನ್ನೇ ನಂಬಬೇಕಲ್ಲ ಗುರುಗಳೇ! ಇಲ್ಲದಿದ್ದರೆ ನನ್ನ ಮನೆಗೆ ಬರುವುದುಂಟೇ?"

"ಅಹುದು. ಅಹುದು" ಎಂದು ಗೋಣುಹಾಕಿದರು.

"ಇತ್ತಲಾಗಿ ನೀವು ಮನೆಯಲ್ಲಿಯೇ ಇರುವುದಿಲ್ಲ. ಆಗ ಮಾತಿಷ್ಟು ಆಡುತ್ತಿದ್ದಿರಿ. ಹರಟೆಯಷ್ಟು ಹೊಡೆಯುತ್ತಿದ್ದಿರಿ" ಎಂದು ತಡೆದಳು.

"ಸಾಲೆಯ ಕೆಲಸ ಬಹಳ ಗಂಗಮ್ಮ?"

"ಆಗಲೂ ಅದೇ ಸಾಲೆಯಲ್ಲಿ ಇದ್ದಿರಿ. ಅದೇ ಮನೆಯಲ್ಲಿ ಇದ್ದಿರಿ ಅಲ್ಲವೇ?"

"ಅಹುದು."

"ಅದೇ ಓದು. ಅದೇ ಬರಹ. ಆಗ ವೇಳೆ ಸಿಕ್ಕುತ್ತಿದ್ದಿತು. ಈಗ ಸಿಕ್ಕುವುದಿಲ್ಲ. ನನಗೆ ಆಶ್ಚರ್ಯವೆನಿಸುವುದು!" ಎಂದು ತಂಬುಲ ಬಾಯಿಂದ ನಗಹತ್ತಿದಳು.

"ಗಂಗಮ್ಮ ನೀನು ಸಾಲೆಯ ಕಟ್ಟೆಯನ್ನು ಹತ್ತದಿದ್ದರೂ ಎಲ್ಲವನ್ನು ಬಲ್ಲವಳು.

"ಎಲ್ಲ ತಿಳಿದರೂ ನಿಮ್ಮನ್ನು ತಿಳಿಯದಾಗಿರುವೆ ಗುರುಗಳೇ!" ಎಂದು ಉಗುಳು ನುಂಗಿ ಸುಮ್ಮನಾದಳು.

"ನನ್ನಲ್ಲಿ ಹೊಸದೇನಿಲ್ಲ ತಿಳಿದುಕೊಳ್ಳಲು, ಮೊದಲಿನಂತೆಯೇ

ಇರುವೆ."

"ಇಲ್ಲ ಬಿಡಿರಿ. ಹೊಸ ಹೆಂಡತಿಯು ಬಂದಮೇಲೆ ನೀವು ಸಂಪೂರ್ಣ ಹೊಸಬರಾಗಿರುವಿರಿ."

"ಏನಿಲ್ಲ."

"ನಿನ್ನೆ ಗುಣಿ ಹೇಳಿದಳು. ಗುರುಗಳು ಇತ್ತಲಾಗಿ ಬಹಳ ಸೊರಗಿರುವರು. ಅವರ ಮುಖದ ಮೇಲೆ ಮೊದಲಿನ ಕಳೆಯಿಲ್ಲ. ಮೊದಲಿನ ನಗೆಯಿಲ್ಲ" ಉಗುಳಿ ಬಂದು "ನಾನೂ ನಿಮ್ಮನ್ನು ನೋಡಿರಲಿಲ್ಲ. ಅವಳ ಮಾತು ನಿಜವಾದುದು."

"ಏನೂ ಸೊರಗಿಲ್ಲ ಗಂಗಮ್ಮ ?"

"ನೀವು ಹೀಗೆ ನುಡಿದರೆ ನಾನು ಒಪ್ಪಬಹುದೇ! ಗುರುಗಳೇ ಸೊರಗಿದ್ದುದು ನಿಜ. ಮನಸಿಗೆ ಯಾವುದೋ ವ್ಯಥೆಯು ಅಂಟಿಕೊಂಡಿದ್ದೆ. ನಿಮ್ಮ ಇಂದಿನ ಸಪ್ಪನ್ನ ಮುಖವನ್ನು ನೋಡಿ ನನಗೂ ವಿಷಾದವಾಗುವುದು. ಮಗಳಿಗೂ ವ್ಯಥೆಯಾಗಿದೆ. ಏನೋ ನಿಮ್ಮ ಮನೆಯ ಅನ್ನವನ್ನು ಬಹಳ ದಿನಗಳಿಂದ ತಿಂದಿರುವೆವು. ನೀವು ಸುಖವಾಗಿರಬೇಕೆಂಬ ಆಶೆಯು ಹೀಗೆ ಮಾತಾಡುತ್ತಿರುವುದು..." ಎಂದು ತಡೆದು ನಿಂತಳು.

ಗುರುಗಳು ಸುಮ್ಮನೆ ಕುಳಿತರು. ಗುಣವಂತಿಯು ಒಳಗಿನಿಂದ ಬಂದು ತಾಯಿಯ ಹತ್ತಿರ ಕುಳಿತಳು. ಗುರುಗಳು ಅವಳ ಮುಖವನ್ನು ನೋಡಿದರು ಅದೇ ನಗೆ, ಅದೇ ವಿನೋದ, ಅದೇ ರಸಭಾವ, ಅದೇ ತುಂಬಿದ ಮುಖ, ಅದೇ ತುಂಬಿದ ಎದೆ! ವಿಸ್ಮಯದಿಂದ ನೋಡಿದರು. ನೋಡನೋಡುತ್ತ ಮೈಯಲ್ಲಿ ಮಿಂಚಿನ ಸಂಚಾರವಾದಂತಾಯಿತು. ಗುಣವಂತಿಯು ಕೆಳಗೆ ಮುಖಮಾಡಿ ಎಲೆ–ಅಡಿಕೆಯ ಡಬ್ಬಿಯನ್ನು ಎಳೆದುಕೊಂಡು ಅಡಿಕೆಯನ್ನು ಕತ್ತರಿಸ ಹತ್ತಿದಳು.

"ನೀವು ಮದುವೆಯಾಗಲಿರುವಿರೆಂದು ಕೇಳಿ ಗುಣವಂತಿಯು ಝುರ‍್ರನೆ ಇಳಿದಳು. ಎರಡು ದಿನ ನನ್ನ ಮುಂದೆ ಏನೂ ಹೇಳಲಿಲ್ಲ. ಮೂಕಿಯಂತೆ ತುಂಬಿಕೊಂಡೇ ಇದ್ದಳು. ಒಂದು ದಿನ ಆಗ್ರಹಮಾಡಲು ಕೊನೆಗೆ ಹೇಳಿದಳು ಅದೂ ದುಃಖದಿಂದ. ಅದಕ್ಕೆ ನಾನು...."

"ಅದರಿಂದ ಇನ್ನೂ ಹಿತ ಗುಣವಂತಿ!" ಎಂದೆನು.

" ಅದು ಹೇಗೆ ? " ಎಂದು ಕೇಳಿದಳು.

" ಮನೆಯಲ್ಲಿ ಹೆಣ್ಣೊಂದು ಇದ್ದರೆ ಇನ್ನೊಂದು ಮನೆಯ ಹೆಣ್ಣು ತುಂಬ ಓಡಾಡುವುದು. ಭಯವಿಲ್ಲದೆ ಓಡಾಡುವುದು. ಒಂದೆರಡು ದಿನ ನಿಲ್ಲಲೂ ಅನುಕೂಲ. ಸುಮ್ಮನಿರು. ಗುರುಗಳು ಒಮ್ಮೆ ನಂಬಲಿ. ಅವರು ಎಂದೂ ಕೈಬಿಡಲಾರರು. ಎಂದು ನುಡಿದೆ. ಆದರೂ ಅವಳಿಗೆ ಸಮಾಧಾನವಿರಲಿಲ್ಲ. ನೀವು ಮದುವೆಯಾಗಿ ಬಂದ ಮೇಲೆ ನಾಲ್ಕಾರು ದಿನ ನಿಮ್ಮ ಮನೆಗೂ ಬರಲಿಲ್ಲ. ಸಿಟ್ಟಿನಲ್ಲಿಯೇ ಇದ್ದಳು. ನಾನು ಒತ್ತಾಯ ಮಾಡಿದರೂ ಹೋಗಲಿಲ್ಲ. ಕೊನೆಗೆ ನಾನೇ ಎಳೆದು ತಂದೆ. ಈಗ ಬರಹತ್ತಿರುವಳು. ನಿಮ್ಮನ್ನು ನೋಡಿ ಕಣ್ಣು ತುಂಬ ನೀರು ತಂದು—ಗುರುಗಳು ಸೊರಗಿರುವರು ! ಎಂದು ಹೇಳಿದಳು."

ಗುಣವಂತಿಯು ಎಲೆಯನ್ನು ಮಡಿಚಿ ಗುರುಗಳ ಮುಂದೆ ಹಿಡಿದಳು.

ಗುರುಗಳು ಸಂಕೋಚಪಟ್ಟರು.

" ತೆಗೆದುಕೊಳ್ಳಿರಿ ಗುರುಗಳೇ ! ನಿಮ್ಮ ನಿಮ್ಮ ಸ್ನೇಹ. ನಾನೇಕೆ ಅಡ್ಡ ಬರಲಿ " ಎಂದು ನಗುತ್ತ ನುಡಿದಳು ಗಂಗಮ್ಮ.

ಗುರುಗಳು ನಿರ್ವಾಹವಿಲ್ಲದೆ ತೆಗೆದುಕೊಂಡರು. ಆದರೆ ಅವರ ಕೈಗಳು ತತ್ತರಿಸುತ್ತಿದ್ದುವು.

ಗಂಗಮ್ಮ ಉಗುಳಿ ಬಂದು ಮತ್ತೆ ಎಲೆಗೆ ಸುಣ್ಣ ತೊಡೆಯಹತ್ತಿದಳು. ಮಗಳ ಕೈಯಿಂದ ಎಲೆ–ಅಡಿಕೆಯನ್ನು ಸ್ವೀಕರಿಸಿದುದು ತಾಯಿಗೆ ಸಂತೋಷವಾಯಿತು.

ಗುರುಗಳು ಎಲೆ–ಅಡಿಕೆಯ ಪಟ್ಟಿಯನ್ನು ಇನ್ನೂ ತಿಂದಿರಲಿಲ್ಲ. ಗುಣವಂತಿಯು ಚಟ್ಟನೆ ಎದ್ದು ಒಳಗೆ ಹೋಗಿ ಹಿತ್ತಲಗಿಡದ ನಾಲ್ಕಾರು ದೊಡ್ಡ ಪೇರಲಹಣ್ಣುಗಳನ್ನು ಹೆಚ್ಚಿ ತಂದು ತಟ್ಟೆಯಲ್ಲಿ ಇಟ್ಟಳು.

" ತೆಗೆದುಕೊಳ್ಳಿರಿ " ಎಂದು ವಿನಂತಿಸಿದಳು.

" ನೀನು."

" ನಾನೂ ತೆಗೆದುಕೊಳ್ಳುವೆ " ಎಂದು ಅವರ ಹತ್ತಿರ ಕುಳಿತು ಒಂದು ಹೋಳಿಗೆ ಉಪ್ಪು ಸವರಿ ಗುರುಗಳ ಕೈಗೆ ಕೊಟ್ಟಳು.

ಗಂಗಮ್ಮ ಒಳಗೆ ಹೋದಳು.

"ನೀನು ಗಂಗಮ್ಮ!" ಗುರುಗಳು ನುಡಿದರು.

"ಒಂದಿಷ್ಟು ಹೊಗೆಯಾಗಿದೆ. ಉರಿಮಾಡಿ ಬಂದೆ" ಎಂದು ನುಡಿಯುತ್ತ ಅದೃಶ್ಯಳಾದಳು.

ಗುರುಗಳು ಒಂದೊಂದಾಗಿ ಪೇರಲಹಣ್ಣಿನ ಹೋಳುಗಳನ್ನು ತಿನ್ನ ಹತ್ತಿದರು. ಗುಣವಂತಿಯು ಗುರುಗಳ ಎಡಗೈಯನ್ನು ಹಿಡಿದಳು. ಅವರು ಆಕೆಯನ್ನು ಭಯ—ಆಶ್ಚರ್ಯದಿಂದ ನೋಡಹತ್ತಿದರು. ಮತ್ತೊಂದು ಹೋಳು ಕೊಟ್ಟಳು. ಗುರುಗಳ ಮುಖದ ಮೇಲೆ ಇನ್ನೂ ಅದೇ ಕಳೆ ಯಿದ್ದಿತು.

"ಅಂಜಿದಿರಾ?" ಮೆಲ್ಲಗೆ ಕೇಳಿದಳು.

"ಅಂಜದೇನು! ನಿನ್ನ ತಾಯಿ ಇರುವಳು."

"ಅವಳಿಗೆ ಹೆದರಬೇಡಿ."

"ಯಾರಾದರು ಬಂದರೆ!"

"ಯಾರೂ ಬರುವಂತಿಲ್ಲ."

"ನನಗಂತೂ ಹೆದರಿಕೆ."

"ನಾನು ಹೆದರಿಕೆಯನ್ನು ಒರಸಿ ತೆಗೆಯುವೆ" ಎಂದು ಸೆರಗಿನಿಂದ ಗುರುಗಳ ಮುಖವನ್ನು ಒರಸಿದಳು.

ಗುರುಗಳು ತಡೆಯುತ್ತ "ಹೀಗೆಯೇ!" ಎಂದರು.

"ಹೀಗೆ ಒರಸಿಮತ್ತೆ...." ಎನ್ನುತ್ತ ಗಟ್ಟಿಯಾಗಿ ಮುಖವನ್ನು ಹಿಡಿದು ಎರಡುಮುತ್ತುಗಳನ್ನು ಕೊಟ್ಟಳು.

ಗುರುಗಳ ಮುಖವು ಇನ್ನೂ ಭಯದಿಂದ ತುಂಬಿಕೊಂಡಿತು. ಮೈತುಂಬ ಬೆವುರುಗಟ್ಟಿತು. ಕೈ–ಕಾಲುಗಳು ತತ್ತರಿಸಿದಂತಾದುವು.

"ಎರಡು ದಿನ ಹೆದರಿಕೆ. ಆಮೇಲೆ ನಾನೇ ನಿಮಗೆ ಹೆದರಬೇಕಾಗು ವುದು" ಎಂದು ನುಡಿದಳು.

ಪೇರಲ ಹೋಳುಗಳು ತೀರಿದುವು.

"ಅವ್ವ, ಕೈತೊಳೆಯಲು ನೀರು ತಾ" ಎಂದು ಅಡಿಗೆಯ ಮನೆಯ ಕಡೆಗೆ ಮುಖಮಾಡಿ ಕೂಗಿದಳು.

ಗಂಗಮ್ಮ ನೀರು ತಂದಳು. ಗುರುಗಳು ಕೈತೊಳೆದು ಮೇಲೆದ್ದರು.

" ಹೋಗುವೆ ಗಂಗಮ್ಮ! " ಎಂದರು. ದನಿಯಲ್ಲಿ ಕಂಪನವಿದ್ದಿತು.

" ಹೋಗಬಹುದು ಗುರುಗಳೇ! ಆದರೆ ಒಂದು ಮಾತು...."

" ಏನು ? "

" ಮನೆಯಲ್ಲಿ ಮೆತ್ತಗೆ ಮಲಗಲು ಗಾದಿಯನ್ನು ಹೊಲಿಸಿದರೆ ನಾನು ದುಃಖಪಡಲಾರೆ. ಆದರೆ ಮೊದಲು ಕಂಬಳಿಯ ಮೇಲೆ ಮಲಗುತ್ತಿದ್ದುದನ್ನು ಮರೆಯಬಾರದು. ಕಂಬಳಿಯನ್ನು ಹಾಸಿ, ಅದರ ಮೇಲೆ ಗಾದಿಯನ್ನು ಉರುಳಿಸಿ ಮಲಗಿದರೆ ಇನ್ನೂ ಒಳ್ಳೆಯದು! ನೀವು ನೋಡಿರಿ. ವಿಚಾರಿಸಿರಿ " ಎಂದಳು.

" ನನಗೆ ತಿಳಿಯಲಿಲ್ಲ." ಹುಸಿನಕ್ಕು ನುಡಿದರು.

" ನನ್ನ ಮಗಳು ನಿಮಗೆ ತಿಳಿಸುವಳು " ಎಂದು ನಗಹತ್ತಿದಳು.

" ಅವಳಿಂದಲೇ ಅದನ್ನು ಕಲಿಯುವುದಿದ್ದರೆ ಕಲಿಸಲಿ " ಎಂದು ನುಡಿದು ತುಟಿಯಮೇಲೆ ಮುಗುಳುನಗೆಯನ್ನು ತಂದು ಬಾಗಿಲಿನಿಂದ ಹೊರಬಿದ್ದರು.

ಆಗ ಕತ್ತಲಾಗಿದ್ದಿತು. ಓಣಿಯಿಂದ ಓಣಿಗೆ ಸಾಗುತ್ತ ಮನೆಗೆ ಬಂದರು. ಕರುಣನು ಕೋಣೆಯಲ್ಲಿ ಕುಳಿತಿದ್ದನು. ಕಲ್ಯಾಣಿ ಒಳಗೆ ಕೆಲಸದಲ್ಲಿ ತೊಡಗಿದ್ದಳು. ತಮ್ಮ ಕೋಣೆಯನ್ನು ಸೇರಿ ಬಟ್ಟೆಗಳನ್ನು ಬದಲಿಸಿ ಹಾಯಾಗಿ ಕುಳಿತರು.

ಸಂಜೆಯ ಅಡಿಗೆಯಾಯಿತು. ಕರುಣ ಮತ್ತು ಗುರುಗಳ ಊಟವಾಯಿತು. ಕಲ್ಯಾಣಿಯು ತನ್ನ ಊಟವನ್ನು ತೀರಿಸಿ, ಕೆಲಸ-ಬೊಗಸೆಗಳನ್ನು ಮುಗಿಸಿ, ಹಿತ್ತಲ ಬಾಗಿಲನ್ನು ಗಟ್ಟಿಯಾಗಿ ಇಕ್ಕಿ, ದೇವರ ಮುಂದೆ ದೀಪವನ್ನು ಹಚ್ಚಿ, ನಮಸ್ಕರಿಸಿ ಹಾಸಿಗೆಯ ಮೇಲೆ ಅಡ್ಡಾದಳು. ಕರುಣನು ಆಗ ತನ್ನ ಕೋಣೆಯಲ್ಲಿ ಗುರುಗುರಿಸುತ್ತಿದ್ದನು.

ಗುರುಗಳು ತಮ್ಮ ಹಾಸಿಗೆಯನ್ನು ಉರುಳಿಸಿದರು. ಮೈಮೇಲಿನ ಬಟ್ಟೆಗಳನ್ನು ತೆಗೆದು ಗೂಟಕ್ಕೆ ಹಾಕಿದರು. ತಲೆಯ ಕಡೆಗೆ ಇಟ್ಟ ದೀಪವನ್ನು ಪಕ್ಕದಲ್ಲಿ ಇಟ್ಟುಕೊಂಡರು. ಮುಂದಿನ ಬಾಗಿಲನ್ನು ಗಟ್ಟಿಯಾಗಿ ಇಕ್ಕಿ ಚಿಲಕವನ್ನು ಹಾಕಿದರು. ಹಿತ್ತಲ ಬಾಗಿಲು ಇಕ್ಕಿದೆಯೋ ಇಲ್ಲವೋ ಪರೀಕ್ಷಿಸಿದರು. ದೇವರ ಮುಂದೆ ದೀಪವು ಮಿಣಮಿಣಯಾಗಿ ಉರಿಯುತ್ತಿದ್ದಿತು. ಆ ಮಂದ ಪ್ರಕಾಶದಲ್ಲಿ ದೇವರಿಗೆ ನಮಸ್ಕರಿಸಿದರು. ಬಾಗಿಲ ಮುಂ-

ಗೋಡೆಗೆ ಹತ್ತಿ ಕಲ್ಯಾಣಿಯು ಮಲಗಿದ್ದಳು. ನಿದ್ದೆ ಹತ್ತಿದಂತೆ ಕಾಣುತ್ತಿದ್ದಿತು. ಮುಖವನ್ನು ನೋಡಬೇಕೆಂದರು. ಆದರೆ ಗೋಡೆಯ ಕಡೆಗೆ ಮಗ್ಗುಲಾಗಿ ಮಲಗಿದ್ದಳು. ಒಂದೆರಡು ನಿಮಿಷ ನಿಂತರು. ಅವಳ ದೇಹವು ಚದ್ದರದ ಒಳಗೆ ನೀಳವಾಗಿ ಕಾಲುಬಿಟ್ಟು ಮಲಗಿದ್ದಿತು. ಸ್ಥೂಲವೂ ಅಲ್ಲ, ಸೀರವೂ ಅಲ್ಲ. ಹಾಳತವಾದ ಶರೀರ ಹಾಸಿಗೆಯ ಮೇಲೆ ಎತ್ತರವಾಗಿ ಮಲಗಿದ್ದಿತು. ಅವಳ ಸುಪ್ತ ಮತ್ತು ಗುಪ್ತವಾದ ದೇಹವು ಇನ್ನೂ ರಮಣೀಯವಾಗಿ ಕಾಣಹತ್ತಿತು.

ಕಲ್ಯಾಣಿಯು ಒಂದಿಷ್ಟು ಸಾದುಗಪ್ಪು. ಸಬಕಾರವನ್ನು ಹಚ್ಚಿ ತಿಕ್ಕಿಕೊಳ್ಳುತ್ತಿದ್ದಳು. ಅದರಿಂದ ಮೈಗೆ ಒಂದು ಬಗೆಯ ಮೆರುಗು ಬರುತ್ತಿದ್ದಿತು. ಆ ಸಾದುಗಪ್ಪಿನ ಮೇಲೆ ಅಂಟಿಕೊಂಡ ಸಬಕಾರದ ಬೆಳ್ಳನ್ನ ಪರೆ ಅವಳ ಕಪ್ಪು ಬಣ್ಣವನ್ನು ಕಡಿಮೆ ಮಾಡಲು ಸಹಕಾರಿಯಾಗುತ್ತಿದ್ದಿತು. ಮುಖಕ್ಕೆ ಮುಖ ಚೂರ್ಣವನ್ನು ಬಳಿದುಕೊಳ್ಳುತ್ತಿದ್ದಳು. ಅದು ತುಂತರವಾಗಿ ಮುಖದ ತುಂಬ ಅಂಟಿ ಇನ್ನಷ್ಟು ಮೆರುಗನ್ನು ಹುಟ್ಟಿಸುತ್ತಿದ್ದಿತು. ಅದರ ಗಮಗಮ ವಾಸನೆಯು ಜೀವಕ್ಕೆ ಸೌಖ್ಯವನ್ನು ಒದಗಿಸುತ್ತಿದ್ದಿತು. ಅಂಥ ಸೌಮ್ಯ-ಸುಕುಮಾರ ಮುಖದ ಮೇಲೆ ಬೊಟ್ಟು ಕುಂಕುಮ. ಅರುಣೋದಯದ ನೆನಪನ್ನು ತರುತ್ತಿದ್ದಿತು. ಮೂಗಿನೊಳಗಿನ ವಜ್ರದ ಮೂಗುಬಟ್ಟು, ಕಿವಿಯೊಳಗಿನ ಬೆಂಡೋಲೆ, ಕೊರಳ ಮಂಗಲಸೂತ್ರ, ಕುರುಳು ಕುರುಳಾದ ಮುಂಗೂದಲಿನ ಹಣೆ, ತಲೆಯ ಮಿಂಚುವ ಮೆತ್ತನ್ನ ಕರಿಯ ಕೂದಲು ಇವುಗಳ ಆವರಣದಲ್ಲಿ ಮುಖವು ಇನ್ನೂ ಸೌಂದರ್ಯವರ್ಧಕವಾಗಿ ಕಾಣುತ್ತಿದ್ದಿತು. ಉಬ್ಬಿನಗಲ್ಲ ಶೃಂಗಾರಸಾರವನ್ನು ತುಂಬಿಕೊಂಡ ಬಟ್ಟಲಗಳಾಗಿದ್ದುವು. ದುಂಡನ್ನ ತೋಳು, ನೀಳವಾದ ಬೆರಳು ನಯನ ಮನೋಹರವಾಗಿದ್ದುವು. ಇಂಥ ಕೋಮಲವಾದ ದೇಹವು ಮುಸುಕಿನಲ್ಲಿ ಮಲಗಿದ್ದಿತು. ಗುರುಗಳು ಏನನ್ನೋ ಜ್ಞಾಪಿಸಿಕೊಂಡು ಕೋಣೆಗೆ ಬಂದರು. ಹಾಸಿಗೆಯ ಮೇಲೆ ಕುಳಿತರು. ತಲೆಯೊಳಗಿನ ವಿಚಾರ ಚಕ್ರವು ಕೃತಿಯಲ್ಲಿ ಇಳಿಸುವಂತೆ ಪ್ರೇರೇಪಿಸುತ್ತಿದ್ದಿತು. ಏಳು ಏಳೆಂದು ಪ್ರಚೋತಿಸುತ್ತಿದ್ದಿತು. ಗುರುಗಳು ನೇಳೆಯ ದಾರಿಯನ್ನು ನೋಡುತ್ತ ಹಾಗೇ ಕುಳಿತರು. ಅರ್ಧತಾಸು ಕಳೆಯಿತು. ಪಕ್ಕದಲ್ಲಿಯ ಲಾಂದರು ಹೊಗೆಯಿಲ್ಲದೆ ಉರಿಯುತ್ತಿದ್ದಿತು. ಕೋಣೆಯ

ತುಂಬ ಬೆಳಕು ಬಿದ್ದು ಎಲ್ಲವು ನಿಚ್ಚಳವಾಗಿ ಕಾಣುತ್ತಿದ್ದುವು. ಬಾಗಿಲ ಹೊರಗೆ ನೋಡಿದರು. ಒಂದಿಷ್ಟು ತಿಳಿಗತ್ತಲೆ. ಗುರುಗಳ ವಿಚಾರಚಕ್ರ ಭರದಿಂದ ತಿರುಗಹತ್ತಿತು. ದಾರಿಯು ಮಾತ್ರ ನಿಚ್ಚಳವಾಗಲಿಲ್ಲ. ಎಚ್ಚತ್ತ ಮನಸು ಹುಡುಕಲು ಹವಣಿಸುತ್ತಿದ್ದಿತು. ಎದುರಿನ ಬಾಗಿಲು ತೆರೆದಿದ್ದರೂ ಇನ್ನೂ ಸಿಕ್ಕಿರಲಿಲ್ಲ. ಹಾಸಿಗೆಯ ಮೇಲೆ ಹಾಗೆಯೇ ಕುಳಿತಿದ್ದರು.

ಮೂರು ಸಂಜೆಯ ಮುಂದಿನ ಗುಣವಂತಿಯ ರಸಕೇಳಿಯ ಆಟ ಕಣ್ಣ ಮುಂದೆ ಸುಳಿಯಿತು. ಅವಳ ಜೋಲುಬಿದ್ದ ತುಟಿಯ ಬಿಸಿಬಿಸಿಯಾದ ಮುತ್ತು ಕೆನ್ನೆಯ ಮೇಲೆ ಇನ್ನೂ ಮೂಡಿ ನಿಂತಿದ್ದುವು. ಅವಳ ತುಂಬಿದ ತೆಂಗಾಯ ಮೊಲೆಯ ಬೆಚ್ಚನ್ನ ಮುದ್ರೆ ಇನ್ನೂ ಅಂಟಿಕೊಂಡಿದ್ದಿತು. ಅವಳ ಗಾಢವಾದ ಅಪ್ಪುಗೆಯ ಬಾಸುಳಗಳು ಹೃದಯದ ಮೇಲೆ ಇನ್ನೂ ಮೂಡಿದ್ದುವು. ಎಂಥ ರುಚಿಯಾದ ಮುತ್ತುಗಳು ! ಎಂಥ ಬಿಗುವಿನ ಅಪ್ಪುಗೆಯು ! ಗುರುಗಳ ರೋಮರೋಮಗಳಲ್ಲಿ ಸವಿಜೇನು ತುಳುಕಾಡಿತು. ನವಿತಿದ್ದು ನಿಂತುವು. ಶೃಂಗಾರ ಚೇಷ್ಟೆಯಿಂದ ಉತ್ಸಾಹಗೊಂಡ ಜೀವವು ಪುಟಿದೆದ್ದಿತು. ಪೂರ್ವರಂಗದ ಆಟವೆಲ್ಲ ಮುಗಿದಿದ್ದಿತು. ಉತ್ತರರಂಗಕ್ಕೆ ದೇಹದ ಚೈತನ್ಯವು ಹಂಬಲಿಸುತ್ತಿದ್ದಿತು. ಕೈಯ ಸ್ನಾಯುಗಳು ಪ್ರಸರಣಾಕುಂಚನವನ್ನು ಹೊಂದುತ್ತಿದ್ದುವು. ಕಾಲಿನ ಮೀನಗಂಡಗಳು ಕುಣಿಯುತ್ತಿದ್ದುವು. ಎದೆಯ ಎಲುವುಗಳು ಹಿಗ್ಗಿ–ತಗ್ಗಾಗುತ್ತಿದ್ದುವು. ತಲೆಯ ಕಡೆಗೆ ರಕ್ತವು ಚಿಮ್ಮಿಕೊಂಡು ನಡೆದಿದ್ದಿತು. ಗುರುಗಳಿಗೆ ಇನ್ನು ಕುಳಿತಿರುವುದು ಅಸಹ್ಯವಾಯಿತು. ಪಕ್ಕದ ಲಾಂದರನ್ನು ಹತ್ತರ ಎಳೆದುಕೊಂಡರು. ಅದರ ಗಾಜನ್ನು ಬೆರಳಿನಿಂದ ಮುಟ್ಟಿ ನೋಡಿದರು. ಬಿಸಿಯಾಗಿದ್ದಿತು. ಸುಟ್ಟ ಭಾವನೆಯು ಸ್ಪಷ್ಟವಾಯಿತು. ದೀಪವನ್ನು ಚಿಕ್ಕದು ಮಾಡಿದರು. ಬಲಗೈಯಲ್ಲಿ ಹಿಡಿದುಕೊಂಡು ಹರೇ ರಾಮ ಹರೇ ರಾಮ ರಾಮರಾಮ ಹರೇ ಹರೇ ! ಎಂದು ಗಂಟಲಲ್ಲಿ ಜಪಿಸಿ ಮೇಲೆದ್ದರು. ಆದರೂ ಮಾನಸಿಕ ಒಲವಿಗೂ, ಶಾರೀರಿಕ ಉತ್ಸಾಹಕ್ಕೂ ಹೊಂದಾಣಿಕೆ ಇರಲಿಲ್ಲ. ಒಂದು ಕ್ಷಣದಲ್ಲಿ ನೂರು ಗಾವುದ ಓಡುವ ಸಾಮರ್ಥ್ಯವನ್ನು ತೋರಿಸಿದರೆ ಇನ್ನೊಂದು ನಾಲ್ಕು ಹೆಜ್ಜೆ ನಡೆಯಲು ನಿತ್ರಾಣವಾಗಿದ್ದಿತು. ಆದರೂ ಎದ್ದರು. ಜೋಲಿ ಹೋದಂತೆ ಕಂಡಿತು. ಗೋಡೆಯನ್ನು ಹಿಡಿದು ಸುಧಾರಿಸಿಕೊಂಡರು. ಆ ಪ್ರಕಾಶದಲ್ಲಿಯೂ ಕಣ್ಣ

ಮುಂದೆ ಕತ್ತಲೆಯ ಉದ್ದವಾದ ಪರದೆ ಮೆಲ್ಲಗೆ ಸಾಗಿಹೋಯಿತು. ಕಣ್ಣು ಮುಚ್ಚಿ ಅದನ್ನೂ ದಾಟಿಸಿದರು. ಒಂದಿಷ್ಟು ಬಲಸಂಗ್ರಹವಾದಂತೆನಿಸಿತು. ಎರಡು ಹೆಜ್ಜೆ ಮುಂದೆ ಇಟ್ಟರು. ಇನ್ನೂ ಬಲ ಬಂದಿತು. ನಡುಮನೆಯನ್ನು ದಾಟಿ ಅಡಿಗೆಯ ಮನೆಯ ಬಾಗಿಲಿಗೆ ಬಂದರು. ಮತ್ತೆರಡು ಹೆಜ್ಜೆ ಇಟ್ಟು ಒಳಗೆ ಬಂದರು. ಈಗ ಕಲ್ಯಾಣಿಯ ಹಾಸಿಗೆಯ ಪಕ್ಕದಲ್ಲಿ ನಿಂತರು. ಕಲ್ಯಾಣಿಯು ಇನ್ನೊಂದು ಮಗ್ಗುಲಾಗಿ ಮಲಗಿದ್ದಳು. ಮುಖದ ಮೇಲಿನ ಹೊದಿಕೆ ಕೆಳಗೆ ಸರಿದಿದ್ದಿತು. ಎದೆಯೂ ಅರ್ಧ ಕಾಣುತ್ತಿದ್ದಿತು. ಬಲಗಾಲು ಹೊರಗೆ ಬಂದು ಸೀರೆಯು ಮೇಲೇರಿದ್ದಿತು. ಗುರುಗಳಿಗೆ ಹೆಂಡತಿಯ ಇಷ್ಟು ಅಂಗ ದರ್ಶನ, ಸೌಂದರ್ಯ ದರ್ಶನ ಸಾಕಾದುವು. ಜೀವ ಹ! ಎಂದಿತು. ಹರ್ಷರೋಮಾಂಚನಗಳು ಎದ್ದು ನಿಂತುವು. ಕಲ್ಯಾಣಿಯು ಗುಣವಂತಿಯ ಹತ್ತು ಪಟ್ಟು ಚೆಲುವೆ! ಸಾವಿರ ಪಟ್ಟು ಚೆಲುವೆ!! ಅವಳೆತ್ತ, ಇವಳೆತ್ತ! ಇದು ಮೀಸಲ ಹೆಣ್ಣು. ಅದು ಆಶೆಯ ಹೆಣ್ಣು. ಒಂದು ನನಗಾಗಿ ಬಂದಿದೆ. ಒಂದಕ್ಕೆ ನಾನಾಗಿ ಹೋಗಬೇಕು. ಒಂದು ಜೀವಕ್ಕೆ ಹೊಂದಿಕೊಳ್ಳುವುದು. ಇನ್ನೊಂದು ಜೀವವನ್ನು ಹಿಂಡಿಕೊಳ್ಳುವುದು. ಒಂದು ಮನೆಯೂಟ— ಇನ್ನೊಂದು ಛತ್ರದ ಊಟ! ಹೀಗೆ ಸಾವಿರಾರು ದ್ವಂದ್ವಗಳು ಸುಳಿದಾಡಿದುವು. ನಿಂತು ಬಹಳ ಹೊತ್ತಾಗಿದ್ದಿತು. ಗುರುಗಳು ಕಲ್ಯಾಣಿಯ ಹಾಸಿಗೆಯ ಮೇಲೆ ಮೆಲ್ಲಗೆ ಕುಳಿತರು. ದೀಪವನ್ನು ಅಲ್ಲಿಯೇ ಇಟ್ಟರು. ಹೆದರಬಹುದೆಂಬ ಭಾವನೆಯು ಬಂದಿತು. ತಾವೇ ತುಂಬಾ ಹೆದರಿದ್ದರು. ತಮ್ಮ ಹೆದರಿಕೆಯನ್ನು ಮುಚ್ಚಿಕೊಂಡು, ಅವಳಿಗೆ ಧೈರ್ಯ ಹುಟ್ಟಲೆಂದು ಸಾವರಿಸಿ ಕುಳಿತರು. ದೀಪವನ್ನು ಒಂದಿಷ್ಟು ಎತ್ತರಿಸಿದರು. ಒಣಗಿದ ನಾಲಿಗೆಯನ್ನು ಹಸಿಮಾಡಿಕೊಂಡರು. ತುಟಿಗಳ ಮೇಲೆ ಸವರಿದರು. ಬೆರಳುಗಳನ್ನು ಮುರಿದುಕೊಂಡರು. ಕಿವಿಗಳನ್ನು ತುರಿಸಿಕೊಂಡರು. ಕಣ್ಣುಗಳನ್ನು ತಿಕ್ಕಿಕೊಂಡರು. ನಡುವೆ ಬಂದ ಆಕಳಿಕೆಗಳನ್ನು ತಡೆ ಹಿಡಿದರು. ಹೀಗೆ ಜೀವವನ್ನು ಗಟ್ಟಿ ಮಾಡಿಕೊಂಡರು. ಹೃದಯದ ಹೊಡೆತಗಳು ಕಡಿಮೆಯಾಗಲೆಂದು ನಾಲ್ಕೈದು ದೀರ್ಘಶ್ವಾಸಗಳನ್ನು ಎಳೆದರು. ದೇವರ ಕಡೆಗೆ ಕೈಮಾಡಿ ನಮಸ್ಕರಿಸಿದರು. ಮನದಲ್ಲಿ ಐದಾರು ಸಾರೆ ರಾಮನಾಮ ಜಪವನ್ನು ಮಾಡಿದರು.

"ರಾಮರಾಮ!" ಎಂದು ಗಂಟಲಲ್ಲಿ ನುಡಿದು ಕಲ್ಯಾಣಿ! ಎಂದರು.

ಕಲ್ಯಾಣಿಯ ಪ್ರಥಮೋಚ್ಚಾರವು ಗಂಟಲಿನ ಹೊರಗೆ ಬರಲಿಲ್ಲ.

ಗುರುಗಳು ನಿರ್ಧರಿಸಿಕೊಂಡು ಕುಳಿತಿದ್ದರು. ಹೆಂಡತಿಯನ್ನು ಎಚ್ಚರಿಸಬೇಕು. ಅವಳು ಸಹಸಾ ಹೆದರುವಳು ಹೆದರಿಕೆಯು ಬಾರದಂತೆ ಜಾಗ್ರತೆಯನ್ನು ವಹಿಸಬೇಕು. ಮುಂದೆ ಪ್ರೀತಿಯ ಪಲ್ಲವಿಯನ್ನು ಹಾಡಿ ವಳಪಡಿಸಿಕೊಳ್ಳಬೇಕು. ಒಮ್ಮೆ ವಶಳಾದಳೆಂದರೆ ಮುಂದೆ ಬೇಕಾದ ಕಡೆಗೆ ನದಿಯ ನೀರನ್ನು ಹರಿಸಿದಂತೆ ನಡೆಯುಬಹುದು. ಎಂಬ ನಿರ್ಧಾರ ಅಚಲವಾಗದಂತೆ, ಮನಸನ್ನು, ಮಾತನ್ನು, ಆಶೆಗಳನ್ನು ಹೊಂದಿಸಿಕೊಂಡು ತಾಳ್ಮೆಯ ಶಿರೋಮಣಿಗಳಾಗಿ ಕುಳಿತಿದ್ದರು.

ಹೆಂಡತಿಯು ಎದ್ದ ಲಕ್ಷಣಗಳು ಕಂಡುಬರಲಿಲ್ಲ. ಒಂದಿಷ್ಟು ತಡೆದು ಕಲ್ಯಾಣಿ! ಎಂದರು.

ಈಗಲೂ ಏಳಲಿಲ್ಲ.

ಅವಳ ವಿಶಾಲವಾದ ಹಣೆಯ ಮೇಲೆ ಕೈಯಿಟ್ಟು–ಕಲ್ಯಾಣಿ! ಎಂದರು.

ಕಲ್ಯಾಣಿಯು–ಹ! ಎಂದು ಇನ್ನೊಂದು ಮಗ್ಗುಲಾದಳು.

ಸಂಪೂರ್ಣ ಸೆರಗು ಸರಿದುಹೋಯಿತು. ಒಂದು ಭಾಗದ ಕುಪ್ಪಸವೂ ಮೇಲೇರಿತು. ಕಲ್ಯಾಣಿಯ ಅಮೃತ ಕಲಶದಂಶಹ ತೋರಮಾಲೆಯನ್ನು ಗುರುಗಳು ಕಣ್ಣು ಬಿಟ್ಟು ನೋಡಿದರು. ಅಂಗ ಪ್ರತ್ಯಂಗಗಳ ಗುಪ್ತ ಸೌಂದರ್ಯಕ್ಕೆ ಗುರುಗಳು ದಿಗ್ಭ್ರಾಂತರಾದರು. ಆದರೂ ತಮ್ಮ ಮೇಲೆ ತಾಳ್ಮೆಯ ಹಿಡಿತವನ್ನಿಟ್ಟುಕೊಂಡಿದ್ದರಿಂದ ಸುಮ್ಮನಿದ್ದರು. ಇದು, ಇವು ಎಲ್ಲವೂ ನನ್ನವು! ಏಕೆ ಅವಸರ. ಎಂಬ ಶಾಂತಿಮಂತ್ರವನ್ನು ಊದಿ ಉಚ್ಚೇರಿದ್ದ ಉನ್ಮಾದವನ್ನು ತಡೆಗಟ್ಟಿ ಮತ್ತೆ—

“ಕಲ್ಯಾಣಿ, ನಾನು ಬಂದಿರುವೆ–ಏಳು” ಎಂದು ಕೈಹಿಡಿದರು.

ಅರಳು ಮಲ್ಲಿಗೆಯ ಮಾಲೆಯನ್ನು ಹಿಡಿದಷ್ಟು ಮೆತ್ತಗೆ! ಗುರುಗಳ ಜೀವ ಹಾ! ಎಂದಿತು.

ಕಲ್ಯಾಣಿಯು “ಯಾರು?” ಎಂದು ಕಣ್ಣು ಬಿಟ್ಟಳು.

“ನಾನು ಕಲ್ಯಾಣಿ! ನಾನು ನಿನ್ನ ಪತಿ. ನಿನ್ನ ಬಳಿಗೆ ಬಂದಿರುವೆ” ಎಂದು ದೀನನಂತೆ ನುಡಿದರು.

ಕಲ್ಯಾಣಿಯು ಚಟ್ಟನೆ ಎದ್ದು ಹಾಸಿಗೆಯ ಮೇಲೆ ಕುಳಿತಳು. ಅಸ್ತ

ವ್ಯಸ್ತವಾದ ಬಟ್ಟೆಗಳನ್ನು ಸರಿಪಡಿಸಿಕೊಂಡಳು. ಗೋಡೆಗೆ ನೆಂಬಿ ಗುರುಗಳನ್ನು ನೋಡಿದಳು.

" ಎಚ್ಚರಾದೆಯಾ ಕಲ್ಯಾಣಿ ? " ಎಂದು ಕೇಳಿದರು.

ಮತ್ತೊಮ್ಮೆ ನೋಡಿದಳು.

" ಎಚ್ಚತ್ತಿರುವೆಯಷ್ಟೇ ! " ಎಂದು ಅವಳ ಕೈಯನ್ನು ಮೆಲ್ಲಗೆ ಎತ್ತಿಕೊಂಡು ಅವಳನ್ನು ನೋಡಿದರು.

" ಹ! ಎಚ್ಚತ್ತಿರುವೆ." ಕಲ್ಯಾಣಿ ನುಡಿದು ಸುಮ್ಮನಾದಳು.

ಗುರುಗಳು ಆಕೆಯ ಎದುರು ಅಭಿನವ ಸೌಜನ್ಯ-ಸ್ನೇಹ-ಗಾಂಭಿರ್ಯದ ಪ್ರತಿಮೆಯಾಗಿ ಕುಳಿತರು. ಆಕೆಯ ಕೈಯನ್ನು ತಮ್ಮ ಎಡಗೈಯಲ್ಲಿ ಹಿಡಿದು ಬಲಗೈಯಿಂದ ಬಳೆಗಳ ಮೇಲೆ ಬೆರಳುಗಳನ್ನು ಆಡಿಸುತ್ತ—

" ನೀನು ಹೆದರುವೆಯೋ! ಎಂದು ತಿಳಿದಿದ್ದೆ. ಹೆದರಲಿಲ್ಲವಷ್ಟೇ ? " ಎಂದು ಮೆಲ್ಲಗೆ ಕೇಳಿದರು.

ಗುರುಗಳಿಗೆ ಯಾವ ಮಾತಿನಿಂದ ವಿಷಯಕ್ಕೆ ಬಂದು ಮುಟ್ಟಬೇಕೆಂಬುದು ತಿಳಿಯಲಿಲ್ಲ. ಹೀಗೆ ತುಂಡು ಮಾತುಗಳನ್ನು ಆಡಿ ಮಧ್ಯದಲ್ಲಿ ನಿಂತು ಮತ್ತೊಂದು ಮಾತಿನಿಂದ ಸಾಗಬೇಕಾಯಿತು.

ಕಲ್ಯಾಣಿಯು ಉತ್ತರವನ್ನು ಕೊಡಲಿಲ್ಲ.

" ಹೋಗಲಿ. ಈಗಲಾದರು ಹೆದರಿಕೆ ಇಲ್ಲವಷ್ಟೇ ! "

" ಹ....! "

ಕಲ್ಯಾಣಿಯು ನಿಜವಾಗಿ ಹೆದರಿಕೊಂಡಿದ್ದಳು. ಈ ಪ್ರಾಣಿಯು ಯಾವ ಸಮಯದಲ್ಲಿ ಹೇಗೆ ನಡೆಯಬಹುದು, ಏನು ಮಾಡಬಹುದು ! ಎಂಬುದನ್ನು ತಿಳಿಯಲು ಸಾಧ್ಯವಿರಲಿಲ್ಲ. ತನ್ನ ಮಗನ ಊಟದ ಸಂಬಂಧ ಆಡಿಕೊಂಡ ತಂದೆ ಹೆಂಡತಿಯ ಸಂಬಂಧ ಆಡಿಕೊಳ್ಳಲು ಎಂಥೆಂಥ ಮಾತುಗಳನ್ನು ಹೃದಯದಲ್ಲಿ ತುಂಬಿಕೊಂಡಿವೆ ಎಂಬುದನ್ನು ಯಾರು ನಿರ್ಣಯಿಸಬಲ್ಲರು ? ಈ ಅವ್ಯಕ್ತ ಸ್ವಭಾವಕ್ಕೆ ದಿನಂಪ್ರತಿ ಹೆದರಿಕೊಂಡು ನಡೆದಿದ್ದಳು. ಈಗ ಅದನ್ನೇನು ಮಾಡುವುದು. ಪ್ರಸಂಗದಲ್ಲಿ ತಾನೇ ಹೊರಬೀಳುವುದು. ಈಗ ದಾಟಿದರೆ ಸಾಕೆಂದು ಹ ! ಎಂಬ ಉತ್ತರದಲ್ಲಿ ಮುಗಿಸಿದಳು.

ಗುರುಗಳು ಇನ್ನಷ್ಟು ಮುಂದೆ ಸರಿದರು.

" ನಾನು ನಿನ್ನ ಕಡೆಗೆ ಬಂದಿರುವೆ ಕಲ್ಯಾಣಿ ! " ಗುರುಗಳು ನಾಲ್ಕಾರು ಶಬ್ದಗಳನ್ನು ಕೂಡಿಸಿ ಹೇಗೋ ನುಡಿದರು.

" ಏಕೆ ! ಏನು ಕೆಲಸ ? " ಕಲ್ಯಾಣಿ ಕೇಳಿದಳು.

" ಹೆಂಡತಿಯ ಹತ್ತರ ಗಂಡನ ಕೆಲಸವೇನಿರುವುದು? ನೀನೇ ಹೇಳು ? "

" ನನಗೆ ತಿಳಿಯದು."

" ತಿಳಿದಿದೆ. ಹೇಳಲಾರೆ "

ಉತ್ತರವನ್ನು ಕೊಡಲಿಲ್ಲ.

" ಪ್ರೇಮದ ನಾಲ್ಕು ಶಬ್ದ, ನಾಲ್ಕು ಮಾತು. ಅವುಗಳನ್ನು ಕೇಳಲು ಬಂದಿರುವೆನು."

" ಆ ನಾಲ್ಕು ಶಬ್ದಗಳನ್ನು ಕೇಳಲು ನಾಳಿನ ಹಗಲು ಇತ್ತಲ್ಲ. ಈಗ ರಾತ್ರಿ ಬಹಳವಾಗಿದೆ."

" ಪ್ರೇಮಕ್ಕೆ ಹಗಲೇನು, ರಾತ್ರಿಯೇನು ! ಅದು ಅಖಂಡವಾಗಿರುವುದು ಕಲ್ಯಾಣಿ ! "

ಕಲ್ಯಾಣಿಯು ಇಂಥ ಸಕ್ಕರೆಯ ಮಾತುಗಳನ್ನು ಗುರುಗಳ ಮುಖದಿಂದ ಕೇಳಿದುದು ಇದೇ ಮೊದಲು.

" ನಿನ್ನ ಬಾಯಿಂದ ನಾಲ್ಕು ಪ್ರೇಮದ ಮಾತುಗಳನ್ನು ಕೇಳಲು ಬಂದಿರುವೆ ಕಲ್ಯಾಣಿ ? " ಗುರುಗಳು ಮತ್ತೆ ನುಡಿದರು.

" ಕೇಳಿರಿ."

" ನಿನ್ನನ್ನು ನಾನು ಬಲಾತ್ಕಾರದಿಂದ ಮದುವೆಯಾಗಿಲ್ಲ. ನನ್ನ ಇಚ್ಛೆಯೂ ಹಾಗಿರಲಿಲ್ಲ. ನಿನ್ನ ತಂದೆ-ತಾಯಿಯವರ ಆಗ್ರಹಕ್ಕೆ ಮದುವೆಯಾಗಿರುವೆನು. ಇದು ನಿಜವಾದ ಸಂಗತಿಯು. ಇದನ್ನು ನೀನು ನಂಬಿದರೆ ನನ್ನ ಮೇಲಿನ ಸಿಟ್ಟು ಕಡಿಮೆಯಾಗುವುದು. ನೀನು ಹಾಗೆ ತಿಳಿದಿರುವೆಯಾ ? "

" ನಾನು ಆ ಬಗ್ಗೆ ವಿಚಾರಿಸುವುದಿಲ್ಲ. ಆದ ಸಂಗತಿಗೆ ಹಳಹಳಿಸಿ ದುಃಖಪಡಲಾರೆ...."

" ಈಗ ನೀನು ನನ್ನ ಹೆಂಡತಿಯು."

" ಅಹುದು ಅಂತಲೇ ಮಂಗಲಸೂತ್ರ ಇನ್ನೂ ಕೊರಳಲ್ಲಿ ಇದೆ " ಎಂದು ಹಿಡಿದುಕೊಂಡು ತೋರಿಸಿದಳು.

ಮಾತು ತೀರ ಕಠೋರವಿದ್ದರೂ ಗುರುಗಳು ಇದೂ ಒಳ್ಳೆಯದೆಂದರು.

" ನಾವು ಇನ್ನುಮುಂದೆ ಪ್ರೀತಿಯಿಂದಿರುವ."

" ಅದಕ್ಕೆ ನನ್ನ ಅಡ್ಡಿಯೇನು ? "

ಗುರುಗಳು ಹರ್ಷಗೊಂಡರು.

" ಹಾಗಾದರೆ ನಮ್ಮಿಬ್ಬರ ನಡುವೆ ಈಗ ಹಬ್ಬಿನಿಂತ ಬೆಂಕಿಯನ್ನು ನಂದಿಸುವ."

" ಹ....! "

" ನೀನೇ ನಂದಿಸು."

" ಅದನ್ನು ನಂದಿಸಲು ಯಾವ ಸಮುದ್ರದ ನೀರನ್ನು ತರಬೇಕೆಂಬುದು ನನಗೆ ತಿಳಿಯದು. ನೀವೇ ನಂದಿಸಿರಿ."

ಮಾತು ಮೊದಲಿನಂತೆಯೇ ಕಠೋರ! ಗುರುಗಳು ಇದೂ ಒಳ್ಳೆಯದೆಂದು ತಿಳಿದರು.

" ನೀನು ನಗುತ್ತ ಇದ್ದರೆ ನನ್ನ ಆಶೆ–ಆಕಾಂಕ್ಷೆಗಳನ್ನು ನೆರವೇರಿಸಬೇಕೆಂದಿರುವೆನು."

" ಆಗಲಿ."

" ನಗುತ್ತ, ಮಾತಾಡುತ್ತ ಇರುವೆಯಾ ? "

" ಹಾಗೆ ನಗುತ್ತ ಮಾತಾಡುತ್ತ ಇದ್ದರೆ ನೀವೂ, ಹೊರಗಿನವರೂ ಹುಚ್ಚಿ ಎನ್ನಲಾರಿರಾ ? "

" ಹಾಗಲ್ಲ. ಇದು ನಿನ್ನ ಮನೆ, ನಿನ್ನ ಸಂಸಾರವೆಂದು ತಿಳಿದುಕೊಂಡಿದ್ದರೆ ಸಾಕು."

" ಹಾಗೆ ನಾನು ತಿಳಿದಿರುವೆ. ತವುರ ಮನೆಗೆ ಈವರೆಗೂ ಹೋಗಬಯಸಿಲ್ಲ. ಹೋಗುವುದೂ ಇಲ್ಲ."

" ಕಲ್ಯಾಣಿ, ನೀನು ಎಂಥ ಗುಣಶಾಲಿನಿ ! " ಎಂದು ಪ್ರೇಮಭರದಲ್ಲಿ ಅವಳನ್ನು ಅಪ್ಪಿಕೊಂಡರು.

" ನನಗೆ ನಿದ್ದೆ ಬಂದಿತು." ಬಿಡಿಸುತ್ತ ನುಡಿದಳು.

" ಇನ್ನೆರಡು ಮಾತನ್ನು ಆಡುವ."

ಕಲ್ಯಾಣಿ ಉತ್ತರವನ್ನು ಕೊಡಲಿಲ್ಲ.

" ಇಲ್ಲಿ ಬೇಡ. ನನ್ನ ಹಾಸಿಗೆಗೆ ನಡೆ" ಎಂದು ಆಗ್ರಹ ಮಾಡಿದರು.

" ಇಂದು ನನ್ನನ್ನು ಬಿಡಿರಿ. ಇನ್ನೊಮ್ಮೆ ಅಲ್ಲಿ ಕುಳಿತು ಮಾತಾಡುವ."

" ಎರಡೇ ಮಾತು ಆಡುವ. ನಾನು ತಿರುಗಿ ತಂದು ಹಾಸಿಗೆಯ ಮೇಲೆ ಮಲಗಿಸಿ ಹೋಗುವೆನು ನಡೆ " ಎಂದು ರಟ್ಟೆಯನ್ನು ಹಿಡಿದು ಎಬ್ಬಿಸಿದರು.

" ಇಂದು ನನ್ನನ್ನು ಬಿಡಿರಿ. ಮತ್ತೊಮ್ಮೆ ಮಾತಾಡುವ " ಎಂದು ಮತ್ತೆ ನುಡಿವಳು.

" ಏನೋ ಒಂದು ಆಶೆ ಕಲ್ಯಾಣಿ ! ನನಗೂ ಇಂದೇ ಅಕಸ್ಮಾತ್ತಾಗಿ ಹುಟ್ಟಬೇಕೇ ! ನೀನು ನನ್ನ ಆಶೆಯನ್ನು ಪೂರ್ತಿಗೊಳಿಸಬಲ್ಲೆಯೆಂದು ಇಷ್ಟು ರಾತ್ರಿ ಎಚ್ಚರಿದ್ದು ಬಂದಿರುವೆ. ಭಿಕ್ಷುಕನಂತೆ ಕಾಡಿರುವೆ. ಏಳು " ಎಂದು ಎಬ್ಬಿಸಿ ನಿಲ್ಲಿಸಿದರು.

" ಈಗ ಬೇಡ ಬಿಡಿರಿ."

ಕಲ್ಯಾಣಿ ಎಷ್ಟು ಹೇಳಿದರೂ ಕೇಳಲಿಲ್ಲ. ಬಗಲಲ್ಲಿ ಕೈಹಾಕಿ ಎಬ್ಬಿಸಿ ದರು. ನಡಿಸಹತ್ತಿದರು. ಬಾಗಿಲನ್ನು ದಾಟಿದರು. ನಡುಮನೆಗೆ ಬಂದರು. ಗೋಡೆಗೆ ತೂಗು ಬಿದ್ದ ತಮ್ಮ ಮೊದಲಿನ ಹೆಂಡತಿಯ ತೈಲಚಿತ್ರವು ಕಂಡಿತು. ಅದನ್ನು ಕಲ್ಯಾಣಿಗೆ ತೋರಿಸಿ " ಇವಳೇ ನನ್ನ ಮೊದಲಿನ ಹೆಂಡತಿ. ಅವಳನ್ನೂ ಬಲ್ಲೆ. ನಿನ್ನನ್ನೂ ನೋಡುತ್ತಿರುವೆ. ಅವಳಿಗಿಂತ ನೀನು ಚೆಲುವೆ. ಅಭಿಮಾನಶಾಲಿನಿ ! " ಎಂದು ವರ್ಣಿಸುತ್ತ ಹಾಸಿಗೆಗೆ ತಂದರು. ಮೇಲೆ ಕೂಡಿಸಿದರು. ತಾವೂ ಎದುರು ಕುಳಿತರು.

" ಕಲ್ಯಾಣಿ ! " ಎಂದು ತೀರ ಹತ್ತರ ಸರಿದು ಕೆನ್ನೆಯನ್ನು ಮುಟ್ಟಿದರು.

ಕಲ್ಯಾಣಿ ಕಣ್ಣು ಮುಚ್ಚಿದ್ದಳು.

ಎಳೆದು ತೊಡೆಯ ಮೇಲೆ ಕೂಡಿಸಿಕೊಂಡು " ಕಲ್ಯಾಣಿ ಕಣ್ಣು ಬಿಡು " ಎಂದು ಅವಳ ಗಲ್ಲದ ಮೇಲೆ ತುಟಿಯೂರಿ ಕೇಳಿದರು.

ಕಲ್ಯಾಣಿಯು ದೀರ್ಘವಾದ ಶ್ವಾಸಗಳನ್ನು ಎಳೆಯುತ್ತಿದ್ದಳು. ಎದೆಯು ಉಬ್ಬಿ–ಇಳಿದು ನಡಿಸಿದ್ದಿತು. ಮೈಯಲ್ಲಿ ವಿದ್ಯುತ್ ಸಂಚಾರವಾದಂತೆ ಕಂಡು ಬರುತ್ತಿದ್ದಿತು.

" ಕಲ್ಯಾಣಿ ಕಣ್ಣು ತೆರೆ ! " ಎಂದು ಮುಖದ ಮೇಲೆ ಕೈಯಾಡಿಸುತ್ತ ಬಾಯಿಗೆ ಬಾಯಿ ಹಚ್ಚಿದರು.

ಕಲ್ಯಾಣಿಯು ಚೆಂಗನೆ ಮುಂದೆ ಸರಿದು " ಆ ಮೂಲೆಯಲ್ಲಿ ಕುಳಿತ ಹೆಂಗಸು ಯಾರು ? " ಎಂದು ದುರದುರನೆ ಕಣ್ಣುಗಳನ್ನು ಬಿಡುತ್ತ, ಶ್ವಾಸೋಚ್ಛ್ವಾಸದಿಂದ ಮೂಗುಗಳನ್ನು ಉಬ್ಬಿಸುತ್ತ ಗುರುಗಳ ಕಡೆಗೆ ಮುಖಮಾಡಿ ಕೇಳಿದಳು.

ಗುರುಗಳು ಆಕೆಯನ್ನು ಗಟ್ಟಿಯಾಗಿ ಹಿಡಿದು " ಕಲ್ಯಾಣಿ ಯಾರಿಲ್ಲ! ಯಾರಿಲ್ಲ ! " ಎಂದು ಬಾಯಿಯನ್ನು ಕಟ್ಟಿದರು.

" ಬಿಡು ಬಿಡೋ ! ನೀನಾರೋ ! ಪರಕೀಯ ಹೆಣ್ಣು ಮಗಳನ್ನು ಹಿಡಿಯಲು ನಿನಗೆ ನಾಚಿಕೆ ಬರುವುದಿಲ್ಲವೇನೋ ! ಸರಿಯೋ. ಸರಿ " ಎಂದು ತನ್ನ ಸರ್ವಶಕ್ತಿಯನ್ನು ಸಂಗ್ರಹಿಸಿ ಗುರುಗಳನ್ನು ದೂಡಿದಳು.

ಗುರುಗಳು ಹಿಡಿದುಬಿದ್ದರು.

ಆಕೆಯು ಹಾಗೇ ಬಡಬಡಿಸಹತ್ತಿದಳು.

ಗುರುಗಳ ಮೈಯಲ್ಲಿಯ ಗಂಡು ಶಕ್ತಿ ದುರ್ಬಲವಾಯಿತು. ಒಂದು ಹೆಣ್ಣಿನ ಮೈಯಲ್ಲಿಯ ಅದೂ ಚಿಕ್ಕ ವಯಸ್ಸಿನ ಹೆಣ್ಣಿನ ಮೈಯಲ್ಲಿಯ ಶಕ್ತಿ ಇಷ್ಟು ಬಲವತ್ತರವಾಗಿರುವುದೇ! ಎಂದು ಭಯ-ಆಶ್ಚರ್ಯವನ್ನು ತೋರಿಸುತ್ತ ಮತ್ತೆ ಆಕೆಯನ್ನು ಹಿಡಿದುಕೊಂಡರು. ಕಲ್ಯಾಣಿಯು—

" ಬಿಡೋ ನಾಚಿಕೆ ಇಲ್ಲದವನೇ ! ಬಿಡುವೆಯೋ ಇಲ್ಲವೋ ! " ಎಂದು ಬಿಡಿಸಿಕೊಳ್ಳಲು ಪ್ರಯತ್ನಿಸಹತ್ತಿದಳು. ಕೈಯೊಳಗಿನ ಬಳೆಗಳು ಹೆಚ್ಚಿದುವು. ಕೊರಳ ಸರವು ಹರಿಯಿತು. ಇಷ್ಟಾದರೂ ಗುರುಗಳು ಬಿಡಲಿಲ್ಲ. ಅವಳ ಪ್ರಯತ್ನ ನಿಲ್ಲಲಿಲ್ಲ. ಅವಳ ಉನ್ಮತ್ತ ಶಕ್ತಿಯ ಮುಂದೆ ಗುರುಗಳು ಕೈಯೂರುವ ಪ್ರಸಂಗವು ಬಂದಿತು. ಅವಳ ಒದ್ದಾಟ, ಒದರಾಟ ಅವ್ಯಾಹತವಾಗಿ ಸಾಗಿದ್ದಿತು. ತಾನು ಹೆಂಗಸು, ಹೆಂಡತಿಯೆಂಬ ಯಾವ ಪ್ರಜ್ಞೆ ಇರಲಿಲ್ಲ ಮೈಮೇಲಿನ ಸೀರೆ ಸರಿದಿವೆಯೋ, ಅವಯವಗಳು ಹೊರಬಂದಿವೆಯೋ, ಯಾವುದನ್ನು ಮುಚ್ಚಿಕೊಳ್ಳಬೇಕು, ಯಾವುದನ್ನು ಮುಚ್ಚಿಕೊಳ್ಳಬಾರದು ! ಎಂಬ ತಾರತಮ್ಯದ ಎಚ್ಚರವೇ ಇರಲಿಲ್ಲ. ಕೇವಲ ಬಿಡಿಸಿಕೊಳ್ಳುವುದು. ಬಾಯಿಗೆ ಬಂದುದನ್ನು ನುಡಿಯುವುದು, ಗುರುಗಳನ್ನು ಬಡಿಯುವುದು, ಕಡಿಯುವುದು

ಮುಂತಾದ ವೈಕಾರ್ಯಗಳನ್ನು ಮಾಡುತ್ತಿದ್ದಳು. ಗುರುಗಳು ಗಾಬರಿಯಾದರು. ತಮ್ಮಿಂದ ಇವಳನ್ನು ರಕ್ಷಿಸುವುದು ಅಸಾಧ್ಯವೆನಿಸಿತು. ಕರುಣನ ಸಹಾಯ ಅವಶ್ಯವೆನಿಸಿತು

"ಕರುಣ!" ಎಂದು ಕೂಗಿದರು.

ಮತ್ತೊಮ್ಮೆ ಕೂಗಿದರು. ಬಾಗಿಲನ್ನು ತೆರೆದರು.

ಕರುಣನು ಓಡುತ್ತ ಬಂದು "ತಾಯೀ!" ಎಂದು ಕಲ್ಯಾಣಿಯನ್ನು ಹಿಡಿದುಕೊಂಡನು.

ಅವನ ಕತ್ತನ್ನು ಹಿಸುಕುವಂತೆ ಕೈಗಳಿಂದ ಕಟ್ಟಿದಳು. ಕರುಣನು ಒಂದು ಕೈಯಿಂದ ಗಟ್ಟಿಯಾಗಿ ಹಿಡಿದು "ತಾಯೀ!" ಎಂದನು.

"ಯಾರೋ ನೀನು?" ಆವೇಶದಿಂದ ಕೇಳಿದಳು.

"ನಾನು—ನಿನ್ನ ಮಗ ಕರುಣ! ಕರುಣ ಬಂದಿರುವನು ತಾಯೀ!" ಎಂದು ನಾಲ್ಕೈದು ಸಾರೆ ನುಡಿದನು.

"ನೀನು!" ಹಲ್ಲುಗಳನ್ನು ಕಟಕಟಿಸಿದಳು.

"ಕರುಣ!"

"ಬಾ!" ಎಂದು ಕಣ್ಣುಗೊಂಬೆಗಳನ್ನು ತಿರುಗಾಡಿಸಿದಳು.

"ಕರುಣ ಬಂದಿರುವನು."

"ಬಾ ಮಗು" ಎಂದು ಅವನನ್ನು ಗಟ್ಟಿಯಾಗಿ ಹಿಡಿದುಕೊಂಡು "ಬಂದೆಯಾ? ಬಂದೆಯಾ?" ಎಂದು ಹೆಗಲಮೇಲೆ ತಲೆಯೂರಿ ದೀರ್ಘವಾದ ಶ್ವಾಸಗಳನ್ನು ಬಿಡಹತ್ತಿದಳು.

ಐದಾರು ನಿಮಿಷ ಕಳೆದುವು. ಕರುಣನು ತಾಯಿಯ ಬೆನ್ನಮೇಲೆ ಕೈ ಎಳೆಯುತ್ತಿದ್ದನು.

ಕಲ್ಯಾಣಿಯ ಕಣ್ಣಿಂದ ನೀರು ಧಾರಾಕಾರವಾಗಿ ಇಳಿದುವು. ಸೆರಗಿನಿಂದ ಕಣ್ಣೊರಸಿದನು.

"ಶಾಂತಳಾಗು ತಾಯೀ! ಶಾಂತಳಾಗು!" ಎಂದು ನುಡಿಯಹತ್ತಿದನು.

ಮತ್ತೆ ನಾಲ್ಕಾರು ನಿಮಿಷಗಳು ಕಳೆದುವು. ಕಲ್ಯಾಣಿಯ ಉನ್ಮಾದವು ಇಳಿದು ನಿಶ್ಚೇಷ್ಟಿತಳಾದಳು. ಕರುಣನು ಮೆಲ್ಲಗೆ ಅವಳನ್ನು ಹಾಸಿಗೆಯ

ಮೇಲೆ ಮಲಗಿಸಿದನು. ಕಣ್ಣುಬಿಟ್ಟು ತಾಯಿಯನ್ನು ನೋಡಿದನು. ಮೈತುಂಬ ಬೆವರು ಬಿಟ್ಟದ್ದಿತು. ಕೋಣೆಗೆ ಹೋಗಿ ಪಂಚೆಯನ್ನು ತಂದು ಮೈ ಒರಸುತ್ತ—

" ತಾಯೀ ! " ಎಂದು ಕೂಗಿದನು.

ಕಲ್ಯಾಣಿಯು ಉತ್ತರಿಸಲಿಲ್ಲ.

ಹೀಗೇಕಾಯಿತೆಂದು ತಂದೆಯನ್ನು ಕೇಳುವ ಸಾಹಸ ಮಾಡಲಿಲ್ಲ, ತಂದೆಯೂ ಹೇಳಲಿಲ್ಲ.

" ತಾಯಿಯನ್ನು ಅವಳ ಹಾಸಿಗೆಯ ಮೇಲೆ ಮಲಗಿಸುವ." ಕರುಣನು ತಂದೆಗೆ ಹೇಳಿದನು

" ಒಳ್ಳೇದು." ಗುರುಗಳು ನುಡಿದರು.

ಇಬ್ಬರೂ ಕೂಡಿ ಕಲ್ಯಾಣಿಯನ್ನು ಎತ್ತಿತಂದು ಅವಳ ಹಾಸಿಗೆಯ ಮೇಲೆ ಮಲಗಿಸಿದರು. ಗುರುಗಳು ಹಾಸಿಗೆಯ ತುದಿಗೆ ಕುಳಿತರು. ಕರುಣನು ತಾಯಿಯ ತಲೆಯನ್ನು ತೊಡೆಯ ಮೇಲೆ ಇಟ್ಟುಕೊಂಡನು. ಹಣೆಯ ಮೇಲಿನ ಬೆವರು ಒರಸಿದನು. ತಂದೆಯವರು ನೀರು ತಂದುಕೊಟ್ಟರು. ಕರುಣನು ಹನಿಹನಿಯಾಗಿ ನೀರು ಹಾಕಹತ್ತಿದನು. ಅರ್ಧ ತಾಸು ನಡೆದಿರ ಬೇಕು. ಕಲ್ಯಾಣಿಯು ಇನ್ನೊಂದು ಮಗ್ಗುಲಾದಳು.

" ತಾಯೀ ! " ಎಂದು ಕರುಣನು ಕೂಗಿದನು.

" ಹ ! " ಎಂದಳು.

" ಎಚ್ಚರಾದೆಯಾ ? "

" ಆಗಿರುವೆ. ನೀರು." ಮೆಲ್ಲಗೆ ನುಡಿದಳು.

ಕರುಣನು ನೀರು ಕುಡಿಸಿ ಮುಖವನ್ನು ಮತ್ತೆ ಒರಸಿದನು. ಕಲ್ಯಾಣಿಯು ಸಂಪೂರ್ಣ ಎಚ್ಚತ್ತಳು. ಕಣ್ಣುಬಿಟ್ಟು ಕರುಣನನ್ನು ನೋಡಿದಳು.

" ನೀನೇಕೆ ಇಲ್ಲಿ ಕರುಣ ! " ಎಂದು ಕೇಳಿದಳು.

" ನೀನು ಏನೇನೋ ನುಡಿಯಹತ್ತಿದೆ. ಅದಕ್ಕೆ ಬಂದೆ."

" ಅವರು ? "

" ಇಲ್ಲೇ ಇರುವರು."

ನೋಡಿ ಸಾವರಿಸಿಕೊಂಡಳು.

“ ಬಂದು ಬಹಳ ಹೊತ್ತಾಯಿತೇ ? ”

“ ತಾಸು ಆಗಿರಬೇಕು.”

“ ನಾನು ಎಚ್ಚತ್ತಿರುವೆ. ನೀನು ಮಲಗ ಹೋಗು.”

“ ಇನ್ನೇನು ಬೆಳಗಾಗಬಂದಿತು.”

“ ಹಾಗಾದರೆ ಕೂಡು.”

ಕರುಣನು ಮತ್ತೆ ಬೆವುರು ಒರಸಿದನು.

ಗುರುಗಳು ಭಾರವಾದ ಹೆಜ್ಜೆಗಳನ್ನು ಇಡುತ್ತ ಕೋಣೆಗೆ ಬಂದರು.

“ ಏನಾಯಿತು ತಾಯೀ ? ” ಕರುಣನು ಮೆಲ್ಲಗೆ ಕೇಳಿದನು.

“ ಏನಿಲ್ಲ.”

“ ಅಂದರೆ ! ”

“ ನೀನು ಮನೆಯಲ್ಲಿರದಿದ್ದರೆ ಇಷ್ಟೆಲ್ಲ ಆಗುವುದು ” ಎಂದು ಅವನ ಕೈಯನ್ನು ಹಿಡಿದಳು.

“ ನಾನು ಮನೆಯಲ್ಲಿಯೇ ಇದ್ದೆನು.”

“ ನೀನು ಇದ್ದೆ ! ಸುಳ್ಳು.”

“ ನಿನ್ನ ಮುಂದೆ ಸುಳ್ಳು ಹೇಳಲಾರೆ. ಮನೆಯಲ್ಲಿದ್ದೆ.”

“ ಹಾಗಾದರೆ ನನಗೆ ಗೊತ್ತಿಲ್ಲ ” ಎಂದು ಅವನ ತೊಡೆಯ ಮೇಲಿನ ತಲೆಯನ್ನು ಹಾಸಿಗೆಯ ಮೇಲಿಟ್ಟು ಮಗ್ಗುಲಾಗಿ ಕರುಣನ ಎರಡೂ ಕೈಗಳನ್ನು ಹಿಡಿದು ಕೆನ್ನೆಯಮೇಲೆ ಆಡಿಸಿಕೊಳ್ಳಹತ್ತಿದಳು.

೧೬

ಕಾಮುಕ ಪ್ರವೃತ್ತಿಯಿಂದ ಉನ್ಮತ್ತರಾದ ಗುರುಗಳು, ಭೂತ ಸಂಚಾರದ ಆಗಂತುಕ ಲಕ್ಷಣಗಳಿಂದ ಉನ್ಮತ್ತಳಾದ ಕಲ್ಯಾಣಿಯು ಅಂದಿನ ಪ್ರಕರಣದಿಂದ ತೀರ ವಿಷಾದಗೊಂಡರು. ಕಲ್ಯಾಣಿಗೆ ವಿಷಾದದ ಸಂಗಡ ಶಾರೀರಿಕ ದೌರ್ಬಲ್ಯವೂ ಅಧಿಕವಾಯಿತು. ಮೂರು ದಿನಗಳಾದರು ಅವಳಿಗೆ ಏಳಲು, ಸರಿಯಾಗಿ ಕೂಡಲು ಬರದಾಯಿತು. ಕಷ್ಟದಿಂದ ತನ್ನ ಪ್ರಾತ ರ್ವಿಧಿ, ಸ್ನಾನಗಳನ್ನು ಮಾಡಿದಳು. ಕರುಣನು ಸೇವಕನಾಗಿ ನಿಂತು ನೆರ ವಾದನು. ಶೌಚಕ್ಕೆ ಹೋಗುವ ಮುಂದೆ ಕೈ ಹಿಡಿದು ನಡಿಸುತ್ತ ಹಿತ್ತಲ ವರೆಗೆ ಕರೆದುಕೊಂಡು ಹೋದನು. ನೀರು ತೋಡಿ ಕೊಟ್ಟನು. ರಟ್ಟೆಯನ್ನು ಹಿಡಿದು ಬಚ್ಚಲಕ್ಕೆ ಇಳಿಸಿದನು. ಉಡಲು ಸೀರೆಯನ್ನು ಎಳೆದು ಕೊಟ್ಟನು. ತಿರುಗಿ ಕರೆದು ತಂದನು ತನ್ನ ಪಂಚೆಯಿಂದ ಮೈ ಒರಸಿದನು. ತಾಯಿಯ ಹಣೆಯ ಕುಂಕುಮವನ್ನು ತೀಡಿದನು. ಅಡಿಗೆಯನ್ನು ತಾನೇ ಮಾಡಿ ಎಲ್ಲ ರಿಗೂ ಬಡಿಸಿದನು. ಹಾಸಿಗೆಯನ್ನು ಹಾಸಿಕೊಟ್ಟನು. ಮೂರು ದಿವಸ ಅವಳ ಹತ್ತಿರವೇ ಮಲಗಿದನು.

ಇಷ್ಟು ದಿವಸ ಗುರುಗಳು ಬಾಯನ್ನು ಹೊಲಿದುಕೊಂಡು ಮೂಕ ಗೊಂಬೆಯಂತೆ ಓಡಾಡಿದರು. ಏನನ್ನೂ ಮಾತಾಡಲಿಲ್ಲ. ಏನನ್ನೂ ವಿಚಾರಿ ಸಲಿಲ್ಲ. ಅವರ ಆಂತರಿಕ ಮನಸು—ಏನು ಮಾಡಹೋಗಿ ಏನಾಯಿತು! ಎಂದು ಬೇಗುದಿಗೊಂಡಿದ್ದಿತು.

ಅಂದಿನ ರಾತ್ರಿ ತಾಯಿಯು ತಂದೆಯ ಹಾಸಿಗೆಗೆ ತಾನಾಗಿ ಹೋದಳೋ ತಂದೆಯವರು ಬಲತ್ಕಾರದಿಂದ ಕರೆದುಕೊಂಡು ಹೋದರೋ? ಎಂಬುದು ಗೂಢ ಪ್ರಶ್ನೆಯಾಗಿದ್ದಿತು. ತಾಯಿಯು ಅಲ್ಲಿಗೆ ಹೋಗುವುದು ಅಸ್ವಾಭಾವಿಕ ವಾಗಿರಲಿಲ್ಲ. ಗಂಡು–ಹೆಣ್ಣಿನ ಆಟ–ಕೂಟಗಳನ್ನು ಗೆಳೆಯರ ಸಂಗಡ ಚರ್ಚೆ ಯಲ್ಲಿ ಅಷ್ಟಿಷ್ಟು ಅರಿತಿದ್ದನು. ಅವುಗಳ ಸುಖದ ರೂಪಗಳನ್ನು ಕಲ್ಪನೆಯಿಂದ ಕಂಡಿದ್ದನು. ತಾಯಿಯು ಮನೆಗೆ ಬಂದು ತಿಂಗಳೆರಡುತಿಂಗಳುಗಳಾಗಿದ್ದುವು. ಇಷ್ಟು ದಿನಗಳಲ್ಲಿ ಒಮ್ಮೆಯೂ ನಡೆಯದ ವಿಚಿತ್ರ ಘಟನೆ ಇಂದೇಕೆ ನಡೆ

ಯಿತು ? ಏಕೆ ಸಂಭವಿಸಿತು ? ಅವನು ಕಲ್ಯಾಣಿಯ ಸ್ವಭಾವವನ್ನು ತುಂಬಾ ಅರಿತಿದ್ದನು. ಅವಳು ತೋರಿಸುವ ಪ್ರೇಮ, ಸ್ನೇಹ, ವಾತ್ಸಲ್ಯ, ಕಾರುಣ್ಯ, ಆಶೆ, ಆದರ್ಶಮಯವಾಗಿದ್ದುವು. ತನ್ನನ್ನು ಇಷ್ಟು ಆಧಿಕ್ಯವಾಗಿ ಕಾಣು ವುದು ಹೆಣ್ಮೆಯ ವಿಷಯವಾಗಿದ್ದಿತು. ಅವಳ ನಿಷ್ಕಲಂಕ ಜೀವನವು ಮಾರ್ಗದರ್ಶಕವೆನಿಸುತ್ತಿದ್ದಿತು. ಅವಳನ್ನು ಸೇವಿಸಬೇಕು, ಭಕ್ತಿ ಭಾವನೆ ಗಳನ್ನು ಅರ್ಪಿಸಬೇಕು, ಅವಳ ಸುಖ-ಸಂತೋಷದಲ್ಲಿ ತನ್ನ ವ್ಯಕ್ತಿತ್ವವನ್ನು ಜೀರ್ಣಿಸಿಕೊಳ್ಳಬೇಕು ಎಂದು ಜೀವನವು ಹಾತೊರೆದು ನಿಲ್ಲುತ್ತಿದ್ದಿತು. ಇಂಥ ಸಚ್ಚರಿತ್ರಳು, ಸದ್ಭಾವಕಳು ತಂದೆಯ ಹಾಸಿಗೆಯ ಮೇಲೆ ಕುಳಿತು ಹೀಗೆ ವಿಕಾರವಶಳಾಗಿ ಏಕೆ ನಡೆದಳು ? ಇದು ತಂದೆಯ ದೋಷವಲ್ಲವೇ ? ತಂದೆಯೇ ಕಾರಣವಿರಬೇಕೇ ? ತಂದೆಯವರ ಸ್ವಭಾವವು ಒಂದಿಷ್ಟು ಒರಟೆಂದೂ ತಿಳಿದವನಾಗಿದ್ದನು. ಗುಣವಂತಿಯ ಸಹವಾಸದಿಂದ ಅವರ ಇನ್ನೊಂದು ಆಶೆಯೂ ಕಂಡು ಬಂದಿದ್ದಿತು. ಈ ವಯಸ್ಸಿಗೆ ಆ ಪ್ರವೃತ್ತಿ ಇರಬೇಕೇ ? ಎಂದು ವಿಚಾರಿಸಿದವನಲ್ಲ. ಆದರೂ ಅದು ಗೌಣವೆಂದೇ ಅವನ ಭಾವನೆ. ತಾಯಿಯ ಮನಸ್ಸಿಲ್ಲದೆ ಅವಳ ಮೇಲೆ ಬಲಾತ್ಕರಿಸ ಹೋಗಿ ಹೀಗೆ ಆಗಿರಬಹುದೇ ? ಸಾಮಾನ್ಯ ವ್ಯವಹಾರದಲ್ಲಿ ಇದು ಅನೀತಿಯೆನಿಸಿ ದರೂ ಇಲ್ಲಿ ಗಂಡ-ಹೆಂಡಿರೆಂಬ ಧಾರ್ಮಿಕ ಬಂಧನದಲ್ಲಿ ಅನೀತಿ ಎನ್ನಬಾರ ದಲ್ಲವೇ ? ಇದನ್ನು ಮುಚ್ಚಿಕೊಳ್ಳಬೇಕಷ್ಟೇ ! ತಿರುಗಿ ಸಂಪೂರ್ಣ ಹೊಣೆ ಯನ್ನು ಹೆಣ್ಣಿನ ಮೇಲೆಯೇ ಹಾಕಬೇಕಲ್ಲವೇ ? ಹೀಗೆ ಸಾವಿರಾರು ಬಗೆ ಯಿಂದ ವಿಚಾರಿಸಿದನು. ಆದರೆ ಯಾವ ನಿರ್ಣಯಕ್ಕೂ ಬರಲಿಲ್ಲ. ಜೀವ ಅರಿಯಬೇಕೆಂದರೂ ದಾರಿಯು ಕಾಣದಾಯಿತು. ತಾಯಿಯನ್ನು ಹೇಗೆ ಕೇಳುವುದು ? ಕೇಳಿದರೆ ಹೇಳಬಹುದೇ ? ಕೇಳುವ ಪ್ರಶ್ನೆಯೇ ? ಎಂದು ಕೊಂಡನು. ತಾನಿಲ್ಲದ್ದಕ್ಕೆ ಹೀಗಾಯಿತು ! ಎಂದು ನುಡಿದಿರುವಳು. ಇದ ರಿಂದ ಬಹುಶಃ ತಂದೆಯವರ ಜುಲುಮೆಯೇ ಕಾರಣವಿರಬೇಕು. ಅದನ್ನು ಪುನಃ ತಿಳಿದು ಆಗುವುದೇನು ? ಎಂದು ಸುಮ್ಮನಾಗಿ ಅವಳ ಸೇವೆಯನ್ನು ಮಾಡುತ್ತಿದ್ದನು.

ಮಧ್ಯಾಹ್ನದ ಊಟವಾದ ಮೇಲೆ ಕಲ್ಯಾಣಿಯ ಪಕ್ಕದಲ್ಲಿ ಕುಳಿತು ಸಕ್ಕರೆನಿಂಬೆಯನ್ನು ಸುಲಿದು ಕೊಡುತ್ತಿದ್ದನು. ಅವಳು ಒಂದೊಂದಾಗಿ

ತೊಳೆಗಳನ್ನು ತಿನ್ನುತ್ತ ಮಗ್ಗುಲಾಗಿ ಮಲಗಿದ್ದಳು. ಕರುಣನು ಮೆಲ್ಲಗೆ ಮಾತು ತೆಗೆದನು.

“ನಾಲ್ಕೈದು ದಿನಗಳಾದುವು ನಿನಗೆ ಏಳಲಿಕ್ಕೆ ಬರಲೊಲ್ಲದು. ಮೈಯಲ್ಲಿ ಶಕ್ತಿಯೂ ಹುಟ್ಟಲೊಲ್ಲದು. ಇನ್ನೂ ಎಷ್ಟು ದಿನ ಮಲಗಬೇಕಾಗುವುದೋ ?” ಎಂದು ಸರಿದು ಕೆಳಗೆ ಬಿದ್ದ ರಗ್ಗನ್ನು ಹೊದಿಸುತ್ತ ಕೇಳಿದನು.

“ನಾಳೆಯಿಂದ ನಾನೇ ಅಡಿಗೆಯನ್ನು ಮಾಡುವೆನು. ನೀನು ಇಷ್ಟು ದಿನ ಮಾಡಿದುದೇ ಸಾಕು. ಇಂದು ಒಂದಿಷ್ಟು ಏಳಬೇಕೆಂದು ಮಾಡಿದೆ. ನಿನ್ನ ಆಗ್ರಹವೊಂದಿದೆಯಲ್ಲ. ನಾಳೆ ನಾನೇ ಮಾಡುವೆ.”

“ನಾನು ಅಡಿಗೆ ಮತ್ತು ನಿನ್ನ ಆರಯಿಕೆಗೆ ಬೇಸತ್ತೆನೆಂದು ತಿಳಿಯಬೇಡ. ಆದರೆ ಮೊದಲಿನಂತೆ ಶಕ್ತಿ ಬಂದು, ಎದ್ದು ನಡೆದಾಡು ಎಂದು ಆಶಿಸುವೆ.”

“ನಾನೂ ಅದನ್ನೇ ಹೇಳಿದೆ.”

“ನಿನ್ನ ತಾಯಿಗೆ ಪತ್ರ ಬರೆದು ಈ ಸಂಗತಿಯನ್ನು ತಿಳಿಸಬಹುದೇ ? ಎರಡು ದಿನ ನಿಂತು ಹೋದರೆ ಎಲ್ಲರಿಗೂ ಒಳ್ಳೆಯದು.”

“ಅದು ಬೇಡ. ಈ ನನ್ನ ಅವಸ್ಥೆಯನ್ನು ಅವಳು ಎಂದಿಗೂ ನೋಡಬಾರದು. ಅಲ್ಲದೆ ಅವಳು ಇಲ್ಲಿಗೆ ಬಂದರೆ ತಂದೆಗೆ ಮಾಡುವವರಾರು ? ನಾನು ಎರಡು ದಿನಗಳಲ್ಲಿ ಎದ್ದು ಓಡಾಡಬಹುದು. ಅವರು ಜೀವಾವಧಿ ಏಳುವ ಸ್ಥಿತಿಯಲ್ಲಿಲ್ಲ.”

“ಎರಡು ದಿನ ಬರಲೆಂದು ನನ್ನ ಆಶೆ.”

“ಬೇಡಪ್ಪಾ ಬೇಡ. ಅವಳು ಬಂದರೆ ನನಗೆ ಪುನಃ ವೇದನೆಯಾಗುವುದು.”

“ಯಾವುದು.”

“ನಾನು ಹೇಳಲಾರೆ. ಅವರಿಗೆ ಯಾವ ಬಗೆಯ ಪತ್ರ ಬರೆಯಬೇಡ. ನನ್ನಾಣೆ !” ಎಂದು ಅವನ ಕೈಹಿಡಿದಳು.

“ಬಿಡು. ಇನ್ನೆರಡು ತೊಳೆಗಳಿವೆ.”

“ನನಗೆ ಸಾಕು.”

“ಇನ್ನು ನೀನು ಮಲಗು.”

" ಇನ್ನೊಂದಿಷ್ಟು ಕುಳಿತಿರು."

ಹೀಗೆ ಅವರು ಸುಖದಿಂದ ಹರಟೆಯನ್ನು ಹೊಡೆಯುತ್ತಿದ್ದರು. ಗುರು! ಗಳು ಹಿತ್ತಲ ಮನೆಗೆ ಹೋದರು.

" ಇನ್ನು ನೀನು ಹೋಗು. ನನಗೂ ನಿದ್ದೆ ಬಂದಿದೆ." ಎಂದು ನುಡಿದಳು.

ಕರುಣನು ಮೈತುಂಬ ಹೊದಿಸಿ ತನ್ನ ಕೋಣೆಗೆ ಹೋದನು.

ಅವಳಿಗೆ ಮಾನಸಿಕ ವೇದನೆ ಇಷ್ಟೊಂದು ತೀವ್ರತಮವಾಗಿದ್ದರೂ ಗುರುಗಳು ನಂಬುವಂತಿರಲಿಲ್ಲ. ಅವರಿಗೆ ಇದೆಲ್ಲ ಕೃತ್ರಿಮ! ಕೃತ್ರಿಮ ನೋಗು ಹಾಕಿಕೊಂಡು ನಟಿಸುತ್ತಿರುವಳೆಂದೇ ಭಾವಿಸಿ. ಅಂದು ರಾತ್ರಿ ಆದುದೇನು? ಬಡಿತವೋ ಹೊಡೆತವೋ! ಏನಿಲ್ಲ. ನನ್ನ ಹಾಸಿಗೆಯ ಪಕ್ಕದಲ್ಲಿ ಯಾರೋ ಕಂಡರಂತೆ! ಯಾರಿರುವರು? ಹೆಂಡತಿಯು ಸತ್ತು ೧೦-೧೨ ವರುಷಗಳಾದುವು. ಒಂದು ದಿನ ಭೂತದ ಸುಳಿವಿಲ್ಲ. ನಾವು ಎಂದೂ ಕಂಡಿಲ್ಲ. ಇವಳು ತೀರ ಹೊಸಬಳು. ಮುಖವನ್ನು ನೋಡಿದವಳಲ್ಲ. ಹೆಸರು ಸಹ ಕೇಳಿಲ್ಲ. ಅವಳು ಇವಳನ್ನು ಕಾಡುವುದೇ? ಸುಳ್ಳು. ಇದೆಲ್ಲ ಸುಳ್ಳು? ಕೇವಲ ಆಟ ನಡಿಸಿರುವಳು. ಇದನ್ನು ಬಿಡಿಸಲೇ ಬೇಕು.

ನನ್ನ ಸಂಗಡ ಹೀಗಿದ್ದರೂ ಕರುಣನ ಕೂಡ ಪ್ರೀತಿಯಿಂದಿರುವಳಲ್ಲ ಅವನ ಸಂಗಡ ಮಾತು ಬೇಕು. ಹರಟೆ ಬೇಕು. ನಗೆ ಬೇಕು. ಸಲ್ಗೆ ಬೇಕು! ಇದೇನು? ಮಗ, ಮಗನೆಂದು ಬಾಯಿಂದ ನುಡಿಯುವಳು. ಆದರೆ ನಿತ್ಯ ನಡೆಯುತ್ತಿದ್ದುದೇನು? ತುಂಬ ನಗೆ! ತುಂಬ ಮಾತು!! ಮೈ ಮೈ ಹತ್ತಿ ಕೂಡುವರು. ಕೈ ಕೈ ಹಿಡಿದು ಕುಲುಕಿಸುವರು. ಕಣ್ಣಲ್ಲಿ ಕಣ್ಣಿಟ್ಟು ಒಬ್ಬರ ಪ್ರತಿಬಿಂಬವನ್ನು ಇನ್ನೊಬ್ಬರು ಕಂಡುಕೊಳ್ಳುವರು! ಅಂದು ರಾತ್ರಿ ಭೂತ ಸಂಚಾರದಂತೆ ನಟಿಸಿದಳು. ನಾನು ನಿಜವೆಂದೆ! ನನ್ನ ಸಂಗಡ ಗುದ್ದಾಟ! ಗುದುಮುರಿಗೆ! ಆಹಹ! ಏನು ಬಲ ಅವಳದು! ನನ್ನಂತಹ ಗಂಡಸನನ್ನು ಕೇಳಲಿಲ್ಲ. ಅಂಥ ಶಕ್ತಿ! ಅಂಥ ಅಬ್ಬರ! ಅದೇ ಕರುಣನು ಬರಲು ತಿಕ್ಕಿ-ಮುಕ್ಕಿ ಹಿಡಿದಳು! ಭುಜದ ಮೇಲೆ ತಲೆಯಿಟ್ಟು ಮಲಗಿದಳು. ಕೆನ್ನೆ ಕೆನ್ನೆ ಕೂಡಿಸಿದರು. ಅವನು ಬರಲು ಕ್ಷಣದಲ್ಲಿ ಭೂತ ಓಡಿಹೋಯಿತು! ಹ ಹ! ಎಳೆಯ ಹುಡುಗನನ್ನು ನೋಡಿ ಮೆಚ್ಚಿರುವಳು. ಹ! ಎಂಥ ಅನ್ಯಾಯ! ಮಗನ ಮೇಲೆ ತಾಯಿಯ ಪ್ರೇಮ! ತಾಯಿಯ ನಲುಮೆ!

ಎಂಥ ಅಧರ್ಮ ! ಇದನ್ನು ನೋಡಿ ನಾನು ಸಹಿಸಿಕೊಂಡಿರಬೇಕೇ ? ಎಂದಿಗೂ ಇಲ್ಲ, ಇದಕ್ಕೆ ತಡೆಯನ್ನು ಹಾಕಲೇಬೇಕು. ಎಂದು ವಿಚಾರಿಸಿ ನಿರ್ಧರಿಸಿದರು. ಕೃತಿಯಲ್ಲಿ ತರಲು ಅನುಕೂಲ ಸಮಯವನ್ನು ಹುಡುಕಹತ್ತಿದರು.

ಇದೆಲ್ಲವನ್ನು ಯಾರ ಮುಂದೂ ಹೇಳುವಂತಿರಲಿಲ್ಲ. ಹೇಳಿದರೆ ತಮ್ಮ ಮನೆಯ ಹೊಲಸನ್ನು ಬೀದಿಗೆ ಇಟ್ಟು ಪ್ರದರ್ಶಿಸಿದಂತೆ! ತಮ್ಮ ಹೃದಯದಲ್ಲಿಯೂ ಬಹಳ ದಿವಸ ಇಟ್ಟುಕೊಂಡು ಕೂಡುವಂತಿರಲಿಲ್ಲ. ಹೊರಗೂ ಹಾಕುವಂತಿರಲಿಲ್ಲ. ಏನು ಮಾಡಬೇಕೆಂಬ ವಿಚಾರದಲ್ಲಿಯೇ ಇದ್ದರು.

ಇದಕ್ಕೆ ಒಂದಿಷ್ಟು ಚಾಲನೆಯನ್ನು ಕೊಟ್ಟವಳು ಗುರುಗಳ ಆಪ್ತ ಕಾರ್ಯದರ್ಶಿಯಾದ ಗಂಗಮ್ಮ ಮತ್ತು ಗುಣವಂತಿ! ಇತ್ತಲಾಗಿ ಗುಣವಂತಿಯೇ ಮುಸುರೆಯನ್ನು ತಿಕ್ಕಲು ಬರುತ್ತಿದ್ದಳು. ಗುರುಗಳೂ ಆಕೆಯನ್ನು ಒಂದಿಷ್ಟು ಕಣ್ಣುಬಿಟ್ಟು ನೋಡುತ್ತಿದ್ದರು. ತುಟಿಯ ತುದಿಯಲ್ಲಿ ಮುಗುಳು ನಗೆಯನ್ನು ಬೀರಿ ಹಲ್ಲು ಕಿಸಿಯುತ್ತಿದ್ದಳು. ಗುಣವಂತಿ ಕಣ್ಣುಮುಚ್ಚಿ, ಕೈಕುಲುಕಿಸಿ, ಕಾಲುಹಾರಿಸಿ ಅನೇಕ ಸನ್ನೆಗಳನ್ನು ಮಾಡುತ್ತಿದ್ದಳು. ಅವುಗಳಲ್ಲಿಯ ಕರ್ತವ್ಯ ಕರ್ಮವನ್ನು ಗುರುಗಳು ಅರಿತುಕೊಳ್ಳುತ್ತಿದ್ದರು. ತಿಳಿಯದವುಗಳಿಗೆ ಇನ್ನೆರಡು ದಿನಗಳು ಹೋಗಲಿ! ಎಂದು ದ್ವೈತರಂತೆ ಬೆರಳೆತ್ತಿ ತೋರಿಸುತ್ತಿದ್ದರು. ಸಮಾಧಾನವನ್ನು ಹೇಳುತ್ತಿದ್ದರು. ಯಾರಿಲ್ಲದಾಗ ಗುಣವಂತಿಯು ಹಿತ್ತಲ ಮನೆಯಲ್ಲಿ ಸುಳಿದಾಡಿ ಗುರುಗಳ ಮೈಗೆ ಒರಸೊರಸಿ ಹೋಗುತ್ತಿದ್ದಳು. ಮೊಲೆಯ ಮೇಲಿನ ಸೆರಗನ್ನು ಹಾರಬಿಟ್ಟು ಅಂಗಸೌಂದರ್ಯವನ್ನು ತೋರಿಸುತ್ತಿದ್ದಳು. ಗುರುಗಳು ಒಂದಿಷ್ಟು ಕೈಹಚ್ಚಿ, ಕಿವಿಯಲ್ಲಿ ಹೇಳಿದಂತೆ "ಎರಡು ದಿನ ನಿಲ್ಲು. ಈಗ ಸರಿಯಲ್ಲ!" ಎನ್ನುತ್ತಿದ್ದರು.

ಕೆಲಸ ಮುಗಿಸಿ ಗುಣವಂತಿ ಒಂದು ದಿನ ಒಳಗೆ ಬರುತ್ತ—

"ಕಲ್ಯಾಣಿ ಅಮ್ಮನವರಿಗೆ ಇಂದು ಗುಣವಿಲ್ಲವೇನು ?" ಎಂದಳು.

ಕಲ್ಯಾಣಿಗೆ ಆಗ ನಿದ್ದೆ ಹತ್ತಿದ್ದಿತು.

ಕರುಣನು ಹೊರಗೆ ಕುಳಿತು ಯಾವುದೋ ಪುಸ್ತಕವನ್ನು ಓದುತ್ತಿದ್ದನು.

ಗುರುಗಳು ಎದ್ದು ಬಂದು ಬಾಗಿಲ ಹತ್ತರ ನಿಂತು "ಇಂದು ಒಂದಿಷ್ಟು ಗುಣವೆನಿಸಹತ್ತಿದೆ" ಎಂದು ನುಡಿದರು.

" ಆದದ್ದೇನು ಅಣ್ಣನವರೇ ? " ಎಂದು ಕಕ್ಕುಲತೆಯಿಂದ ಕೇಳಿದಳು.

" ಏನಾಗಿದೆ ಎಂಬುದು ನಮಗೆ ತಿಳಿಯಲೊಲ್ಲದು."

" ವೈದ್ಯರಿಗಾದರು ತೋರಿಸಿದಿರಾ ? "

" ಅವಳು ಬೇಡೆಂದು ನುಡಿದಳು."

" ಬೇನೆ ಎಂಥದೆಂಬುದು ತಿಳಿಯಬಾರದೇ ? "

" ಬೇನೆ ಏನು ! ಗಾಳಿಯಾದಂತೆ ಮಾಡುವಳು."

" ಗಾಳಿಯೇ ! "

" ಈಗ ಐದಾರು ದಿನಗಳ ಹಿಂದೆ ರಾತ್ರಿ ಅಕಸ್ಮಾತ್ತಾಗಿ ಹಾಸಿಗೆಯಿಂದ ಎದ್ದಳು. ಯಾರೋ ಬಂದಿರುವರು. ಯಾವಳೋ ಬಂದಿರುವಳು ! ಎಂದು ಚೀರಹತ್ತಿದಳು. ನಾನು ಎದ್ದು ಸುತ್ತೆಲ್ಲ ನೋಡಿದೆ. ಯಾರಿರುವರು. ಯಾರಿಲ್ಲ ! ಯಾರಿಲ್ಲವೆಂದು ನಾನು ಎಷ್ಟು ಸಾರೆ ಹೇಳಿದೆ. ಅವಳು ಕೇಳಲಿಲ್ಲ. ಒಂದೇಸಮನೆ ಚೀರಹತ್ತಿದಳು. ನಾನು ಹಿಡಿದು ಒಂದಿಷ್ಟು ಸಮಾಧಾನ ಪಡಿಸಬೇಕೆಂದರೆ ನನ್ನ ಸಂಗಡ ಗುದ್ದಾಟ ನಡಿಸಿದಳು. ತನ್ನ ಮೈಯಲ್ಲಿಯ ಶಕ್ತಿಯನ್ನೆಲ್ಲ ಉಪಯೋಗಿಸಿ ಗುದುಮುರಿಗೆ ನಡಿಸಿ ಚೀರಾಡಿ, ಜಿಗಿದಾಡಿ ಕೊನೆಗೆ ಎಚ್ಚರದಪ್ಪಿ ಬಿದ್ದಳು. ಅಂದು ಬಿದ್ದವಳು ಇನ್ನೂ ಎದ್ದು ನಡೆದಾಡಿಲ್ಲ " ಎಂದು ವರ್ಣಿಸಿದರು.

" ಹ ! ತಿಳಿಯಿತು ಬಿಡಿರಿ."

" ಇಷ್ಟೇ ! "

" ಯಾರ ಹೆಸರನ್ನು ನುಡಿದರು ? "

" ಅವಳೇನು ನುಡಿದಿಲ್ಲ "

" ನೀವು ಕೇಳಬಹುದಿದ್ದಿತು ? "

" ನಾವೂ ಕೇಳಲಿಲ್ಲ."

" ಹೆಣ್ಣು ದೆವ್ವ ! ಅಣ್ಣನವರೇ ಹೆಣ್ಣು ದೆವ್ವ ಬೇಗ ಹೋಗುವುದಿಲ್ಲ. ಆದರ ಆಶೆ ಏನೋ ! ಎಷ್ಟು ಪರುಷ ಕಾಡುವುದೋ ! ಕೆಲವು ಹೆಣ್ಣು ದೆವ್ವಗಳು ಜೀವವನ್ನೇ ನುಂಗಿಬಿಡುವುವು."

" ದೆವ್ವ ಹಿಡಿದುದು ನಿಜವಿದ್ದರೆ ಏನು ಮಾಡಬೇಕು ಗುಣವಂತೀ ? " ಗುರುಗಳು ಕುತುಹಲದಿಂದ ಕೇಳಿದರು.

"ಅದನ್ನು ಬಿಡಿಸುವುದು ಕಠಿಣ ಬಿಡಿರಿ. ಅದರಲ್ಲಿ ಸವತಿ ಇದ್ದರಂತೂ ಮಾತಾಡಲೇ ಬಾರದು."

"ಇವಳು ಹೇಳುವ ಮಾತಿನ ಮೇಲಿಂದ, ವರ್ಣಿಸುವ ಲಕ್ಷಣಗಳ ಮೇಲಿಂದ ಆಕೆಯು ಕರುಣನ ತಾಯಿಯಂತೆಯೇ ಇರುವಳು. ಕರುಣನು ಹತ್ತರ ಬಂದರೆ ಸುಮ್ಮನಾಗುವಳು. ಎಚ್ಚರಾಗಿಬಿಡುವಳು."

"ಸಾಕು ಬಿಡಿರಿ. ಅವಳು ಸವತಿಯೇ! ನಿಮ್ಮ ಮೊದಲಿನ ಹೆಂಡತಿಯು ದೆವ್ವ ಆಗಿ ಈಗ ಹಿಡಿದಿರುವಳು. ಇದರಲ್ಲಿ ಸಂಶಯವಿಲ್ಲ."

"ಅವಳು ಸತ್ತು ಬಹಳ ದಿನಗಳಾದುವು ಗುಣವಂತಿ!"

"ನಮಗೆ ನಿಮಗೆ ಬಹಳ ವರುಷಗಳು! ವಾಸನೆಯನ್ನಿಟ್ಟು ಸತ್ತ ಜೀವಿಗಳಿಗೆ ಅದೆಷ್ಟರದು! ಅವು ದೆವ್ವಿನ ರೂಪದಿಂದ ಸಂಚರಿಸುತ್ತಿರುವವು. ಇಂದು ಕಲ್ಯಾಣಿ ಅಮ್ಮನವರು ಸಿಕ್ಕರು. ಹಿಡಿದುಕೊಂಡಿರುವುದು! ನಿಮಗೆ ಒಂದಿಷ್ಟು ಕಷ್ಟವಾದರೂ ಚಿಂತೆಯಿಲ್ಲ. ಅದನ್ನು ಬೇಗನೆ ಬಿಡಿಸಿರಿ. ಇಲ್ಲದಿದ್ದರೆ ಹೆಂಡತಿಯನ್ನು ಕಳೆದುಕೊಳ್ಳುವಿರಿ."

"ಹೇಗೆ ಬಿಡಿಸುವುದು?"

"ನನ್ನ ತಾಯಿಗೆ ಗೊತ್ತಿದೆ. ಇಲ್ಲಿಯೇ ಸಮೀಪದಲ್ಲಿ ಒಂದು ಹಳ್ಳಿಯಿದೆ. ಅಲ್ಲಿ ಒಬ್ಬ ಸಾಧುವು ಇರುವನು. ಅವನು ದೆವ್ವಗಳನ್ನು ಬಿಡಿಸುವನು. ನನ್ನ ತಾಯಿಯು ಅನೇಕ ಸಾರೆ ಹೋಗಿರುವಳು."

"ಗಂಗಮ್ಮನನ್ನು ಸಂಜೆಯ ಮುಂದೆ ಮನೆಯ ಕಡೆಗೆ ಕಳಿಸು ಹಾಗಾದರೆ!"

"ಸಂಜೆಗೆ ಆಕೆಯ ಕಣ್ಣುಗಳು ಕಾಣುವುದಿಲ್ಲ. ಇಳಿಗಣ್ಣು ಬರುತ್ತವೆ."

"ಹಾಗಾದರೆ!"

"ನೀವು ತಿರುಗಾಡುತ್ತ ಆ ಕಡೆಗೆ ಬಂದುಬಿಡಿರಿ."

"ನಾನೇ?"

"ಹ!"

ನಗುತ್ತ ಈಗ ಬೇಡೆಂದು ಸಂಜ್ಞೆ ಮಾಡಿದರು.

"ಕರುಣಪ್ಪನನ್ನು ಕಳಿಸಿಕೊಡಿರಿ."

"ಒಳ್ಳೇದು. ಏನಾದರು ಮಾಡುವ. ನೀನು ಗಂಗಮ್ಮನಿಗೆ ಹೇಳಿರು".

" ಆಗಲಿ " ಎಂದು ಗುಣವಂತಿ ಎದ್ದಳು. ಆಕಳಿಸಿ ಎದೆಯನ್ನು ಮುರಿದುಕೊಂಡಳು. ಕಣ್ಣು ಚಿವುಟಿದಳು. ಮೂಗು ಏರಿಸಿದಳು. ಕೈ ಹಾರಿಸಿದಳು.

ಗುರುಗಳು ಇದೆಲ್ಲವನ್ನು ಕುತುಹಲದಿಂದ ನೋಡುತ್ತ ನಿಂತರು. ಗುಣವಂತಿ ಗುರುಗಳನ್ನು ಹಿಡಿದುಕೊಳ್ಳುವವಳಂತೆ ಮುಂದೆ ಬಂದಳು. ಗುರುಗಳು ಹಿಂದೆ ಸರಿದು ಕೈ ಮುಂದೆ ಮಾಡಿದರು. ಗುಣವಂತಿ ಅದನ್ನು ಹಿಡಿದು ಎದೆಯ ಮೇಲಿಟ್ಟುಕೊಂಡು ನಗಹತ್ತಿದಳು.

ಹೊರಗಿನ ಬಾಗಿಲು ತೆರೆದ ಸದ್ದಾಯಿತು.

" ಹಾಗಾದರೆ ನೀವೇ ಬನ್ನಿರಿ ! "

" ಒಳ್ಳೇದು " ಎಂದು ಸಾವರಿಸುತ್ತ ಮಾತಾಡಿದರು.

ಗುಣವಂತಿ ಹೊರಗೆ ಬರಹತ್ತಿದಳು. ಕರುಣನು ಬಾಗಿಲು ತೆರೆದು ಎದುರಿಗೆ ಬಂದನು.

" ನೀನು ನಮ್ಮ ಮನೆಯನ್ನು ನೋಡಿರುವೆಯಾ ಕರುಣಪ್ಪ ? " ಎಂದು ಕೇಳಿದಳು.

" ಇಲ್ಲ ಏಕೆ ? "

" ಒಂದು ಕೆಲಸವಿದ್ದಿತು."

" ಏನು ? "

" ಗುರುಗಳು ಹೇಳುವರು ಕೇಳು."

ಎಂದು ಹೊರಬಿದ್ದು ಮನೆಯ ಕಡೆಗೆ ನಡೆದಳು.

ಕರುಣನು ತಂದೆಯವರು ಏನಾದರು ಹೇಳಬಹುದು ಎಂದು ನಿಂತು ದಾರಿಯನ್ನು ಕಾಯ್ದನು. ಆದರೆ ಅವರು ಏನೂ ಹೇಳಲಿಲ್ಲ.

## ೧೭

ಗುರುಗಳ ಜೀವನದಲ್ಲಿ ಇಂಥ ಅಮೃತಯೋಗಸಿದ್ಧಿಯನ್ನು ಒದಗಿಸಿ ಕೊಟ್ಟ ಶ್ರೇಯಸ್ಸು ಗಂಗಮ್ಮನದೇ ಸರಿ. ಮಗಳು ಗುಣವಂತಿಯೂ ಸಹ ಗುರುಗಳ ಮೇಲೆಯೇ ಎಸರಿಟ್ಟು ಕುಳಿತಿದ್ದಳು. ಬಾಗಿಲಿಗೆ ಎಷ್ಟೋ ಜನರನ್ನು ಮೂಗು ಮುರಿದು ಕಳಿಸಿದ್ದಳು. ಆದರೆ ಗುರುಗಳ ರೂಪು, ಯೌವನ, ಮೈಮಾಟ ಕಣ್ಣು ತುಂಬಿದ್ದುವು. ಬಾಳೆಯ ಹಣ್ಣಿನಂತಹ ಅವರ ಮೈಬಣ್ಣ ಮನೋಹರವಾಗಿದ್ದಿತು. ಗುಣವಂತಿಯು ಈ ಮೊದಲೇ ಒಬ್ಬಿಬ್ಬ ಕಲಿತವರ ಸ್ನೇಹ ಮಾಡಿದ್ದಳು. ಅವರು ಬಿಟ್ಟೊ ಬಹಳ ದಿನ ಗಳಾಗಿದ್ದುವು. ನಟ್ಟು ಕಡಿದು, ನೇಗಿಲು ಹೊಡೆದು, ಗೋಡೆ ಕಟ್ಟಿ, ಚಕ್ಕಡಿ ಯನ್ನು ನಡಿಸಿ ಉಪಜೀವಿಸುವ ಗಂಡ ಇಲ್ಲವೆ ಯಜಮಾನರಿಗಿಂತ ತಿಂಗಳ ಸಂಬಳ ತರುವ, ಕಲಿತು ಹತ್ತು ಜನರಲ್ಲಿ ಮನ್ನಣೆಯನ್ನು ಪಡೆಯುವವರು ಒಳ್ಳೆಯವರೆಂದೇ ಅವಳ ಅನುಭವದ ಅಭಿಪ್ರಾಯವಾಗಿದ್ದಿತು. ಚೆಲುವಿನ ಬೇಟೆಯಾಡುವ ಹೆಣ್ಣಿನ ಕಣ್ಣಲ್ಲಿ ಇದು ಯೋಗ್ಯವಾದ ಸಿದ್ಧಾಂತ. ದುಡಿದು ತಿನ್ನುವವರ ಸಂಗಡ ತಾವೂ ದುಡಿಯಬೇಕು. ಪ್ರಸಂಗ ಬಂದರೆ ಮಣ್ಣು ಹೊರಬೇಕು. ಕಲ್ಲು ಹೊರಬೇಕು. ಕೆಸರು ಹೊರಬೇಕು. ಮುಂಜಾವಿ ನಿಂದ ಸಂಜೆಯವರೆಗೆ ಬೆವರು ಸುರಿಸಿ ಮನೆಗೆ ಬರುವಷ್ಟರಲ್ಲಿ ಮೈಯ ಸ್ನಾಯುಗಳು ಕಣ್ಣುಬಿಡುತ್ತಿರುವುವು. ಬುಟ್ಟಿಯಲ್ಲಿ ಬಿದ್ದ ಒಂದೆರಡು ಒಣ ರೊಟ್ಟಿಯ ಚೂರುಗಳನ್ನು ತಿಂದು, ಮಡಿಕೆಯಲ್ಲಿಯ ತಂಗುಳ ನೀರು ಕುಡಿದು ಹಾಸಿಗೆಯನ್ನು ಬಿಚ್ಚಿ ಅಡ್ಡಾಗುವಷ್ಟರಲ್ಲಿ ನಿದ್ರಾದೇವಿ ಸೆರೆ ಹಿಡಿದುಬಿಡುವಳು. ರಾತ್ರಿಯು ಬಂದಿತು ಹೇಗೆ, ಹೋಯಿತು ಹೇಗೆ ತಿಳಿಯುವಂತಿಲ್ಲ. ಕೋಳಿಯ ಸಂಗಡಲೇ ಎದ್ದು ಮನೆಯ ಜೋಳವನ್ನು ಬೀಸಬೇಕು ಭತ್ತ ಕುಟ್ಟಬೇಕು. ಹರಿದ ಅರಿವೆಗಳನ್ನು ಹೊಲಿದುಕೊಳ್ಳಬೇಕು. ಇಷ್ಟು ದುಡಿದು ಪಡೆಯುವು ದೇನು? ದಿನಕ್ಕೆ ಎರಡು ಹೊತ್ತು ಒಣಒಣ ಊಟ, ವರುಷಕ್ಕೆ ಅಗ್ಗದ ಬೆಲೆಯ ಎರಡು ಸೀರೆ. ಯುಗಾದಿಗೊಮ್ಮೆ ಒಂದು ಸವುಟು ಕೊಬ್ಬರಿಯ ಎಣ್ಣೆ ತಲೆಗೆ! ಮುಗಿಯಿತು. ಜೀವನದ ಗುರಿ, ಉದ್ದೇಶ. ಪುರುಷಾರ್ಥ

ಇಷ್ಟೇ! ಇದೇ ಬಾಳಿನ ಮುಕ್ತಿಯೆಂದರೂ ಸರಿ. ಅದಕ್ಕೆ ಕಲಿತು, ದುಡಿದು, ಸಂಬಳ ತರುವವರ ಸಹವಾಸ ರಮ್ಯವಾದುದು. ರೋಮಾಂಚನಕಾರಿಯಾದುದು. ಕಲಿತವನ ಕೈಹಿಡಿದರೆ!—

ಅವನು ಗಂಡನಿರಲಿ, ಇನ್ನಾರೇ ಇರಲಿ ಅದರ ರೀತಿಯೇ ಬೇರೆ!

ಬೆಳಗಿನಲ್ಲಿ—ಸಕ್ಕರೆ ನಿದ್ದೆಯನ್ನು ಬಿಟ್ಟು ಏಳುವ ಅವಶ್ಯಕತೆಯಿಲ್ಲ. ಸೂರ್ಯನು ಬಂದು ಕಿರಣಗಳನ್ನು ದಿಗಂತದಲ್ಲಿ ಹರಡಿ ಬೆಳಕಿನ ಹಂದರವನ್ನು ನಿಲ್ಲಿಸಬೇಕು. ಕತ್ತಲೆಯು ಎತ್ತೆತ್ತಲೋ ಓಡಿಹೋಗಬೇಕು. ಅವನ ಆವರ್ತ ಪರಾವರ್ತನ ಕಿರಣಗಳು ಮನೆಯ ಕಿಡಿಕಿ-ಬಾಗಿಲ ಸಂದಿಯೊಳಗಿಂದ ಮನೆಯೊಳಗೆ ಇಣಿಕಿಕ್ಕಬೇಕು. ಕಣ್ಣ ಮೇಲೆ ದಪ್ಪವಾಗಿ ನಿಂತ ನಿದ್ದೆಯ ಪರದೆಯನ್ನು ಸರಿಸಬೇಕು. ಆಗ ಏಳುವುದು. ಮುಖವನ್ನು ತೊಳೆದುಕೊಳ್ಳುವುದು. ಚಹ, ಅದರ ಸಂಗಡ ಅವಲಕ್ಕಿ, ಬ್ರೆಡ್ಡು—ಇಲ್ಲದಿದ್ದರೆ ಚುರಮುರಿ. ಮುಂದೆ ಪ್ರಾತರ್ವಿಧಿ, ಸ್ನಾನ. ಯಜಮಾನರ ಸಂಗಡ ನಿನ್ನಿನ ರಾತ್ರಿಯ ರಸಕೇಳಿಯ ಚರ್ಚೆ. ಅದರಲ್ಲಿ ಸೋತವರಾರು, ಗೆದ್ದವರಾರು? ಸೋಲಲು ಕಾರಣವೇನು? ಗೆಲಿಯಲು ಪ್ರಮಾಣಗಳೇನು? ಆಗ ರಾತ್ರಿಯೆಷ್ಟು? ಆರಂಭ ಯಾವಾಗ, ಮುಕ್ತಾಯ ಯಾವಾಗ? ನಿದ್ದೆ ಹತ್ತಿದ್ದು ಯಾವಾಗ? ಇತ್ಯಾದಿಗಳ ವಿಸ್ತೃತ ವರ್ಣನೆ. ವಿವರಣೆಯ ತುಂಬ ಕಣ್ಣು ಕಣ್ಣು ಕುಣಿಸುವುದು, ಮೂಗು ಏರಿಸುವುದು, ಕೈ ಎತ್ತರಿಸುವುದು, ಕಾಲು ಸರಿದಾಡಿಸುವುದು, ನಡುಮಣಿಸುವುದು ಮುಂತಾದ ಅಂಗ-ಪ್ರತ್ಯಂಗಗಳ ವಿಕ್ಷೇಪ!

ಮಧ್ಯಾಹ್ನ—ಊಟ. ಊಟದ ಆಡಂಬರ. ಇದು ಹಿತ, ಅದು ಅಹಿತ, ಎಂಬ ಪಾಕಶಾಸ್ತ್ರದ ಪರಾಮರ್ಶೆ. ಮುಂದೆ ವಾಮಕುಕ್ಷಿಯ ರಚನೆ. ಅದರ ಸಾಲಂಕಾರ, ಸಾಹಚರ್ಯ—ಸೌಂದರ್ಯಗಳ ಇತಿಮಿತಿ. ರತಿಕೇಳಿ ಒಂದಿಷ್ಟು ನಿದ್ದೆ. ಮುಂದೆ ಮುಖಮಾರ್ಜನ ದೈಹಿಕ ಅಲಂಕಾರ. ಸಾಧ್ಯವಾದರೆ ತಿರುಗಾಟ. ಇಲ್ಲದಿದ್ದರೆ ಧರ್ಮಕ್ಕಾಗಿ ದೇವರ ದರ್ಶನ. ಮನದ ಪಾಪವನ್ನು ಕಳೆಯಲಿಕ್ಕೆ ಅವನಿಗೆ ವಂದನೆ. ಪ್ರದಕ್ಷಿಣೆ.

ಸಂಜೆಯು—ಊಟ. ಮತ್ತೆ ನಿದ್ದೆಯ ಸಿದ್ಧತೆ. ಶೃಂಗಾರ ಸಾರದ ಸವಿಯೂಟ.......ಜೀವನವು ಇದನ್ನೇ ಬಯಸುವುದು. ಇದು ನಿತ್ಯಕೆಸರಿನ ಕಷ್ಟವನ್ನು ಮಾಡುವ ಗಂಡ ಇಲ್ಲವೆ ಯಜಮಾನನಿಂದ ಸಾಧ್ಯವೇ? ಅವನು

ಮಣ್ಣಿನ ಹುಳುವಾಗಿ ಬಾಳುವನು. ಮಣ್ಣಾಗಿ ಒಂದು ದಿನ ಮಡಿಯುವನು. ಸುಖವೆಂಬುದಿಲ್ಲ. ನಂಬಿದವರಿಗೂ ಇಲ್ಲ. ಆ ಹಾಳು ಬಾಳು ಯಾರಿಗೆ ಬೇಕು. ಇಂಥ ಜೀವಂತ ನರಕವನ್ನು ಯಾರು ಬಯಸುವರು ? ಹೆಣ್ಣಾಗಿ ಒಂದು ಮನೆಯಲ್ಲಿ ಹುಟ್ಟಿ, ಮಣ್ಣಾಗಿ ಇನ್ನೊಬ್ಬನ ಮನೆಯಲ್ಲಿ ಯಾರು ಸಾಯಬಯಸುವರು ? ಛೇ ... ಛೇ.... ಯಮಯಾತನೆಯು ಬೇರೆಲ್ಲಿಯೂ ಇಲ್ಲ. ಇಂಥ ಹೆಣ್ಣಿನ ಬಾಳುವೆಯ ಬೇಲಿಯಲ್ಲಿಯೇ ಇದೆ. ನಾನು ಉಂಡಿರುವೆ. ನವೆದಿರುವೆ. ಇನ್ನು ಸಾಕು. ಜನ್ಮಜನ್ಮಾಂತರಕ್ಕು ಸಾಕು ! ಎಂದು ಗುಣವಂತಿಯು ತನ್ನ ಬಾಳಿನ ಅಲ್ಪಭಾಗದಲ್ಲಿ ಆಲೋಚಿಸಿ ತಿಳಿದುಕೊಂಡ ಸಂಗತಿಯು. ಈ ತುಂಡು ಸುಖದ ಒಂದೆರಡು ಸನ್ನಿವೇಶಗಳನ್ನು ಉಂಡಿದ್ದಳು. ರುಚಿ ನೋಡಿದ್ದಳು. ಜೀವ ಆ ಕಡೆಗೇ ಓಡುತ್ತಿದ್ದಿತು. ಅದಕ್ಕೆ ಗುರುಗಳು ಯೋಗ್ಯರೆಂದು ಆರಿಸಿಕೊಂಡಿದ್ದಳು. ಅವರು ಮಗ ರೆಂದೇ ಅವಳ ಎಣಿಕೆ. ತನಗೂ ಒಳ್ಳೆಯವರೆಂದೇ ಅವಳ ಕಲ್ಪನೆ. ಬಲೆಯನ್ನು ಒಡ್ಡಿ ನಿಂತಿದ್ದಳು. ಗುರುಗಳು ತಲೆಯನ್ನೊ ಹಾಕಿದ್ದರು, ಬಾಲವು ಮಾತ್ರ ಹೊರಗೆ ಉಳಿದಿದ್ದಿತು. ಅದನ್ನೊಂದು ಬಲೆಯಲ್ಲಿ ಕೆಡವಿಕೊಂಡರೆ ಇಡೀ ಪುರುಷ ಪಶುವು ತನ್ನ ಮುಪ್ಪುರಿಯ ಬಲೆಯಲ್ಲಿ ತುಂಬಾ ಸಿಕ್ಕುಬಿಟ್ಟಿತೆಂದು ತಿಳಿದಿದ್ದಳು. ಅದೂ ಸಿದ್ಧಿಸುವಂತೆ ಕಂಡಿತು. ದೈವವೇ ಅನುಕೂಲವನ್ನು ತಂದಿತು.

ಕಲ್ಯಾಣಿಗೆ ಭೂತಸಂಚಾರವಾದ ಸಂಗತಿ ಒಳ್ಳೆಯದಾಯಿತು. ಗುಣವಂತಿಯು ತನ್ನ ತಾಯಿಗೆ ತಿಳಿಸಿದಳು. ಅವಳನ್ನು ಕರೆದುಕೊಂಡು ಹೋಗಿ ಭೂತ ಬಿಡಿಸಿ ತರಲು ಬಲವಂತ ಮಾಡಿದಳು. ಅದರಿಂದ ತನ್ನ ಕಾರ್ಯವೂ ಸಿದ್ಧಿಸುವುದೆಂದು ಕಿವಿಯಲ್ಲಿ ಹೇಳಿದಳು. ಗಂಗಮ್ಮನಿಗೂ ಮಗಳ ಬಯಕೆ ಕೈಗೂಡುವುದು ಬೇಕಾಗಿದ್ದಿತು. ಗುರುಗಳಾಗಲಿ, ಅವರ ಮಗ ಕರುಣನಾಗಲಿ ತನ್ನ ಸಂಗಡ ಬರಲೆಂದು ತಿಳಿಸಿದಳು. ಆದರೆ ಅಂದು ಸಂಜೆಗೆ ಕರುಣನೂ ಬರಲಿಲ್ಲ, ಗುರುಗಳೂ ಬರಲಿಲ್ಲ. ಬಯಕೆ ಬಯಲಾಗುವಂತೆ ಕಂಡಿತು.

ಮರುದಿನ ಕೆಲಸಕ್ಕೆ ಬಂದ ಸಮಯದಲ್ಲಿ ಗುಣವಂತಿಯು ಕೇಳಿದಳು. ಕಲ್ಯಾಣಿಯು "ನನಗೇನಾಗಿದೆ. ಭೂತವಿಲ್ಲ, ಬೇತಾಳವಿಲ್ಲ" ಎಂದು ಹೇಳಿದಳು. ಗುರುಗಳು ಎಷ್ಟು ಆಗ್ರಹಮಾಡಿದರೂ ಅವಳು ದಮ್ಮಯ್ಯ ಎನ್ನಲಿಲ್ಲ. ಹತಾಶಳಾಗಿ ಮನೆಗೆ ಹೋದಳು.

ಮರುದಿನ ಗಂಗಮ್ಮನೇ ಬಂದಳು. ಕಲ್ಯಾಣಿಯನ್ನು ಮಾತಾಡಿಸಿದಳು. ಅವಳು ಒಂದಿಷ್ಟು ಸುಧಾರಿಸಿಕೊಂಡು ಕೆಲಸದಲ್ಲಿ ತೊಡಗಿದ್ದಳು. ಗುರುಗಳು "ಕಲ್ಯಾಣಿಯನ್ನು ಒಪ್ಪಿಸುವುದು ನಿನ್ನ ಕೆಲಸ. ತಗಲಿದ ಹಣವನ್ನು ಕೊಡುವುದು ನನ್ನ ಕೆಲಸ" ಎಂದು ಹೇಳಿ ಹೊರಗೆ ಹೋದರು. ಗಂಗಮ್ಮನು ಕಲ್ಯಾಣಿಯನ್ನು ಕೂಡಿಸಿಕೊಂಡು ಮಾತು ಬಿಚ್ಚಿದಳು.

"ತಾಯೀ, ನೀನು ಹೀಗೆ ಹಟಮಾಡಿದರೆ ಯಾವುದೂ ನಡೆಯಲಾರದು. ಒಪ್ಪು. ನಾಳಿನ ದಿನ ನಾನು ಕರೆದುಕೊಂಡು ಹೋಗುವೆ. ಆ ಸ್ವಾಮಿಗೆ ತೋರಿಸುವೆ. ಅವನು ಹೇಳಿದುದನ್ನು ಕೇಳಿಕೊಂಡು ಬರುವ." ಎಂದಳು.

"ನನಗೇನಾಗಿದೆ ಗಂಗಮ್ಮ! ಒಳಿತಾಗಿಯೇ ಇರುವೆನು. ಯಾವ ಭೂತವಿಲ್ಲ. ಏನಿಲ್ಲ. ನಾಲ್ಕು ದಿನಗಳಲ್ಲಿ ಮೊದಲಿನಂತೆ ಆಗುವೆ." ಎಂದು ಹಾರಿಸಿಕೊಂಡು ನುಡಿದಳು.

"ಅಲ್ಲಮ್ಮ, ಈಗ ಎರಡು ಮೂರು ಸಾರೆ ನೋಡಿ ಅನುಭವ ಪಟ್ಟಿರುವೆ. ನನಗೂ ಅದರ ಸಂಶಯವಿದೆ. ನಿನ್ನ ಸವತಿಯು ಸತ್ತು ೧೦-೧೨ ವರುಷಗಳಾದುವು. ಯಾರಿಗೂ ಕಂಡಿಲ್ಲ. ಯಾರ ಕಣ್ಣಿಗೂ ಬಿದ್ದಿಲ್ಲ. ನಿನಗೇ ಕಾಣಬೇಕೆಂದರೆ! ಇದು ಭೂತಸಂಚಾರವು ನಿಜವಾದುದು. ನೀನು ತಡೆದರೆ ವಿಪರೀತವಾಗುವುದು. ನಾಳೆ ನಡೆ. ನಾನು ಎಲ್ಲ ಸಿದ್ಧತೆಯನ್ನು ಮಾಡಿರುವೆನು. ನೀನು ಒಪ್ಪುವುದು ಒಂದೇ ಬೇಕು. ನಾನು ಎಲ್ಲವನ್ನು ಮಾಡುವೆ."

ಕಲ್ಯಾಣಿಯು ಒಪ್ಪಲಿಲ್ಲ. ಗಂಗಮ್ಮನೂ ಜಗ್ಗಲಿಲ್ಲ.

"ಕಲ್ಯಾಣಿಯಮ್ಮ, ನೀನು ಇನ್ನೂ ಚಿಕ್ಕವಳು. ಬಾಳಬೇಕು, ಬದುಕಬೇಕು ಎಂಬ ಆಶೆಯಿದ್ದವಳು. ಕರುಣನ ತಾಯಿಯು ಚಿಕ್ಕ ವಯಸ್ಸಿನಲ್ಲಿಯೇ ಬಂದಿದ್ದಳು. ಆನಂದದಿಂದಲೇ ಬಂದಿದ್ದಳು. ಸುಖದಲ್ಲಿಯೇ ಬಾಳಿದಳು. ಚೊಚ್ಚಲ ಬಸುರಿಗೆ ಎಷ್ಟು ಸಂತೋಷಪಟ್ಟಳು! ಊರಲ್ಲಿ ಗುರುಗಳ ಹೆಂಡತಿಯೆಂದು ಎಷ್ಟು ಜನರು ಕುಪ್ಪುಸ ಮಾಡಿದರು! ಎಷ್ಟು ಜನರು ಊಟಕ್ಕೆ ಕರೆದರು! ಎಷ್ಟು ಜನರು ವಿನೋದ ಮಾಡಿದರು! ನಾನು ಎಲ್ಲವನ್ನು ಈ ಕಣ್ಣಿನಿಂದ ನೋಡಿರುವೆನು. ದಿನ ತುಂಬಿ ಕರುಣನನ್ನು ಹೆತ್ತಳು. ಅವಳ ಆನಂದ ಹೇಳತೀರದು. ಚೊಚ್ಚಲು ಗಂಡಸು ಮಗನಾದ

ನೆಂದು ಎಂಥ ಅಕ್ಕರೆ! ಗುರುಗಳು ಊರ ತುಂಬ ಸಕ್ಕರೆಯನ್ನು ಹಂಚಿದರು. ಆ ತಾಯಿ ಕೊಟ್ಟ ಸಕ್ಕರೆಯಲ್ಲಿ ನಾನು ತಿಂಗಳ ವರೆಗೆ ಚಹ ಮಾಡಿ ಕುಡಿದಿರುವೆ. ಮಗನು ದೊಡ್ಡವನಾದಂತೆ ಪ್ರೀತಿ, ಪ್ರೇಮ, ಮಮತೆ ಇನ್ನೂ ಹೆಚ್ಚಾದುವು. —ಅವನನ್ನು ರಾಜನನ್ನಾಗಿ ಮಾಡುವೆ. ಒಬ್ಬ ರಾಣಿಯನ್ನು ತಂದು ಮದುವೆ ಮಾಡುವೆ. ನನ್ನ ಮಗನು ಪಂಡಿತನಾಗುವನು! ಇತ್ಯಾದಿಯನ್ನು ನುಡಿಯುತ್ತಿದ್ದಳು. ಮಗನ ಮೇಲೆ ಇಷ್ಟು ವಾತ್ಸಲ್ಯ! ತಾಯಿಯ ಪ್ರೇಮ ಇಷ್ಟಿರುವುದು ಸ್ವಾಭಾವಿಕವೇ ಸರಿ. ಆದರೆ ಅಕಸ್ಮಿತವಾಗಿ ತೀರಿಕೊಂಡಳು. ಆ ಬಯಕೆಗಳೆಲ್ಲ ಹಾಗೇ ಉಳಿದುವು. ಈಗ ಭೂತ ಆಗಿರಬಹುದು. ಸಂಶಯವಿಲ್ಲ. ಇಷ್ಟು ದಿನ ಎಲ್ಲಿಯೋ ಇರಬೇಕು. ಇಂದು ನಿನ್ನ ಕಣ್ಣಿಗೆ ಕಂಡಿರಬೇಕು. ಇದೇನು ಆಶ್ಚರ್ಯದ ಮಾತಲ್ಲ. ನೀನು ತಡಮಾಡಿದಷ್ಟು ದಿನ ನಿನ್ನನ್ನು ಕಾಡುವಳು. ಅದಕ್ಕೆ ಹಟ ಮಾಡಬೇಡ ಒಪ್ಪು." ಎಂದಳು.

ಕಲ್ಯಾಣಿಯು ಅವಳ ಇಷ್ಟೆಲ್ಲ ಮಾತುಗಳನ್ನು ಭಯ—ಆಶ್ಚರ್ಯದಿಂದ ಕೇಳುತ್ತಿದ್ದಳು. ಆದರೆ ಯಾವ ಉತ್ತರವನ್ನು ಹೇಳಲಿಲ್ಲ.

"ನೀನು ಕರುಣನ ತಾಯಿಯಾಗಿಯೇ ಬಂದಿರುವೆ ತಾಯೀ! ಅವನ ನಿಜವಾದ ತಾಯಿ ಜೀವದಿಂದಿದ್ದರೆ ಇದಕ್ಕೂ ಹೆಚ್ಚಾಗಿ ಅಕ್ಕರೆಯನ್ನು ಮಾಡುತ್ತಿರಲಿಲ್ಲ. ನೀನು ಅವಳಾಗಿಯೇ ಬಂದಿರುವೆ. ಇದನ್ನು ನಾವು ಬಲ್ಲೆವು. ಕರುಣನ ಕೀರ್ತಿಗೆ ನೀನೂ ಪ್ರಯತ್ನಿಸುವೆ, ಆ ತಾಯಿಯ ಆಶೆಯಂತೆಯೇ ನಿನ್ನದೂ ಇರಬೇಕು, ಅದಕ್ಕೆ ಆಶೆಗಳೆಲ್ಲ ಪೂರ್ತಿಯಾಗಬೇಕಾದರೆ ನೀನು ಜೀವದಿಂದಿರಬೇಕಲ್ಲವೇ? ನೀನೂ ಅಕಸ್ಮಿಕ ತೀರಿಕೊಂಡರೆ ಆ ಅನಾಥ ಮಗನನ್ನು ಯಾರು ನೋಡಿಕೊಳ್ಳಬೇಕು?" ಎಂದು ಸಣ್ಣ ಕಣ್ಣು ಮಾಡಿ ನುಡಿದಳು.

ಈ ಮಾತುಗಳು ಕಲ್ಯಾಣಿಯ ಮನಸಿಗೆ ತಾಕಿದುವು. ಅವಳ ಮುಖ ಲಕ್ಷಣದಿಂದ ತಿಳಿಯಿತು. ಇದು ಯೋಗ್ಯ ಸಮಯವೆಂದು—

"ದೆವ್ವಗಳು ಹೇಗೆ ಬರುತ್ತವೆ, ಮೈಯಲ್ಲಿ ಹೇಗೆ ಸೇರುತ್ತವೆ ಹೇಳಲಿಕ್ಕೆ ಬಾರದು. ಕಾಡಲೇ ಬೇಕೆಂದರೆ ಅವುಗಳಿಗೆ ಸಾವಿರಾರು ದಾರಿಗಳು. ಮಲಗಿದಾಗ ಕಲ್ಲುಬಂಡೆಯನ್ನು ತಂದು ಹೇರುವುವು. ಕನಸಿನಲ್ಲಿ ಎಬ್ಬಿಸಿ

ಸ್ಮಶಾನಕ್ಕೆ ಕರೆದುಕೊಂಡು ಹೋಗುವುವು. ಬಾವಿಯಲ್ಲಿ ನೂಕುವುವು. ಬೆಂಕಿಯಲ್ಲಿ ನಡಿಸುವುವು. ಕೊಲ್ಲಬೇಕೆಂದರೆ ಅವುಗಳಿಗೆ ಹಂಚಿಕೆ ಬಹಳ. ಆ ಸವತಿ ನಿಮ್ಮನ್ನು ಇನ್ನೂ ಆ ದಾರಿಗೆ ತೆಗೆದುಕೊಂಡು ಹೋಗಿಲ್ಲ. ಹೋದರೆ ಯಾರು ನಿಮ್ಮನ್ನು ರಕ್ಷಿಸಬೇಕು ?"

ಕರುಣನು ಬಂದು ಕುಳಿತನು.

ಕಲ್ಯಾಣಿಯು ಅವನನ್ನು ತುಂಬುಗಣ್ಣು ಬಿಟ್ಟು ನೋಡಿದಳು, ಇವನ ಹಿತಕ್ಕಾಗಿಯೇ ಇವಳು ಹೇಳುತ್ತಿರುವಳಲ್ಲ! ಎಂದು ವಿಚಾರಿಸಿದಳು. ಗಂಗಮ್ಮ ಪುನಃ ಕರುಣನ ಕಡೆಗೆ ಕೈಮಾಡಿ—

"ಇವನ ಸಂತೋಷಕ್ಕಾದರೂ ನೀವು ಒಪ್ಪಬೇಕು. ನೀನಿಲ್ಲದ ಸಮಯ ದಲ್ಲಿ ಕರುಣಪ್ಪನು ಒಣಗಿದ ಕಟ್ಟಿಗೆಯಾಗಿದ್ದನು. ಮನೆಯಲ್ಲಿ ತಾಯಿ ಯೆಂಬುವ ಒಂದು ಪ್ರಾಣಿ ಇರಬೇಕು, ನೀನು ಬಂದೆ. ಪ್ರೀತಿಯಿಂದ ಕಂಡೆ ಈಗ ತರುಣನಂತೆ ಕಾಣಹತ್ತಿರುವನು ಹತ್ತು ಜನರಲ್ಲಿ ಎದ್ದು ಕಾಣುವನು. ಇಂಥ ಒಳ್ಳೆಯ ಮಗನ ಹಿತಕ್ಕಾದರೂ ನೀನು ಒಪ್ಪಬೇಕು." ಎಂದು ಮುಗಿಸಿದಳು.

"ಏನು ಗಂಗಮ್ಮ?" ಕರುಣನು ಕೇಳಿದನು.

"ನಿನ್ನ ತಾಯಿಗೆ ಭೂತ ಬಡಿದಿದೆ ಎಂದು ಸಂಶಯ. ತೋರಿಸಿ ಕೊಂಡು ಬರಬಾರದೇಕೆ? ಎಂಬ ವಿಚಾರ."

ಕರುಣನು ನಗಹತ್ತಿದನು.

"ನೀನು ನಗಬಹುದು. ನಗು. ಕಲಿತವರು ಭೂತಗಳನ್ನು ನಂಬುವು ದಿಲ್ಲ. ನಾನೂ ನಂಬುವುದಿಲ್ಲ. ಆದರೆ ಅದಕ್ಕೆ ಮಾಡಿದ ಉಪಾಯದಿಂದ ಗುಣವಾದರೆ ಕೇಡೇನು? ಭೂತ ಹೋಯಿತೋ, ಇಲ್ಲವೋ, ಒಂದು ಕಡೆ ಗಿರಲಿ. ಭೂತದಂತೆ ಕಾಣುವ ಬೇನೆಯಾದರೂ ವಾಸಿಯಾದರೆ ತಪ್ಪೇನು?"

ಕರುಣನು ಸುಮ್ಮನೆ ಕುಳಿತನು.

"ಅದಕ್ಕೇನು ವೆಚ್ಚವಿಲ್ಲ. ಒಂದೆರಡು ಕಾಯಿ, ಬಾಳೇಹಣ್ಣು, ಐದು ಬಿಲ್ಲಿ. ಆಯಿತು ಅದರ ವೆಚ್ಚ. ಅಪಾಯದಿಂದ ಪಾರಾಗಲು ಹತ್ತು ಹಂಚಿಕೆ ಗಳನ್ನು ಹಾಕಬೇಕು. ಒಂದಿಲ್ಲದಿದ್ದರೆ ಒಂದರಿಂದ ಗುಣವಾಗಬಹುದು. ಅದನ್ನು ಬಿಟ್ಟು ಅದರಲ್ಲೇನು, ಇದರಲ್ಲೇನು? ಎಂದು ಮೂಗು ಮುರಿದರೆ ಆಗುವು

ದೇನು ?" ಎಂದು ಪುರಾಣವನ್ನು ಹೇಳಿ ಒಮ್ಮೆ ಮುಗಿಸಿದಳು.

"ಅಹುದು. ಇದರಿಂದ ಹೊಸ ಅಪಾಯವೇನಿಲ್ಲ. ಒಂದು ದಿನ ಹೋಗಿ ಬಂದರಾಯಿತು. ಏನೆಂದೆ ತಾಯೀ ?" ಎಂದು ಕೇಳಿದನು.

"ಹ! ನಾನು ಇದನ್ನೇ ಹೇಳುವೆ." ಕಲ್ಯಾಣಿಯ ಮುಖವನ್ನು ನೋಡಿ ಗಂಗಮ್ಮ ನುಡಿದಳು.

"ನೀವೆಲ್ಲರು ಹೇಳಿದ ಮೇಲೆ ಹೋದರಾಯಿತು ಎನಿಸುವುದು." ಕಲ್ಯಾಣಿ ಒಪ್ಪಿಗೆಯನ್ನು ಕೊಟ್ಟಳು.

ಮಾತು ಗೆದ್ದುದಕ್ಕೆ ಗಂಗಮ್ಮನಿಗೆ ಸಂತೋಷವಾಯಿತು. ಮರುದಿನ ಮಂಗಳವಾರವಿದ್ದಿತು. ಎರಡು ಗಂಟೆಗೆ ಹೋಗುವುದೆಂದು ನಿಶ್ಚಯಿಸಿ ಮನೆಗೆ ಹೋದಳು. ಗುಣವಂತಿಗೆ ಇದನ್ನು ಹೇಳಲು ಅವಳ ಮುಖವು ಕಾದ ಎಣ್ಣೆಯಲ್ಲಿ ತೇಲಿಬಿಟ್ಟ ಸಂಡಿಗೆಯಂತೆ ಅರಳಿತು.

ಮರುದಿನ ಗಂಗಮ್ಮ—ಯಾವ ಗಾಡಿಯನ್ನು ಹಿಡಿಯಬೇಕು, ಎಲ್ಲಿ ಇಳಿಯಬೇಕು, ತಾನು ಎಲ್ಲಿ ಬಂದು ಕೂಡುವಳು ಎಲ್ಲವನ್ನೂ ಕರುಣನಿಗೆ ತಿಳಿಸಿದಳು. ಇವರೂ ಆಗಲಿ ! ಎಂದು ನುಡಿದರು

ಅಂದು ಕಲ್ಯಾಣಿ ಬೇಗನೆದ್ದಳು. ಒಲೆಗೆ ಉರಿಯನ್ನು ಹಾಕಿ ನೀರು ಕಾಸಿದಳು. ಕರುಣನು ಸ್ನಾನವನ್ನು ತೀರಿಸಿದನು. ಗಾಯತ್ರಿಯ ಜಪವನ್ನು ಮಾಡಿದನು. ಕಲ್ಯಾಣಿಯು ಮೈ ತೊಳೆದು ಅಡಿಗೆಗೆ ಕುಳಿತಳು. ಬೇಗನೆ ಅಡಿಗೆಯನ್ನು ಮಾಡಿದಳು. ತಂದೆ-ಮಗನು ಊಟವನ್ನು ತೀರಿಸಿದರು. ಕಲ್ಯಾಣಿಯೂ ತನ್ನ ಊಟವನ್ನು ಮುಗಿಸಿದಳು. ಎಲೆ–ಗೋಮಯವನ್ನು ಮಾಡಿ ಪಾತ್ರೆಗಳನ್ನು ಬಚ್ಚಲ ಹತ್ತಿರ ಇಟ್ಟು ದೇವರ ಮುಂದೆ ದೀಪವನ್ನು ಹಚ್ಚಿದಳು. ಎಲ್ಲ ಸಿದ್ಧತೆಯಾಯಿತು. ಕರುಣನು ಕರಿಯ ಕಣ್ಣಿನ ಎರಡು ಕಾಯಿಗಳನ್ನು ತಂದನು. ಬಾಳೆಯಹಣ್ಣು, ನಿಂಬೆಯಹಣ್ಣು, ಊದಿನ ಕಡ್ಡಿಗಳನ್ನು ಗಂಗಮ್ಮನು ಹೇಳಿದಂತೆ ತಂದನು. ಒಂದು ಚೀಲದಲ್ಲಿ ಎಲ್ಲವನ್ನು ಹಾಕಿಕೊಂಡನು. ಗುರುಗಳು ಕರುಣನ ಕೈಯಲ್ಲಿ ಕೆಲವು ರೂಪಾಯಿಗಳನ್ನು ಕೊಟ್ಟರು. ಮಧ್ಯಾಹ್ನದ ಎರಡು ಗಂಟೆಯಾಯಿತು. ಗಂಗಮ್ಮ ಬೇಗನೆ ಬರಲು ತಿಳಿಸಿದ್ದಳು. —ಸ್ವಾಮಿಯು ಸರದಿಯಂತೆ ದೆವ್ವಗಳನ್ನು ಬಿಡಿಸುವನು. ತಡಮಾಡಿ ಬಂದರೆ ನಮ್ಮ ಸರದಿಗೆ ಸಂಜೆಯಾಗುವುದು.

ತಿರುಗಿ ಬರಲು ಮೋಟಾರು ಸಿಕ್ಕಲಿಕ್ಕಿಲ್ಲ ಎಂದು ಎಚ್ಚರಿಸಿದ್ದಳು. ಅದಕ್ಕೆ ಬೇಗನೆ ಹೋರಡುವುದು ಒಳ್ಳೆಯದೆಂದು ಕರುಣನು ಅವಸರ ಮಾಡಹತ್ತಿದನು. ಕೊನೆಗೆ ಹೊರಟರು. ಗುರುಗಳು ಬಾಗಿಲ ವರೆಗೆ ಅವರಿಬ್ಬರನ್ನು ಕಳಿಸಲು ಬಂದರು. ಮನೆಯಿಂದ ಬೀದಿಗೆ ಬಂದರು. ಮೂರು–ನಾಲ್ಕು ಓಣಿಗಳನ್ನು ದಾಟಿದರು. ಊರ ಹೊರಗೆ ಬಂದರು. ಮೋಟರು ಬಂದು ನಿಂತಿದ್ದಿತು. ಹತ್ತಿ ಒಳಗೆ ಕುಳಿತರು. ಗಂಟೆಯಾಗಲು ಗಾಡಿಯು ಸಾಗಿತು.

ಮನೆಯಲ್ಲಿ ಗುರುಗಳು ಒಬ್ಬರೇ ಉಳಿದರು.

ಎರಡು ತಾಸಿನ ಮೇಲೆ ಗುಣವಂತಿಯು ಹಿತ್ತಲ ಕಡೆಗೆ ಬಂದು ಬಾಗಿಲನ್ನು ಬಡಿಯ ಹತ್ತಿದಳು. ಗುರುಗಳಿಗೆ ಕೇಳಬರಲಿಲ್ಲ. —ಕರುಣಪ್ಪ! ಎಂದು ಒದರಿದಳು. ಗುರುಗಳು ವಿಚಾರ ಚಕ್ರದಿಂದ ಎದ್ದು ಬಾಗಿಲನ್ನು ತೆರೆದರು. ಅವರ ಆರಾಧ್ಯ ದೇವತೆ, ರಂಭೆ ಒಳಗೆ ಮುಗುಳು ನಗೆಯಿಂದ ಕಾಲಿಡುತ್ತ ಬಾಗಿಲನ್ನು ಇಕ್ಕಿದಳು. ಗುರುಗಳೂ ಹಲ್ಲು ತೋರಿಸಿದರು.

"ಅವರು ಹೋಗಿರುವರಲ್ಲವೇ ?" ಎಂದು ಕೇಳಿದಳು.

"ಅಹುದು. ಹೋಗಿರುವರು." ಎಂದು ಒಳಗೆ ಬಂದರು.

"ಹಿಂದಿನಿಂದ ಗುಣವಂತಿಯು ಬರುತ್ತ—ನನಗೆ ಗೊತ್ತು. ಹೋಗಲೇ ಬೇಕಿದ್ದಿತು."

"ಏಕೆ ?"

"ಏಕೆಂದರೇನು ? ನನ್ನ ಹಂಚಿಗೆ ಎಂದಿಗೂ ಸುಳ್ಳಾಗದು." ಎಂದು ನುಡಿಯುತ್ತ ಅಡಿಗೆಯ ಮನೆಗೆ ಬಂದರು.

"ನೀನು ಹೂಡಿದ ಹಂಚಿಕೆ ಏನು ?"

"ಹ ! ಇದರಲ್ಲಿ ಸಂಶಯವೇನು ?"

"ದೆವ್ವ ಬಿಡಿಸುವುದು ಸುಳ್ಳೇ ?"

"ಅದೂ ಸುಳ್ಳಲ್ಲ. ತಾಯಿಯೂ ಹೋಗಿರುವಳು. ಆ ಕೆಲಸವೂ ಆದೀತು. ನನ್ನ ಕೆಲಸ ಬೇರೊಂದು ಇದ್ದಿತು."

"ಏನು ?"

"ನಿಮಗೆ ಏನೆಂದು ಹೇಳಬೇಕು !" ಎಂದು ಕೈ ಹಿಡಿದಳು.

ಗುರುಗಳ ಕೈ ಹಸಿಯಾಗಿದ್ದುವು. ಗಟ್ಟಿಯಾಗಿ ಅದನ್ನು ಅದುಮಿ

ಬಿಟ್ಟಳು. ಗುರುಗರು ಅವಳನ್ನು ಮಂಕಾಗಿ ನೋಡುತ್ತಿದ್ದರು.

ಗುಣವಂತಿಯು ಇಂದು ನಿತ್ಯದಕ್ಕಿಂತಲೂ ಸುಂದರಿಯಾಗಿ ಬಂದಿದ್ದಳು ಎಣ್ಣೆ ಹಚ್ಚಿ ಕೂದಲನ್ನು ಓರಣದಿಂದ ಹಿಕ್ಕಿ ಕಟ್ಟಿಕೊಂಡಿದ್ದಳು. ಹಳೆಯ ಯಜಮಾನನು ತಂದು ಕೊಟ್ಟ ಅತ್ತರು ಒಂದಿಷ್ಟು ಉಳಿದಿದ್ದಿತು. ಅದನ್ನು ತಲೆಗೆ ಸವರಿಕೊಂಡಿದ್ದಳು. ಹಿತ್ತಲೊಳಗಿನ ಮಲ್ಲಿಗೆಯ ಹೂಗಳನ್ನು ಹರಿದು ಮಾಲೆ ಕಟ್ಟಿ ಹೆರಲಿಗೆ ಹಾಕಿಕೊಂಡಿದ್ದಳು. ಸೆರಗು ಹೊತ್ತಿದ್ದರಿಂದ ಕಾಣು ತ್ತಿರಲಿಲ್ಲ. ಆದರೆ ಅದರ ಅಸ್ತಿತ್ವದ ಸೂಚನೆಯು ಗಮುಗಮು ವಾಸನೆ ಗುರು ಗಳ ಮೂಗಿಗೆ ಹರಿದು ಬರುತ್ತಿದ್ದಿತು. ಕರಿಯ ಚಂದ್ರಕಾಳಿಯ ಸೀರೆಯನ್ನು ಉಟ್ಟಿದ್ದಳು. ಶಹಪೂರಿನ ಬಟ್ಟಂಚಿನ ರೇಸಿಮೆಯ ಖಣದ ಕುಪ್ಪಸವನ್ನು ತೊಟ್ಟಿದ್ದಳು. ಕರಿಯ ಸೀರೆಗೆ ಆ ಕೆಂಪು ಕುಪ್ಪಸವು ಎದ್ದು ಕಾಣುತ್ತಿದ್ದಿತು. ಬೂದಿಗಪ್ಪಿನ ಮೈಗೆ ಆ ಬಟ್ಟೆ ಸುಂದರವಾಗಿ ಕಾಣುತ್ತಿದ್ದುವು. ತಾಂಬೂಲ ತಿಂದು ತುಟಿಗಳನ್ನು ತೊಂಡಿಯ ಹಣ್ಣುಗಳನ್ನಾಗಿ ಮಾಡಿ ಕೊಂಡಿದ್ದಳು. ಕಣ್ಣಿಗೆ ಕಾಡಿಗೆಯನ್ನು ಹಚ್ಚಿಕೊಂಡಿದ್ದಳು. ಆದರಿಂದ ಅವು ಗಾತ್ರದಲ್ಲಿ ಭ್ರಮರಗಳನ್ನು ನಾಚಿಸುತ್ತಿದ್ದುವು. ಗುರುಗಳ ಕೂಡ ಏಕಾಂತ, ಪರಂಮೈ ಕಾಂತ ಸಿಕ್ಕಿತೆಂದು ಹರ್ಷ ರೋಮ ರೋಮುಗಳಲ್ಲಿ ಚಿಮ್ಮಿ ಮೈ ಪುಲಿಕಿತ ವಾಗಿದ್ದಿತು. ಈ ಹರ್ಷಭಾರವು ಮುಖದ ತುಂಬ ಹಬ್ಬಿ ಕಣ್ಣು, ಕೆನ್ನೆ, ಮೂಗು, ತುಟಿ, ಹುಬ್ಬು, ಹಣೆಗಳಲ್ಲಿ ತುಳುಕಾಡುತ್ತಿದ್ದಿತು. ಕೈಗಳು ಕುಣಿ ದಾಡುತ್ತಿದ್ದುವು. ಎದೆಯು ಉಬ್ಬಿ, ಮುಂದೆ ಚಾಚಿ ಗುರುಗಳನ್ನು ತಟ್ಟುವ ಸ್ಥಿತಿಯಲ್ಲಿದ್ದುವು. ಆ ಸುಖದ ಪ್ರತಿಮೆಯಾದ ಗುಣವಂತಿ ಗುರುಗಳ ಎದುರು ಇಚ್ಛಾ ಮೂರ್ತಿಯಾಗಿ, ಆಶಾದೇವಿಯಾಗಿ, ಭೋಗಭಾಜ್ಯಳಾಗಿ, ಕಲ್ಲುಸಕ್ಕರೆಯಾಗಿ ನಿಂತಿದ್ದಳು. ಗುರುಗಳು ತನ್ನನ್ನು ಹಿಡಿಯಬಹುದೇ, ಮುಟ್ಟಬಹುದೇ, ಕರೆಯಹಬುದೇ, ಮುದ್ದಿಡಬಹುದೇ, ಅಪ್ಪಿಕೊಳ್ಳ ಬಹುದೇ, ಎಳೆಯಬಹುದೇ ಎಂದು ತವಕದಿಂದ, ಚಾತಕಪಕ್ಷಿಯಂತೆ ನಿಂತಿ ದ್ದಳು. ಆದರೆ ಗುರುಗಳು—

ಮನೆಯವರಾರೂ ಇಲ್ಲದ ಸಮಯದಲ್ಲಿ ಗುಣವಂತಿಯು ಬಂದುದು ಒಳ್ಳೆಯದೆಂದು ತಿಳಿದಿದ್ದರು. ಅವಳ ಬೆಚ್ಚನ್ನ ಮೈಯ ರುಚಿಯನ್ನು ಒಮ್ಮೆ ಉಂಡಿದ್ದರು. ಜೀವ ಅಂದು ಚಡಪಡಿಸಿದ್ದರೂ ಅದು ಸುಖವೆನಿಸಿದ್ದಿತು.

ಈಗ ಯಾರೂ ಇಲ್ಲ. ಆದರ ಮುಂದಿನ ಪ್ರಯತ್ನ ಅನುಕೂಲವೆಂದರು. ಆದರೆ ಶರೀರದ ಯಾವ ಇಂದ್ರಿಯವೂ ಅನುಕೂಲಿಸುವಂತೆ ಕಂಡು ಬರಲಿಲ್ಲ. ಅವಳು ಕೈ ಹಿಡಿದ ಸಮಯದಲ್ಲಿ ಕೈ ತಣ್ಣೀರಲ್ಲಿ ಎದ್ದಿದಂತೆ ಬೆವರಿಟ್ಟಿದ್ದಿತು. ಕಾಲುಗಳ ಜಂಘಾಬಲವೇ ಉಡುಗಿದ್ದಿತು. ಎದೆಯು ಒಂದೇ ಸಮನೆ ಹೊಡೆದುಕೊಳ್ಳುತ್ತಿದ್ದಿತು. ತಲೆಯು ಸ್ಥಿರವಾಗಿ ನಿಲ್ಲದಾಗಿದ್ದಿತು. ನೆತ್ತಿಯ ಕಡೆಗೆ ಓಡುವ ರಕ್ತದಿಂದ ಕಿವಿಗಳು ಬಿಸಿಬಿಸಿಯಾಗಿದ್ದುವು. ಅವುಗಳ ಸುತ್ತ ಬಿಸಿಯುಗಿಯ ಆವರಣ ಹಾಕಿದಂತೆ ಕಾಣುತ್ತಿದ್ದುವು. ತುಟಿಗಳು ಒಣಗಿದ್ದುವು. ನಾಲಗೆಯ ಮೇಲಿನ ಜೊಲ್ಲು ಅಟ್ಟಿಸಿ ಅಂಟಿನಂತಾಗಿದ್ದಿತು. ಮಾತಾಡಬೇಕೆಂದರೆ ಧ್ವನಿಯ ಪೆಟ್ಟಿಗೆಯ ಸ್ವರ ತಂತಿಗಳೆಲ್ಲ ಹರಿದು ಹೋಗಿದ್ದುವು. ಜೀವವು ಇಷ್ಟನ್ನು ತಿಳಿದುಕೊಂಡರೂ ಮನಸು ಎವೆಯಾಡಿಸದೆ ಗುಣವಂತಿಯನ್ನು ನೋಡುತ್ತಿದ್ದಿತು. ಅವಳ ಸೌಂದರ್ಯವನ್ನು ವಿಸ್ಮಯದಿಂದ ತುಂಬಿಕೊಳ್ಳುತ್ತಿದ್ದಿತು. ನೋಡಿ ನೋಡಿದಂತೆ ರಂಭೆಯಾಗಿ ಕಂಡಳು. ಮೇನಕೆಯಾಗಿ ರೂಪಾಂತರಿಸಿದಳು. ತಿಲೋತ್ತಮೆಯಾಗಿ ನಿಂತಳು. ಇಂಥ ಲೋಕೋತ್ತರ ಸುಂದರಿಯನ್ನು ನಾನು ಮುಟ್ಟುವುದೇ! ಇವಳು ಒಬ್ಬ ಸಾಲೆಯ ಗುರುವಿನ ಸ್ವಾಧೀನಳಾಗಲಿರುವಳೇ! ಏನು ಮಾಡಲಿ? ಹೇಗೆ ನಡೆಯಲಿ? ನನ್ನ ಇಂದ್ರಿಯಗಳು ನನ್ನ ಸ್ವಾಧೀನವಾಗಲೊಲ್ಲವು. ಬುದ್ಧಿಯು ತತ್ತರಿಸ ಹತ್ತಿರುವುದು! ಮನಸ್ಸು ಮುಂದೆ ಮುಂದೆ ಓಡುವುದು! ವಿವೇಕ ಹಿಂದೆ ಹಿಂದೆ ಎಳೆಯುವುದು! ಎಂಥ ಪರೀಕ್ಷೆ! ಎಂಥ ದೈವ ಪರೀಕ್ಷೆ! ಎಂಬ ವಿಚಾರದ ಗೊಂದಲದಲ್ಲಿ ಸಿಕ್ಕಿ ಲಟಿ ಪಡಿಸಿದರು. ಕ್ರಿಯಾ ಶೂನ್ಯರಾದರು. ಚೈತನ್ಯ ಹೀನರಾದರು. ಉತ್ಸಾಹವರ್ಜಿತರಾದರು.

ಗುಣವಂತಿಯು ತಡೆದು ಬಹಳ ಹೊತ್ತಾಗಿದ್ದಿತು. ಅವಳು ವ್ಯಾವಹಾರಿಕ ಜ್ಞಾನವನ್ನು ಕಳೆದುಕೊಂಡಿರಲಿಲ್ಲ. ಪ್ರಸಂಗದ ಪ್ರತಿಫಲವನ್ನು ಮರೆತಿರಲಿಲ್ಲ. ಇಂಥ ಸುಯೋಗ, ಸುಪ್ರಸಂಗ ಎಂದಿಗೂ ಸಿಕ್ಕದೆಂಬ ಅವಳ ಎಣಿಕೆ. ತನ್ನ ಮನೆಯ ಪ್ರಥಮ ಕಾರ್ಯಪೂರ್ತಿಗೆ ಅನುಕೂಲವಲ್ಲವೆಂಬ ಭಾವನೆಯಿದ್ದಿತು. ಪ್ರಸಂಗ ಹಳಯದಾಗಲಿ, ನಾಲ್ಕು ಜನರಿಗೆ ಗೊತ್ತಾಗಲಿ, ಗುರುಗಳು ಒಪ್ಪಿಕೊಳ್ಳಲಿ ಆಗ ತನ್ನ ಮನೆಯೇ ಒಳ್ಳೆಯದು ಎಂಬ ಬುದ್ಧಿ ಇನ್ನೂ ಸ್ಥಿರವಾಗಿದ್ದಿತು. ಆದರೆ ಗುರುಗಳು ಒಂದು ಹೆಜ್ಜೆ ಸಹ ಮುಂದೆ

ಇಡಲಿಲ್ಲ. ಕೈ ಮುಂದೆ ಮಾಡಲಿಲ್ಲ. ತುಟಿ ಚಾಚಲಿಲ್ಲ. ಹಸಿದು ಹಂಬಲಿಸುವ ಹೆಣ್ಣು ಎಷ್ಟು ಹೊತ್ತು ನಿಂತೀತು! ಎಷ್ಟು ವೇಳೆ ಕಾಯ್ದೀತು!—ನಡೆಯಿರಿ! ಎಂದು ರಟ್ಟೆಯನ್ನು ಹಿಡಿದು ಒಳಗೆ ತಂದಳು. ಗುರುಗಳು ಬಂದರು.

"ನಿಮ್ಮ ಮಲಗುವ ಕೋಣೆ ಯಾವದು?" ಎಂದು ಕೇಳಿದಳು.

ಗುರುಗಳು ಕೋಣೆಯ ಕಡೆಗೆ ನೋಡಿದರು.

ಕೋಣೆಗೆ ಕರೆದು ತಂದಳು. ಸುತ್ತಿದ ಹಾಸಿಗೆಯನ್ನು ಬಿಚ್ಚಿದಳು. ಗುರುಗಳನ್ನು ಹಾಸಿಗೆಯ ಮೇಲೆ ಎಳೆದಳು. ತೋಳ ಸೆರೆಯಲ್ಲಿ ಗಟ್ಟಿಯಾಗಿ ಹಿಡಿದು—ಗುರುಗಳೇ! ಎಂದಳು.

"ಹ!" ಎಂದರು.

ಕೆನ್ನೆಯ ಮೇಲೆ ತುಟಿಯೂರಿ, ಗಟ್ಟಿಯಾಗಿ ಹಿಡಿದು ಮುದ್ದಿಟ್ಟಳು ಆದರೆ ಅದಕ್ಕೆ ರುಚಿಯಿರಲಿಲ್ಲ. ಉಪ್ಪಾಗಿದ್ದಿತು. ಬೆವರು ಬಿಟ್ಟು ಉಪ್ಪುಪ್ಪಾಗಿದ್ದಿತು.

ಗುರುಗಳು ಇನ್ನೂ ಕ್ರಿಯಾಶೂನ್ಯರಿದ್ದರು. ಅವಳನ್ನು ಹಿಡಿದಿರಲಿಲ್ಲ ಮುಟ್ಟಿರಲಿಲ್ಲ. ಗುಣವಂತಿಯ ರಸದೂಟವನ್ನು ನಿರೀಕ್ಷಿಸುತ್ತಿದ್ದರು. ಕಣ್ಣುರೆಪ್ಪೆಗಳನ್ನು ಪಟಪಟ ಬಡಿಯುತ್ತ ನೋಡುತ್ತಿದ್ದರು.

ಗುಣವಂತಿಯ ಉತ್ಸಾಹ ಜನಕ ಕ್ರಿಯೆಗಳೆಲ್ಲ ವ್ಯರ್ಥವಾದುವು. ಸೌಂದರ್ಯ ಪ್ರದರ್ಶನದ ಅಂಗಾಗಳೆಲ್ಲ ಬೆಲೆಯಿಲ್ಲದುವಾದುವು. ಕ್ರೋಧ ಸಂತಪ್ತಳಾಗಿ, ಉನ್ಮತ್ತ ವಿಕಾರಿಯಾಗಿ ಗುರುಗಳನ್ನು ಹಿಂದೆ ದೂಡಿದಳು. ಅವರು ಧಾಡಿರೆಂದು ಹಾಸಿಗೆಯ ಮೇಲೆ ಬಿದ್ದರು. ಸಾವರಿಸಿಕೊಂಡು ಎದ್ದು ಕುಳಿತು ಕಣ್ಣು ತಿಕ್ಕಿಕೊಳ್ಳ ಹತ್ತಿದರು.

"ಇಷ್ಟು ದಿನಗಳ ವರೆಗೆ ಏತಕ್ಕೆ ಬೆನ್ನು ಹತ್ತಿದೆಯೋ?" ಎಂದು ಬುಸುಗುಟ್ಟುತ್ತ ಎದ್ದು ನಿಂತಳು.

ಗುರುಗಳು ಆ ಮಹಾಮಾರಿಯನ್ನು ದೈನ್ಯ ಭಾವದಿಂದ ನೋಡುತ್ತ ಸುಮ್ಮನೆ ಕುಳಿತಿದ್ದರು.

"ನೀ ಎಂಥ ಗಂಡಸೋ! ನಪುಂಸಕ! ಶಿಖಂಡಿ!" ಎಂದು ಅಬ್ಬರದಿಂದ ಬಾಗಿಲನ್ನು ತೆರೆದು ಹೊರಬಿದ್ದಳು.

ಗುಣವಂತಿಯ ಸೀರೆಯ ಒಂದು ನೆರಿಗೆ ಕದಡಿರಲಿಲ್ಲ. ತಲೆಯ ಮಾಲೆಯ ಒಂದು ಹೂ ಬಾಡಿರಲಿಲ್ಲ.

ಆದರೆ ಬಚ್ಚಲ ಹತ್ತಿರದ ಮುಂಜಾವಿನ ಪಾತ್ರೆಗಳು ಒಣಗಿ ಸೆಟೆದು ನಿಂತಿದ್ದುವು. ಇವರ ರಸಕೇಳಿಗೆ ಸಿಟ್ಟಾಗಿದ್ದುವೋ, ಗುರುಗಳ ಗಂಡುತನದ ಬಿಸಿಗೆ ಒಣಗಿದ್ದುವೋ!

---

ಮದುವೆಯಾಗಲಿರುವ ನಿಮ್ಮ ಗೆಳೆಯರಿಗೆ
ಉಡುಗೆರೆಯಾಗಿ ಕೊಡಲು ಯೋಗ್ಯವಾದ

ಓದುಗರ ಕುತೂಹಲ ಕೆರಳಿಸುವ

ಮ. ನ. ಮೂರ್ತಿಯವರ

# ಸ್ವಯಂವರ

ತ್ರಿವರ್ಣ ಮುಖಚಿತ್ರ ಒಂದೂವರೆ ರೂಪಾಯಿ

ವಸಂತಾದೇವಿ ಹಲವು ಲಕ್ಷದ ಆಸ್ತಿಗೆ ಉತ್ತರಾಧಿಕಾರಿ. ಆದರೆ ಮದುವೆ ಆದ ಹೊರತು ಈ ಆಸ್ತಿಯ ಮೇಲೆ ಅಧಿಕಾರ ಬರುವುದಿಲ್ಲ. ಇದು ತಾತನ ಉಯಿಲು. ಮರಣ ದಂಡನೆಗೆ ಗುರಿಯಾದ ಖೈದಿ ನಟೇಷನನ್ನು ಮದುವೆ ಆದಳು. ಕೇವಲ ಆಸ್ತಿ ಪಡೆಯುವುದರ ಸಲುವಾಗಿ. ಆ ಮೇಲೆ ಇವಳ ತಾಳಿ ಪುಣ್ಯವೆನಿಸಿ ಕೊಂಡೊ ಏನೋ. ಗಂಡ ಎನಿಸಿ ಕೊಂಡ ನಟೇಶ ಬಿಡುಗಡೆ ಆಗುತ್ತಾನೆ. ಈಗ ಒಲ್ಲದ ಗಂಡನೊಡನೆ ಬಾಳು ಸಾಗಿಸಬೇಕು. ಇದು ಉಯಿಲಿನ ಪ್ರಭಾವವೇ-ಈಗ ಇದು ವಿರಸ ದಾಂಪತ್ಯವಾಗಿ ರಸಮಯವಾಗುತ್ತದೆ.
ವಸಂತಾದೇವಿಗೆ ಆಸ್ತಿ ಸೇರಿತೇ ಎನ್ನುವ ವಿಸ್ಮಯಕಾರ ಕತೆ ಇದು.

**ಓದಿದರೆ ಬಹಳ ರುಚಿ—ಹೇಳಿದರೆ ಸ್ವಾರಸ್ಯ ಕಡಿಮೆ**
ಎಂದು ವಿಮರ್ಶಕರು ಹೇಳಿದ್ದಾರೆ.

**ಚಲನಚಿತ್ರವಾಗಲಿರುವ ಈ ಕತೆಯನ್ನು ಇಂದೇ ಓದಿರಿ.**
ಎಲ್ಲಾ ಕಡೆಯೂ ದೊರಯುತ್ತದೆ.

---

**ಸುದರ್ಶನ ಪ್ರಕಾಶನ, ತಾರಾನಿವಾಸ, ತಿಪಟೂರು.**